# ಕನ್ನಡದಲ್ಲಿ ಗಜಶಾಸ್ತ್ರ ಸಾಹಿತ್ಯ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ)

ಸಂಶೋಧಕರು
ಪರ್ಸುನಾಯ್ಕ ಎಲ್.ಎಸ್.

ಮಾರ್ಗದರ್ಶಕರು
ಡಾ. ಕೆ. ರವೀಂದ್ರನಾಥ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ



ಭಾಷಾ ನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೭

# ಕನ್ನಡದಲ್ಲಿ ಗಜಶಾಸ್ತ್ರ ಸಾಹಿತ್ಯ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ)



ಸಂಶೋಧಕರು
**ಪರ್ಸುನಾಯ್ಕ ಎಲ್.ಎಸ್.**

ಮಾರ್ಗದರ್ಶಕರು
**ಡಾ. ಕೆ. ರವೀಂದ್ರನಾಥ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ



ಭಾಷಾ ನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೭








**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ಹಸ್ತಪ್ರತಿಶಾಸ್ತ್ರ ವಿಭಾಗ**

**ವಿದ್ಯಾರಣ್ಯ ೫೮೩ ೨೭೬ ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ**

---

**ಡಾ. ಕೆ. ರವೀಂದ್ರನಾಥ**

ಪ್ರಾಧ್ಯಾಪಕರು


## ದೃಢೀಕರಣ ಪತ್ರ

**ಪರ್ಸುನಾಯ್ಕ ಎಲ್.ಎಸ್.** ಅವರು **"ಕನ್ನಡದಲ್ಲಿ ಗಜಶಾಸ್ತ್ರ ಸಾಹಿತ್ಯ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : ೧೧/೧೮/೧೨

ಸ್ಥಳ : ವಿದ್ಯಾರಣ್ಯ

(ಡಾ. ಕೆ. ರವೀಂದ್ರನಾಥ)

ಮಾರ್ಗದರ್ಶಕರು

# ಪ್ರಮಾಣ ಪತ್ರ

**"ಕನ್ನಡದಲ್ಲಿ ಗಜಶಾಸ್ತ್ರ ಸಾಹಿತ್ಯ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಹಸ್ತಪ್ರತಿಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ **ಡಾ. ಕೆ. ರವೀಂದ್ರನಾಥ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೧೧/೧೦/೨೦೧೭
ಸ್ಥಳ : ವಿದ್ಯಾರಣ್ಯ

**(ಪರ್ಸುನಾಯಕ ಎಲ್.ಎಸ್.)**
ಸಂಶೋಧಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಆಕರಗಳು ಹಾಗೂ ಸ್ವರೂಪ

೧.೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೨. ಅಧ್ಯಯನದ ಆಕರಗಳು ಮತ್ತು ಸ್ವರೂಪ

## ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಆಕರಗಳು ಹಾಗೂ ಸ್ವರೂಪ

### ೧.೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಕಾವ್ಯಗಳಲ್ಲಿ ಸಾಹಿತ್ಯಕೃತಿಗಳು ಮತ್ತು ಶಾಸ್ತ್ರಕೃತಿಗಳೆಂದು ಅಧ್ಯಯನದ ದೃಷ್ಟಿಯಿಂದ ವರ್ಗೀಕರಣ ಮಾಡುತ್ತೇವೆ. ಇದುವರೆಗೆ ಸಾಹಿತ್ಯಕೃತಿಗಳನ್ನು ಕುರಿತು ಹೆಚ್ಚಿನ ಅಧ್ಯಯನಗಳು ನಡೆದಿವೆ. ಆ ಪ್ರಮಾಣದಲ್ಲಿ ಶಾಸ್ತ್ರಕೃತಿಗಳ ಅಧ್ಯಯನ ನಡೆದಿರುವುದಿಲ್ಲ. ವಿಶೇಷವಾಗಿ ಸಾಹಿತ್ಯಕೃತಿಗಳಲ್ಲಿ ಕಥೆಗಳು ಪ್ರಧಾನವಾಗಿದ್ದರೆ ಶಾಸ್ತ್ರಕೃತಿಗಳಲ್ಲಿ ಬದುಕಿನ ಜೀವನಪದ್ಧತಿಗಳು ಅನಾವರಣಗೊಂಡಿರುತ್ತವೆ. ಶುದ್ಧ ವೈಜ್ಞಾನಿಕವಾದ ಜೀವಪರ ಆಲೋಚನೆಗಳಿಂದ ರಚನೆಯಾದ ಶಾಸ್ತ್ರಸಾಹಿತ್ಯ ವ್ಯಾಪಕವಾಗಿ ಕನ್ನಡದಲ್ಲಿ ಬೆಳೆದುಬಂದಿದೆ. ಮನುಷ್ಯನ ಆರೋಗ್ಯದಿಂದ ಹಿಡಿದು ಆತನ ದಿನನಿತ್ಯದ ಸಂಗಾತಿಗಳಾಗಿ ಬದುಕಿರುವ ಪ್ರಾಣಿ, ಪಶುಗಳ ಕುರಿತಾಗಿ ಶಾಸ್ತ್ರಸಾಹಿತ್ಯ ರಚನೆಯಾಗಿವೆ. ಮನುಷ್ಯನಿಗೆ ಬದುಕಲುಬೇಕಾದ ಗಾಳಿಯನ್ನು ಕುರಿತು ಪವನಶಾಸ್ತ್ರ, ನೀರನ್ನು ಕುರಿತು ಜಲಶಾಸ್ತ್ರ, ಆಹಾರವನ್ನು ಕುರಿತು ಸೂಪಶಾಸ್ತ್ರ, ವ್ಯವಸಾಯಕ್ಕೆ ಸಂಬಂಧಿಸಿದಂತೆ ಕೃಷಿಶಾಸ್ತ್ರ, ದುಡಿಮೆಯಲ್ಲಿ ಬಳಕೆಯಾಗುತ್ತಿದ್ದ ದನಕರುಗಳನ್ನು ಕುರಿತು ಗೋಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ ಮುಂತಾದ ಅನೇಕ ಲೋಕೋಪಕಾರಕವಾದ ಶಾಸ್ತ್ರಕೃತಿಗಳು ರಚನೆಯಾಗಿವೆ. ಆದರೆ ಇಂತಹ ಶಾಸ್ತ್ರಕೃತಿಗಳ ಸರ್ವೇಕ್ಷಣೆ, ಸಂಗ್ರಹ ಸಂಪಾದನೆ ಕಾರ್ಯಗಳು ತಕ್ಕಮಟ್ಟಿಗೆ ನಡೆದವಾದರೂ ಇವುಗಳ ಅಧ್ಯಯನ ವಿರಳವೆಂದೇ ಹೇಳಬೇಕು. ಪ್ರಾಯಶಃ ಕನ್ನಡ ಸಾಹಿತ್ಯದ ಆರಂಭ ಕಾಲದಿಂದ ಹಿಡಿದು ಕ್ರಿ.ಶ. ೧೧೫೦ರ ಅವಧಿಯೊಳಗೆ ನೂರಾರು ಶಾಸ್ತ್ರಕೃತಿಗಳು ರಚನೆಯಾಗಿರುವುದು ಗಮನಕ್ಕೆ ಬರುತ್ತದೆ. ಅಂತಹ ಶಾಸ್ತ್ರಕೃತಿಗಳಲ್ಲಿ ಗಜಶಾಸ್ತ್ರವು ಒಂದು.

ಆನೆಯಂತಹ ಬೃಹತ್ ಗಾತ್ರದ ಪ್ರಾಣಿಯನ್ನೇ ಪಳಗಿಸಿ ಅದರ ಉಪಯೋಗವನ್ನು ಪಡೆಯುವಷ್ಟು ಚಾಣಾಕ್ಷತೆ ಮಾನವರಲ್ಲಿತ್ತು. ಆನೆಗೆ ದೈವತ್ವವನು ಆರೋಪಿಸಿದ. ಆಕಳ ಒಂದೊಂದು ಅಂಗದೊಳಗೆ ಒಂದೊಂದು ದೈವವಿದೆ ಎಂದು ಹೇಳುವಂತೆ, ಆನೆಯ ಪ್ರತಿಯೊಂದು ಅಂಗದಲ್ಲಿಯೂ ದೇವಾನುದೇವತೆಗಳು ನೆಲೆಸಿವೆ ಎಂದು ಮಾನವರು ನಂಬಿದ ಉದಾಹರಣೆಗಳು ಸಾಕಷ್ಟು ದೊರೆಯುತ್ತವೆ. ಆನೆಯನ್ನು ದೇವೇಂದ್ರನ ವಾಹನವೆಂದೇ ಕರೆಯಲಾಗುತ್ತದೆ. ಅದೇನೇ ಇದ್ದರೂ ಆನೆ ಮನುಷ್ಯ ಸ್ವಭಾವಕ್ಕೆ ತೀರಾ ಹತ್ತಿರದ ಪ್ರಾಣಿಯಾಗಿದೆ ಎಂಬ ನಂಬಿಕೆಯಿದೆ.

ಆನೆಯು ಭೂವಾಸಿ ಪ್ರಾಣಿಗಳಲ್ಲಿ ಬೃಹತ್ತಾದುದು. ಗಾತ್ರದಲ್ಲಿ ಪ್ರಾಚೀನ ಕಾಲದ ಡೈನೋಸಾರ್‌ಗಳ ನಂತರದ ಸ್ಥಾನ ಆನೆಗೆ ಸಲ್ಲುತ್ತದೆ. ಆದಿಮಾನವರ ಗುಹಾಚಿತ್ರಗಳಲ್ಲಿ ಆನೆಯ ಚಿತ್ರ ಇರುವುದನ್ನು ಕಾಣಬಹುದು. ಅಂದರೆ ಮನುಷ್ಯ ಮತ್ತು ಆನೆಯ ಸಂಬಂಧ ತುಂಬಾ ಹಿಂದಿನಿಂದಲೂ ಇದೆ ಎಂಬುದು ಈ ಚಿತ್ರಗಳ ಮೂಲಕ ತಿಳಿದುಬರುತ್ತದೆ. ರಾಜ ಮಹಾರಾಜರ ಆಸ್ಥಾನಗಳಲ್ಲಿ ಆನೆಗಳಿಗೆ ವಿಶಿಷ್ಟ ಸ್ಥಾನವಿತ್ತು. ಪ್ರಾಚೀನ ಕಾಲದ ಶಾಸನಗಳಲ್ಲಿ ಆನೆಯ ಉಲ್ಲೇಖಗಳು, ನಾಣ್ಯಗಳಲ್ಲಿ ಆನೆಯ ಚಿತ್ರವಿರುವ ನಾಣ್ಯಗಳು ಸಿಕ್ಕಿವೆ. ಆನೆಯನ್ನು ಪೂಜ್ಯನೀಯವಾಗಿ ಕಂಡ ಮಾನವರು ತಮಗೆ ಅಸಾಧ್ಯವಾದ ಕೆಲಸಗಳನ್ನು ಮಾಡಲು ಅವುಗಳನ್ನು ಸಾಕಿದರು. ಸರ್ವಶಕ್ತವಾದ ಆನೆ ಮಾನವರ ಆಜ್ಞೆಗೆ ತಕ್ಕಂತೆ ಹೆಜ್ಜೆ ಹಾಕುವುದು, ಅವರ ಕೆಲಸಗಳನ್ನು ನಿರಂತರವಾಗಿ ನಿರ್ವಹಿಸುವುದನ್ನು ಕಾಣಬಹುದು.

ಆದಿಮಾನವರು ಆನೆಗಳನ್ನು ಕೆಮ್ಮಣ್ಣಿನಲ್ಲಿ ತೀಡಿದ ಗುಹಾಚಿತ್ರಗಳು ಹಾಗೂ ಬಂಡೆಗಳ ಮೇಲೆ ರಚಿಸಿದ ಕುಟ್ಟುಚಿತ್ರಗಳು ಕಂಡುಬರುತ್ತವೆ. ಆನೆಗಳ ಚಿತ್ರವಿರುವ ಮುದ್ರಿಕೆಗಳು, ಆನೆಯ ಮಣ್ಣಿನ ಗೊಂಬೆ, ಆನೆಯ ದಂತದ ಬಳೆಗಳು ಇತ್ಯಾದಿಗಳನ್ನು ಸಿಂಧೂ ನಾಗರಿಕತೆ ಸಂದರ್ಭದಲ್ಲಿ ಇದ್ದವೆಂಬುದನ್ನು ಸಂಶೋಧಕರು ಗುರುತಿಸಿದ್ದಾರೆ. ಆದರೆ ಮಾನವರು ಆನೆಗಳನ್ನು ಪಳಗಿಸುವ ಕಲೆ ಎಂದು ಕಲಿತರು, ಆಳರಸರ ಪ್ರಮುಖ ಭಾಗವಾಗಿ ಆನೆಗಳು ರೂಪಾಂತರಗೊಂಡ ಬಗೆ ಇತ್ಯಾದಿಗಳನ್ನು ನಿಖರವಾಗಿ ಹೇಳಲಾಗುವುದಿಲ್ಲ. ಆದರೆ ಪ್ರಾಚೀನ ಕಾಲದಿಂದಲೂ ಮಾನವರ ಹಾಗೂ ಆನೆಯ ನಡುವೆ ಅವಿನಾಭಾವ ಸಂಬಂಧವಿದ್ದಿತೆಂಬುದನ್ನು ಭಾರತೀಯ ಪ್ರಾಚೀನ ಸಾಹಿತ್ಯದ ಮೂಲಕ ತಿಳಿದುಬರುತ್ತದೆ.

ಪ್ರಾಚೀನ ರಾಜಮನೆತನದವರು ಆನೆಗೆ ಬಹುಮುಖ್ಯವಾದ ಸ್ಥಾನವನ್ನು ನೀಡಿದ್ದರು. ಗಂಗರ ರಾಜಧಾನಿ ತಲಕಾಡು ಎಂಬುದು ದಟ್ಟವಾದ ಆರಣ್ಯಗಳಿಂದ ಕೂಡಿದ್ದ ಪ್ರದೇಶವಾಗಿದ್ದು, ಇದನ್ನು ಗಜಾರಣ್ಯವೆಂದು ಪ್ರಸಿದ್ಧಿಯಾಗಿತ್ತು. ಮದಗಜ ಗಂಗಲಾಂಛನವಾಗಲು ಈ ಸಂಗತಿಯೇ ಕಾರಣವಿರಬೇಕು. ಹಾಗೂ ವಿಜಯನಗರದ ೨ನೇ ದೇವರಾಯನು 'ಗಜಬೇಂಟೆಗಾರ' ಎಂಬ ಬಿರುದನ್ನು ಹೊಂದಿದ್ದನು. ಕಲ್ಯಾಣ ಚಾಲುಕ್ಯರು ಆನೆಯ ಚಿತ್ರವಿರುವ ಚಿನ್ನ, ಬೆಳ್ಳಿ, ತಾಮ್ರ, ಲೋಹದ ನಾಣ್ಯಗಳನ್ನು ಟಂಕಿಸಿದ್ದರು. ಕೃಷ್ಣದೇವರಾಯನು ತನ್ನ ಸೈನ್ಯದಲ್ಲಿ ೧೨ ಸಾವಿರ ಆನೆಗಳನ್ನು ಕೊಂಡುಕೊಂಡನೆಂದು ಪ್ರವಾಸಿ ಅಬ್ದುಲ್ ರಜಾಕ್ ಹೇಳುತ್ತಾನೆ. ಇಡೀ ಏಷಿಯಾ ದೇಶವನ್ನು ಗೆದ್ದ ಅಲೆಕ್ಸಾಂಡರನು ಗಂಗರ ನಾಡಿನ ಮೇಲೆ ಯುದ್ಧಕ್ಕೆ ಹೋಗದೆ ಹಿಂದಿಗಿರಲು ಮುಖ್ಯ ಕಾರಣ ಆ ನಾಡಿನಲ್ಲಿದ್ದ ಗಜ ಸೈನ್ಯ ಎಂದು ಹುಯನ್‌ತ್ಸಾಂಗ್ ತಿಳಿಸುತ್ತಾರೆ. ಪ್ರಾಚೀನ ಅರಸರು ಯುದ್ಧಗಳಲ್ಲಿ ಆನೆಗಳಿಗೆ ಉಕ್ಕಿನ ತಗಡು(ಕವಚ)ಗಳನ್ನು ಹೊದಿಸಿ ಅವುಗಳ ಸೊಂಡಿಲು ಹಾಗೂ ಕೋರೆಗಳಿಗೆ ದೊಡ್ಡ ಕೂಲ್ಗತ್ತಿಗಳನ್ನು ಸಿಕ್ಕಿರಿಸುತ್ತಿದ್ದರು ಎಂದು ಅಥನೇಷಿಯಸ್ ಎಂದು ಪ್ರವಾಸಿ ತಿಳಿಸುತ್ತಾನೆ. ಈ ಎಲ್ಲಾ ಅಂಶಗಳು ಪ್ರಾಚೀನರು ಆನೆಗೆ ನೀಡಿದ ಮಹತ್ವವನ್ನು ಸ್ಪಷ್ಟಪಡಿಸುತ್ತದೆ.

ಪ್ರಾಚೀನ ಕಾಲದಲ್ಲಿ ರಾಜರ ಆಸ್ಥಾನದ ಪ್ರತಿಷ್ಠೆಯಾಗಿ ಆನೆಗಳು ಬಳಕೆಗೊಳ್ಳತೊಡಗಿದವು. ಹಾಗೆಯೇ ಯುದ್ಧಪಡೆಯ ಪ್ರಮುಖ ಅಂಗವಾಗಿದ್ದ ಆನೆಯ ಕುರಿತಾಗಿ ಮಾನವನು ಸಹಜವಾಗಿಯೇ ಅವುಗಳ ಸ್ವಭಾವ, ರೀತಿ ನೀತಿ, ಗುಣ, ಲಕ್ಷಣ, ಆರೋಗ್ಯ, ಚಿಕಿತ್ಸೆ ಇತ್ಯಾದಿಗಳನ್ನು ಅರಿತುಕೊಳ್ಳುವುದು ಅನಿವಾರ್ಯವಾಗಿತ್ತು. ಹೀಗಾಗಿ ಆನೆಯ ಆಹಾರ, ದೇಹಪ್ರಕೃತಿ, ಪೋಷಣೆ, ಆರೈಕೆಯ ರೀತಿ, ಚಿಕಿತ್ಸಾಕ್ರಮ, ತರಬೇತಿ, ನಿಯಂತ್ರಣಕ್ರಮ ಇತ್ಯಾದಿಗಳನ್ನು ಮಾನವ ತಿಳಿದುಕೊಳ್ಳಲೇಬೇಕಾಗಿತ್ತು. ಮನುಷ್ಯರು ಈ ಎಲ್ಲವನ್ನೂ ತಮ್ಮ ಅನುಭವದ ಮೂಲಕ ಕರಗತ ಮಾಡಿಕೊಂಡರು. ಹೀಗೆ ಮಾನವರ ಅನುಭವಸಾರವೇ ಶಾಸ್ತ್ರವಾಗಿ ರೂಪುಗೊಂಡಿತು. ಮನುಷ್ಯರ ಅವಶ್ಯಕತೆಗೆ, ಮುಖ್ಯವಾಗಿ ಅರಮನೆ, ಆಳರಸರಿಗೆ ಅವಶ್ಯವಾಗಿದ್ದ ಕುದುರೆ, ಆನೆ, ದನಗಳ ಗುಣ ಸ್ವಭಾವವನ್ನು ತಿಳಿಸಲ್ಪಡುವ ಶಾಸ್ತ್ರ ಗ್ರಂಥಗಳು ರೂಪಗೊಂಡವು ಎನ್ನಬಹುದು.

ಗಜಶಾಸ್ತ್ರ ಕುರಿತ ರಚನೆಯಾಗಿರುವ ಪ್ರಾಚೀನ ಶಾಸ್ತ್ರಕೃತಿಗಳಲ್ಲಿ ಮಂದ್ರ, ಭದ್ರ ಹಾಗೂ ಮೃಗ ಎಂದು ಮೂರು ವರ್ಗದ ಆನೆಗಳ ಜಾತಿಗಳನ್ನು ಗುರುತಿಸುತ್ತಾರೆ. ಹಾಗೆಯೇ ಆನೆಗಳ ಗುಣಲಕ್ಷಣ ಕುರಿತು ಶಾಸ್ತ್ರಕೃತಿಗಳು ಉಲ್ಲೇಖಿಸುತ್ತವೆ.

ಪ್ರಸ್ತುತ ಈ ಅಧ್ಯಯನವು ಕನ್ನಡ ಸಾಹಿತ್ಯದಲ್ಲಿ ನಿರೂಪಿತವಾದ ಗಜಶಾಸ್ತ್ರ ಸಾಹಿತ್ಯಕ್ಕೆ ಸಂಬಂಧಿಸಿದ ವಿವರಗಳನ್ನು ಗಮನಿಸುವುದಲ್ಲದೆ ಕನ್ನಡ ಸಾಹಿತ್ಯದಲ್ಲಿ ಪ್ರಾಸಂಗಿಕವಾಗಿ ಆನೆಗಳ ಕುರಿತು ಬಂದ ಉಲ್ಲೇಖಗಳ ಕುರಿತು ಸಮಗ್ರವಾಗಿ ಅಧ್ಯಯನ ಮಾಡುವ ಉದ್ದೇಶದಿಂದ ಕೂಡಿದೆ. ಹಾಗೆಯೇ ಆನೆಯನ್ನು ಕುರಿತು ಮನುಷ್ಯರು ಹೊಂದಿರುವ ನಂಬಿಕೆ, ಆಚರಣೆ, ವಿಧಿನಿಷೇಧಗಳು ಇತ್ಯಾದಿಗಳನ್ನು ಅರಿಯುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಬಹುತೇಕ ಸೃಜನಶೀಲ ಸಾಹಿತ್ಯ ಪ್ರಕಾರಗಳ ಕುರಿತು ಅವಲೋಕನ, ಅಧ್ಯಯನಗಳು ನಡೆದಿವೆ. ಅದರಂತೆ ಶಾಸ್ತ್ರಸಾಹಿತ್ಯದ ಅಂಗವಾದ ಭಾಷೆ, ಛಂದಸ್ಸು, ವ್ಯಾಕರಣ, ಮೀಮಾಂಸೆ, ಅಲಂಕಾರ ಮುಂತಾದ ಅನೇಕ ಪ್ರಕಾರಗಳ ಕುರಿತೂ ಅಧ್ಯಯನ ಲೇಖನಗಳು ಹೊರಬಂದಿವೆ. ಆದರೆ ಶಾಸ್ತ್ರಸಾಹಿತ್ಯದ ಅಂಗಗಳಾದ ಜ್ಯೋತಿಷಶಾಸ್ತ್ರ, ಸೂಪಶಾಸ್ತ್ರ, ಪ್ರಾಚೀನ ವೈದ್ಯಶಾಸ್ತ್ರ, ಪ್ರಾಣಿಗಳ ಗುಣ ಲಕ್ಷಣಗಳನ್ನು ತಿಳಿಸುವ ಪ್ರಾಣಿಶಾಸ್ತ್ರ ಕೃತಿಗಳ ಕುರಿತು ಅಧ್ಯಯನಗಳು ಅಷ್ಟಾಗಿ ನಡೆದಿಲ್ಲವೆಂದೇ ಹೇಳಬಹುದು. ಇತ್ತೀಚೆಗೆ ಕೃಷಿಶಾಸ್ತ್ರ, ಅಶ್ವಶಾಸ್ತ್ರ, ವೈದ್ಯಶಾಸ್ತ್ರಗಳ ಕುರಿತು ಬೆರಳೆಣಿಕೆಯಷ್ಟು ಅಧ್ಯಯನಗಳು ನಡೆದಿರುವುದನ್ನು ಕಾಣುತ್ತೇವೆ. ಆದರೆ ಗಜಶಾಸ್ತ್ರದ ಕುರಿತು ತಿಳಿಸುವ ಶಾಸ್ತ್ರಗ್ರಂಥಗಳ ಅಧ್ಯಯನವು ಕನ್ನಡದಲ್ಲಿ ಇಲ್ಲಿಯವರೆಗೂ ನಡೆದಿಲ್ಲ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಪ್ರಸ್ತಾಪಿಸಲ್ಪಟ್ಟ ಗಜಶಾಸ್ತ್ರದ ಕುರಿತಾದ ಈ ಅಧ್ಯಯನವು ಒಂದು ಉಪಯುಕ್ತ ಅಧ್ಯಯನವೆಂದು ಭಾವಿಸಬಹುದಾಗಿದೆ. ಮುಖ್ಯವಾಗಿ ಈ ಅಧ್ಯಯನದಲ್ಲಿ ಕನ್ನಡದಲ್ಲಿ ರಚನೆಗೊಂಡಿರುವ ಗಜಶಾಸ್ತ್ರದ ಉಪಲಬ್ಧ ಕೃತಿಗಳನ್ನು ಆಧರಿಸಿ ಅಧ್ಯಯನ ಮಾಡಲಾಗಿದೆ. ಕನ್ನಡ ಸಾಹಿತ್ಯಕ್ಕೆ ಹೊರತಾದ ಇತರ ಭಾಷೆಗಳ ಕೃತಿಯನ್ನು ಈ ಅಧ್ಯಯನ ವ್ಯಾಪ್ತಿಗೆ ಒಳಪಡಿಸಿರುವುದಿಲ್ಲ.

### ೧.೨. ಅಧ್ಯಯನದ ಆಕರಗಳು ಮತ್ತು ಸ್ವರೂಪ

ಗಜಶಾಸ್ತ್ರವೆಂದಾಕ್ಷಣ ಲೋಕಪ್ಯಾಯನನ ಗಜಶಾಸ್ತ್ರ ಎನ್ನುವ ಕೃತಿ ಸ್ಮರಣೆಗೆ ಬರುತ್ತದೆ. ಏಕೆಂದರೆ ಈ ಕೃತಿ ಆನೆಗಳಿಗೆ ಸಂಬಂಧಿಸಿದ ಅನೇಕ ಅಂಶಗಳನ್ನು ವಿಸ್ತೃತವಾಗಿ ವಿವರಿಸಿದ ಕೃತಿಯಾಗಿದೆ. ಆನೆಯ ಹುಟ್ಟು, ಗರ್ಭ ಧರಿಸುವ ಕ್ರಮ, ಆನೆಗಳ ಗುಣ ಸ್ವಭಾವ, ಲಕ್ಷಣ, ಆನೆಯ ಜಾತಿಗಳು, ರಾಜನಿಗೆ ಯೋಗ್ಯವಾದ ಆನೆ ಯಾವುದು ಇತ್ಯಾದಿ ವಿವರಗಳು ಈ ಕೃತಿಯಲ್ಲಿವೆ. ಆದರೆ ಈ ಕೃತಿ ಸಂಸ್ಕೃತ ಭಾಷೆಯಲ್ಲಿದೆ. ಈ

ಕೃತಿಯ ಹೊರತಾಗಿ ಆನೆಗಳ ಕುರಿತು ವಿವರಗಳನ್ನು ನೀಡುವ ಹಲವು ಕೃತಿಗಳು ಕನ್ನಡದಲ್ಲಿ ಬಂದಿವೆ. ಅಧ್ಯಯನಕ್ಕೆ ಸಂಬಂಧಿಸಿದಂತೆ ಸಾಹಿತ್ಯಿಕ ಆಕರಗಳನ್ನಾಗಿ ಪ್ರಧಾನ ಶಾಸ್ತ್ರಕೃತಿಗಳು ಮತ್ತು ಪ್ರಾಸಂಗಿಕ ಶಾಸ್ತ್ರಕೃತಿಗಳು ಮತ್ತು ಕನ್ನಡ ಕಾವ್ಯಗಳು ಮತ್ತು ದಾಖಲು ಆಕರಗಳಲ್ಲಿ ಶಾಸನಗಳು, ಪ್ರವಾಸಿಗರ ವರದಿಗಳು, ದಿನಚರಿಗಳಂತಹ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಪುರಾತತ್ವ ಆಕರಗಳಲ್ಲಿ ನಾಣ್ಯಗಳು ನೀಡುವ ಆನೆಗಳ ಕುರಿತ ಸಂಗತಿಗಳನ್ನು ಚರ್ಚಿಸಲಾಗಿದೆ. ಕನ್ನಡದಲ್ಲಿ ಆನೆಗಳ ವಿಷಯವನ್ನು ಪ್ರಮುಖವಾಗಿ ಹೊಂದಿದ ಕೃತಿಗಳೊಂದಿಗೆ ಸಾಂದರ್ಭಿಕವಾಗಿ ಆನೆಗಳ ವಿವರಗಳನ್ನು ತಿಳಿಸುವ ಪೂರಕ ಕೃತಿಗಳನ್ನು ಅಧ್ಯಯನಕ್ಕೆ ಆಕರಗಳಾಗಿ ಬಳಸಿಕೊಳ್ಳಲಾಗಿದೆ.

### ಅಧ್ಯಯನದ ಸ್ವರೂಪ

ಗಜಶಾಸ್ತ್ರದ ಕುರಿತು ಪ್ರಧಾನ ಶಾಸ್ತ್ರಕೃತಿಗಳು ಕನ್ನಡದಲ್ಲಿ ರಚನೆಯಾಗಿರುವುದು ತುಂಬಾ ಕಡಿಮೆ. ಅವುಗಳಲ್ಲಿ ಗಜಶಾಸ್ತ್ರಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ಪ್ರಮುಖ ಶಾಸ್ತ್ರಕೃತಿಗಳನ್ನು ಮತ್ತು ಆನುಷಂಗಿಕ ಶಾಸ್ತ್ರಕೃತಿಗಳ ಮೂಲಕ ಗಜಗಳ ರೀತಿ, ಸ್ವಭಾವ, ಲಕ್ಷಣ ಇತ್ಯಾದಿಗಳನ್ನು ಅರಿಯಬಹುದು. ಇವುಗಳಲ್ಲಿ ಮುಖ್ಯವಾಗಿ ಶಿವಮಾರನ ಗಜಷ್ಟಕ, ವೀರಭದ್ರರಾಜನು ಬರೆದ ಹಸ್ತಾಯುರ್ವೇದ ಟೀಕೆ, ಸೊದೆ ಸದಾಶಿವರಾಜನು ಬರೆದ ಗಜಶ್ವಾಲಕ್ಷಣ, ಮಳೆಯ ನಂದೀಶ್ವರನು ಬರೆದ ಗಜಲಕ್ಷಣ, ಟಿ.ವಿ. ವೆಂಕಟಾಚಲಶಾಸ್ತ್ರಿ ಅವರ ಗಜಶಾಸ್ತ್ರಶಬ್ದಕೋಶ ಇವುಗಳನ್ನು ಪ್ರಧಾನ ಶಾಸ್ತ್ರಕೃತಿಗಳನ್ನಾಗಿ ಅಧ್ಯಯನಕ್ಕೆ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಪ್ರಾಸಂಗಿಕ ಶಾಸ್ತ್ರಕೃತಿಗಳನ್ನಾಗಿ ಚಾವುಂಡರಾಯನ ಲೋಕೋಪಕಾರ, ಕೆಳದಿ ಬಸವರಾಜನ ಶಿವತತ್ವ ರತ್ನಾಕರ, ಚಂದ್ರರಾಜನ ಮದನ ತಿಲಕ, ಸೌಂಗಧಿಕ ಪರಿಣಯ, ಸೋಮೇಶ್ವರ ಮಾನಸೋಲ್ಲಾಸ, ಇತರೆ ಮುಂತಾದ ಕೃತಿಗಳೊಂದಿಗೆ ಸಾಂದರ್ಭಿಕವಾಗಿ ಕನ್ನಡ ಕಾವ್ಯಗಳಲ್ಲಿ ಆನೆಯ ಗುಣಲಕ್ಷಣ, ಜಾತಿ, ಪ್ರಬೇಧಗಳು, ಶುಭ-ಅಶುಭ ಗಜಗಳ ಲಕ್ಷಣ ಹಾಗೂ ರೋಗ, ಆರೈಕೆ ಕ್ರಮಗಳು ಮತ್ತು ಅದರ ತರಬೇತಿ ಕ್ರಮದ ಕುರಿತು, ಆನೆಗಳನ್ನು ಪಳಗಿಸುವುದರಲ್ಲಿ ಮಾವುತರ ಪಾತ್ರ ಹಾಗೂ ಕಾರ್ಯವೈಖರಿ ಕುರಿತು ಉಲ್ಲೇಖಗಳು ದೊರೆಯುತ್ತವೆ.

ಹಾಗೆಯೇ ಗಜಗಳ ಗುಣ-ಸ್ವಭಾವಗಳನ್ನು ತಿಳಿಸುವ ಹೊಸಗನ್ನಡದ ಗದ್ಯ ಕೃತಿಗಳು, ಗಜಶಾಸ್ತ್ರಕ್ಕೆ ಸಂಬಂಧಿಸಿದ ವಿವರಗಳನ್ನು ಒಳಗೊಂಡ ಶಾಸನಗಳು, ನಾಣ್ಯಗಳು ಹಾಗೂ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಹಾಗೂ ಜನಪದ ಸಾಹಿತ್ಯದಲ್ಲಿ ಪ್ರಸ್ತಾಪಿಸಲಾದ ಆನೆಯ ವಿವರಗಳನ್ನು ಅಧ್ಯಯನಕ್ಕೆ ಪ್ರಾಸಂಗಿಕವಾಗಿ ಬಳಸಿಕೊಳ್ಳಲಾಗಿದೆ. ಇವುಗಳೊಂದಿಗೆ

ಆನೆಯ ಕುರಿತಾಗಿರುವ ನಂಬಿಕೆ, ಆರಾಧನೆ, ಆಚರಣೆ, ವಿಧಿ-ನಿಷೇಧಗಳನ್ನು ಕೂಡ ಅವಶ್ಯವಿದ್ದಲ್ಲಿ ಬಳಸಿಕೊಂಡು ವಿಸ್ತಾರವಾದ ಸ್ವರೂಪವನ್ನು ಅಧ್ಯಯನಕ್ಕೆ ನೀಡಲಾಗಿದೆ. ಒಟ್ಟಾರೆಯಾಗಿ ಆನೆಯ ಕುರಿತಾಗಿ ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ದೊರೆತ ಮಾಹಿತಿಯನ್ನು ಕ್ರೋಡೀಕರಿಸಿ ಅಧ್ಯಯನವು ಪರಿಪೂರ್ಣವಾಗುವಂತೆ ಮಾಡುವ ಆಶಯವು ಈ ಅಧ್ಯಯನದ ಸ್ವರೂಪವಾಗಿದೆ.

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಇತ್ಯಾದಿಗಳನ್ನು ವಿವರಿಸಲಾಗಿದೆ. ಆನೆಗಳ ಕುರಿತಾಗಿ ಕನ್ನಡ ಸಾಹಿತ್ಯದಲ್ಲಿ ಬಂದ ಪ್ರಧಾನ ಶಾಸ್ತ್ರಕೃತಿಗಳು, ಪ್ರಾಸಂಗಿಕ ಶಾಸ್ತ್ರಕೃತಿಗಳು ಹಾಗೂ ಕನ್ನಡ ಕಾವ್ಯಗಳು, ದಾಖಲು ಆಕರಗಳು ಮತ್ತು ಪುರಾತತ್ವ ಆಕರಗಳನ್ನು ಈ ಅಧ್ಯಯನಕ್ಕೆ ಆಕರ ಪರಿಕರಗಳಾಗಿ ಬಳಕೆ ಮಾಡಿಕೊಂಡು ಒಂದು ಸಮಗ್ರ ಚೌಕಟ್ಟನ್ನು ಒದಗಿಸಲಾಗಿದೆ.

ಕನ್ನಡ ಲೌಕಿಕಶಾಸ್ತ್ರ ಸಾಹಿತ್ಯ ಲಕ್ಷಣ ಹಾಗೂ ಸಮೀಕ್ಷೆ ಎಂಬ ಎರಡನೇ ಅಧ್ಯಾಯದಲ್ಲಿ ಕನ್ನಡ ಶಾಸ್ತ್ರಸಾಹಿತ್ಯದ ಅರ್ಥಸ್ವರೂಪ ಹಾಗೂ ಪರಂಪರೆಯನ್ನು ಕುರಿತು ಚರ್ಚಿಸಲಾಗಿದೆ. ಲೌಕಿಕ ಸಾಹಿತ್ಯದ ಹುಟ್ಟು ಬೆಳವಣಿಗೆಯನ್ನು ವಿವಿಧ ಸಾಹಿತ್ಯ ಕೃತಿಗಳ ಹಿನ್ನೆಲೆಯಲ್ಲಿ ನಿರೂಪಿಸಲಾಗಿದೆ. ಶಾಸ್ತ್ರಸಾಹಿತ್ಯವನ್ನು ಪ್ರಮುಖವಾಗಿ ಲೌಕಿಕ ಹಾಗೂ ಆಗಮಿಕ ಎಂದು ವರ್ಗೀಕರಿಸಿಕೊಂಡು ಲೌಕಿಕ ಸಾಹಿತ್ಯ ಸ್ವರೂಪ ಮತ್ತು ಆ ಸಾಹಿತ್ಯದ ಸಮಾಜಮುಖಿ ಅಂಶವನ್ನು ಅರಿಯುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಇದೇ ಅಧ್ಯಾಯದಲ್ಲಿ ಕನ್ನಡ ಲೌಕಿಕಶಾಸ್ತ್ರ ಸಾಹಿತ್ಯ ಕೃತಿಗಳನ್ನು ಸ್ಥೂಲವಾಗಿ ಸಮೀಕ್ಷಿಸಲಾಗಿದೆ. ನಿದರ್ಶನಕ್ಕೆ ಜ್ಯೋತಿಷ್ಯಶಾಸ್ತ್ರ, ವೈದ್ಯಶಾಸ್ತ್ರ, ಪಶುವೈದ್ಯ, ಸೂಪಶಾಸ್ತ್ರ, ಖಡ್ಗ, ಕೃಷಿಶಾಸ್ತ್ರ ಇತ್ಯಾದಿ ಶಾಸ್ತ್ರಸಾಹಿತ್ಯದ ಕೃತಿಗಳನ್ನು ಅಧ್ಯಯನಕ್ಕೆ ಪೂರಕವಾಗಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಗಜಶಾಸ್ತ್ರ ಸಾಹಿತ್ಯದ ಆಕರಗಳನ್ನು ವಿವರಿಸಲಾಗಿದೆ. ಇಲ್ಲಿ ಸಾಹಿತಸಾಹಿತ್ಯದ ದಾಖಲಾತ್ಮಕ ಹಾಗೂ ಪುರಾತತ್ವ ನೆಲೆಗಳಲ್ಲಿ ಲಭ್ಯವಿರುವ ಗಜಸಂಬಂಧಿ ಉಲ್ಲೇಖಗಳನ್ನು ಆಕರಗಳೆಂದು ಪರಿಗಣಿಸಲಾಗಿದೆ. ಸಾಹಿತ್ಯಿಕ ಆಕರಗಳಲ್ಲಿ ಗಜಶಾಸ್ತ್ರ ಕುರಿತು ಪ್ರಧಾನ ಕೃತಿಗಳು ರಚನೆಯಾಗಿರುವುದು ತುಂಬಾ ಕಡಿಮೆ. ಪ್ರಧಾನ ಕೃತಿಗಳಾಗಿ ಕ್ರಿ.ಶ. ೮೦೦ರಲ್ಲಿದ್ದ ಸೈಗೊಟ್ಟ ಶಿವಮರನ ಗಜಾಷ್ಟಕ, ಕ್ರಿ.ಶ. ೧೬ರಲ್ಲಿ ಜೀವಿಸಿದ್ದ ವೀರಭದ್ರ ರಾಜನು ಬರೆದ ಹಸ್ತಾಯುರ್ವೇದ ಟೀಕೆ, ಸ್ವಾದಿ ಸದಾಶಿವರಾಜನು ಬರೆದ ಗಜಶ್ವಲಕ್ಷಣ ಮತ್ತು ೧೮ನೇ ಶತಮಾನದಲ್ಲಿ ಗುರುನಂದೀಶ್ವರ ಬರೆದ ಗಜ ಲಕ್ಷಣ

ಹಾಗೂ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರ ಸಂಪಾದನೆ ಕೃತಿಯಾದ ಗಜಶಾಸ್ತ್ರ ಶಬ್ದಕೋಶ ಪ್ರಸ್ತುತ ಅಧ್ಯಯನದ ಪ್ರಧಾನ ಕೃತಿಗಳಾಗಿವೆ. ಪ್ರಾಸಂಗಿಕವಾಗಿ ರಚನೆಯಾಗಿರುವ ಚಾವುಂಡರಾಯನ ಲೋಕೋಪಕಾರ, ಸೌಗಂಧಿಕಾ ಪರಿಣಯ, ಮಾನಸೋಲ್ಲಾಸ, ಚಂದ್ರರಾಜನ ಮದನ ತಿಲಕ, ಶಿವತತ್ವ ರತ್ನಾಕರದಂತ ಕೃತಿಗಳಲ್ಲಿ ಒಂದು ಅಥವಾ ಎರಡು ಅಧ್ಯಾಯಗಳನ್ನು ಗಜಶಾಸ್ತ್ರಕ್ಕೆ ಮೀಸಲಿರಿಸಿದ್ದಾರೆ. ಉಳಿದಂತೆ ಕನ್ನಡ ಕಾವ್ಯ ಪುರಾಣಗಳಲ್ಲಿ ಆನೆಯ ಉಲ್ಲೇಖಗಳು, ಯುದ್ಧ ವರ್ಣನೆಯಲ್ಲಿ ಕಂಡುಬರುವುದು ಸಹಜ. ಈ ಎಲ್ಲಾ ಮಾಹಿತಿಗಳನ್ನು ಸಾಹಿತ್ಯಿಕ ಆಕರಗಳಲ್ಲಿ ಚರ್ಚಿಸಲಾಗಿದೆ ಮತ್ತು ಸಾಹಿತ್ಯದ ದಾಖಲಾತ್ಮಕ ಆಕರಗಳನ್ನಾಗಿ ಶಾಸನಗಳು, ದಿನಚರಿಗಳು, ಪ್ರವಾಸಿಗರ ವರದಿಗಳು, ಆನೆಗಳ ಕುರಿತು ಅವುಗಳ ಬೆಲೆ ಮತ್ತು ಮಾವುತರ ಕೈಸಂಬಳ, ಗಜವೈದ್ಯರ ನೇಮಕಾತಿ ಇತ್ಯಾದಿ ಸಂಗತಿಗಳನ್ನು ಕೃಷ್ಣದೇವರಾಯ ದಿನಚರಿಯಂತಹ ದಾಖಲೆಗಳು ಮಾಹಿತಿ ನೀಡುತ್ತವೆ. ಪ್ರವಾಸಿಗರ ವರದಿಗಳಲ್ಲಿ ಮಾಹಿತಿ ನೀಡುತ್ತವೆ. ಪ್ರಸ್ತಾಪಗಳು ಕಂಡುಬರುತ್ತವೆ. ಎಲ್ಲಾ ವರದಿಗಳ ಆಶಯವನ್ನು ಕ್ರೋಡೀಕರಿಸಿ ಆಕರಗಳನ್ನು ಸಮೀಕ್ಷಿಸಲಾಗಿದೆ. ಗುಡಿ, ಗುಂಡಾರಗಳಲ್ಲಿ ಆನೆಗಳ ಕುರಿತು ಉಬ್ಬು ಶಿಲ್ಪಗಳು ಕಂಡುಬರುತ್ತವೆ. ಅದೇ ರೀತಿ ಪುರಾತತ್ವ ಆಕರಗಳಲ್ಲಿ ನಾಣ್ಯಗಳು ಆನೆಗಳ ಚಿತ್ರಗಳನ್ನೊಳಗೊಂಡಿರುವುದನ್ನು ಗಮನಿಸಿದರೆ ಈ ಪ್ರಾಣಿ ಬಹು ಉಪಯೋಗಿಯಾಗಿರುವುದು ಕಂಡುಬರುತ್ತದೆ. ಬಹುಶಃ ಶಿಲ್ಪಗಳಲ್ಲಿ ಪ್ರಾದೇಶಿಕವಾಗಿ ವಿಜಯನಗರ ಅರಸರ ಕಾಲದಲ್ಲಿ ಹೆಚ್ಚು ಕಂಡುಬರುವುದರಿಂದ ಆ ಕಾಲದಲ್ಲಿ ಆನೆಗಳ ಬಳಕೆ ಇರುವುದನ್ನು ಗಮನಿಸಬಹುದು. ಈ ಎಲ್ಲಾ ಆಕರಗಳ್ನು ಪುರಾತತ್ವದ ನೆಲೆಯಲ್ಲಿ ನಿರೂಪಿಸುವ ಪ್ರಯತ್ನವನ್ನು ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯ ಆನೆಗಳ ವೈಶಿಷ್ಟ್ಯವನ್ನು ಕುರಿತು ಚರ್ಚಿಸಲಾಗಿದೆ. ಇಲ್ಲಿ ಆನೆಗಳ ಹುಟ್ಟು–ಬೆಳವಣಿಗೆ, ಗಜಲಕ್ಷಣ, ಶುಭ ಅಶುಭ ಆನೆಗಳು, ಗಜಜಾತಿ ಗುಣಪ್ರಭೇದ ಹಾಗೂ ಅವುಗಳ ರೋಗ ರುಜಿನ ಮತ್ತು ಆರೈಕೆಯನ್ನು ಕುರಿತು ಶಾಸ್ತ್ರಕೃತಿಗಳಲ್ಲಿ ಉಲ್ಲೇಖವಾದ ಸಂಗತಿಗಳನ್ನು ನಿರೂಪಿಸುವುದಾಗಿದೆ. ಆನೆಗಳಲ್ಲಿ ಮಂದ, ಭದ್ರ, ಮೃಗ ಮುಂತಾದ ಬಗೆಗಳನ್ನು ಹೇಳುವ ಶಾಸ್ತ್ರಕಾರರು ಇವುಗಳ ಗುಣಾವಗುಣಗಳನ್ನು ಉಪಯೋಗವನ್ನು ವಿವರಿಸಿದ್ದಾರೆ. ಹಾಗೆಯೇ ಗಜವೈದ್ಯ ಮತ್ತು ಮಾವುತರ ಪಾತ್ರವನ್ನು ಕುರಿತಾಗಿ ಇಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ಕರ್ನಾಟಕದಲ್ಲಿ ಗಜಸಂಸ್ಕೃತಿ ಕುರಿತು ವಿವರಗಳಿವೆ. ಇದರಲ್ಲಿ ಆನೆಗಳ ಕುರಿತು ಇರುವ ನಂಬಿಕೆ, ಆಚರಣೆ, ವಿಶೇಷವಾಗಿ ಕರ್ನಾಟಕದಲ್ಲಿ ನಾಡಹಬ್ಬವನ್ನಾಗಿ

ಆಚರಿಸುವ ಮೈಸೂರು ದಸರಾ ಹಬ್ಬದ ಆಚರಣೆಯಲ್ಲಿ ಪ್ರಮುಖ ಜಂಬೂಸವಾರಿಯಲ್ಲಿ ಆನೆಗಳು ವಹಿಸುವ ಪಾತ್ರ ಹಾಗೂ ಸಂಪ್ರದಾಯ ಮತ್ತು ವಿಧಿ–ನಿಷೇಧಗಳನ್ನು ವಿವರಿಸಲಾಗಿದೆ.

ಕೊನೆಯ ಸಮಾರೋಪದಲ್ಲಿ ಪ್ರಸ್ತುತ ಕನ್ನಡದಲ್ಲಿ ಗಜಶಾಸ್ತ್ರ ಸಾಹಿತ್ಯ ಅಧ್ಯಯನದ ಒಟ್ಟಾರೆ ಆಶಯ ಮತ್ತು ಫಲಶ್ರುತಿಗಳನ್ನು ಫಲಿತಗಳ ರೂಪದಲ್ಲಿ ನೀಡಲಾಗಿದೆ. ಅನುಬಂಧದಲ್ಲಿ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ಕೊಡಲಾಗಿದೆ.

ಒಟ್ಟಾರೆ ಕನ್ನಡ ಲೌಕಿಕಶಾಸ್ತ್ರ ಸಾಹಿತ್ಯ ಮಾಲಿಕೆಯಲ್ಲಿ ಗಜಶಾಸ್ತ್ರ ಸಾಹಿತ್ಯದ ಆಶಯ ಮತ್ತು ಮಹತ್ವವನ್ನು ನಿರೂಪಿಸುವ ಮಹಾಪ್ರಬಂಧವೇ ಕನ್ನಡದಲ್ಲಿ ಗಜಶಾಸ್ತ್ರ ಸಾಹಿತ್ಯ ಅಧ್ಯಯನವಾಗಿದೆ.

## ಅಧ್ಯಾಯ ಎರಡು

# ಕನ್ನಡ ಲೌಕಿಕ ಶಾಸ್ತ್ರಸಾಹಿತ್ಯ ಲಕ್ಷಣ ಹಾಗೂ ಸಮೀಕ್ಷೆ

ಅಧ್ಯಾಯ ಎರಡು

# ಕನ್ನಡ ಲೌಕಿಕ ಶಾಸ್ತ್ರಸಾಹಿತ್ಯ ಲಕ್ಷಣ ಹಾಗೂ ಸಮೀಕ್ಷೆ

ಹಳಗನ್ನಡ ಹಾಗೂ ನಡುಗನ್ನಡದ ಸಾಹಿತ್ಯ ಪರಂಪರೆಯನ್ನು ಗಮನಿಸಿದಾಗ ಆ ಕಾಲದ ಸಾಹಿತಿಗಳು, ಕಾವ್ಯ ಪರಂಪರೆಗೆ ಹೆಚ್ಚಿನ ಆದ್ಯತೆಯನ್ನು ನೀಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಕಾವ್ಯದೊಳಗೆ ಕವಿ ತನ್ನ ಕಲ್ಪನಾವಿಚಾರಗಳನ್ನು ಹೊರಹೊಮ್ಮಿಸಲು ಹೆಚ್ಚಿನ ಅವಕಾಶಗಳಿರುತ್ತವೆ. ಹೀಗಾಗಿ ಆ ಕಾಲದ ಸಾಹಿತಿಗಳು ಹೆಚ್ಚಾಗಿ ಕಾವ್ಯ ಪರಂಪರೆಗೆ ತಮ್ಮ ನಿಷ್ಠೆಯನ್ನು ತೋರಿಸಿರುವುದು ಕಂಡುಬರುತ್ತದೆ. ಆದರೆ ಶಾಸ್ತ್ರ ಸಾಹಿತ್ಯದಲ್ಲಿ ಸಾಹಿತಿಗೆ ಹೆಚ್ಚಿನ ಸ್ವಾತಂತ್ರ್ಯ ಇರುವುದಿಲ್ಲ. ತಾನು ಯಾವ ವಿಷಯದ ಕುರಿತು ವಿಶ್ಲೇಷಿಸಬೇಕಾಗಿರುತ್ತದೋ ಆ ವಿಷಯದ ಕುರಿತು ಸಾಹಿತಿಯಾದವನು ಹೆಚ್ಚು ನಿಷ್ಠವಾಗಿರಬೇಕಾಗುತ್ತದೆ. ಇಲ್ಲಿ ಕಲ್ಪನಾಲೋಕಕ್ಕೆ ಅವಕಾಶವಿರುವುದಿಲ್ಲ. ಹೀಗಾಗಿ ಕಾವ್ಯಗಳು ರಂಜನೆ ನೀಡಿದಂತೆ ಶಾಸ್ತ್ರ ಕೃತಿಗಳು ರಂಜನೆ ನೀಡಲಾರವು. ಹೀಗಾಗಿಯೇ ಹಿಂದಿನ ಸಾಹಿತಿಗಳು ಕಾವ್ಯಕ್ಕೆ ನೀಡಿದ ಮಹತ್ವವನ್ನು ಶಾಸ್ತ್ರ ಸಾಹಿತ್ಯಕ್ಕೆ ನೀಡಿಲ್ಲವೆನಿಸುತ್ತದೆ.

ಕಾವ್ಯಪರಂಪರೆಗೆ ಮೊದಲ ಆದ್ಯತೆಯನ್ನು ನೀಡಿದ ಸಾಹಿತಿಗಳು ನಂತರದ ಸ್ಥಾನವನ್ನು ಶಾಸ್ತ್ರಪರಂಪರೆಯ ಸಾಹಿತ್ಯಕ್ಕೆ ನೀಡಿದರು. ಈ ನಿಟ್ಟಿನಲ್ಲಿ ಶಾಸ್ತ್ರಸಾಹಿತ್ಯಕ್ಕೆ ಆದ್ಯತೆಯನ್ನು ನೀಡಿದ ಮೊದಲ ಸಾಹಿತಿ ಚಾವುಂಡರಾಯ. ಇವನು ತನ್ನ ಲೋಕೋಪಕಾರ ಗ್ರಂಥದಲ್ಲಿ ಹಲವು ವಿಷಯಗಳ ಕುರಿತು ಶಾಸ್ತ್ರಬದ್ಧವಾಗಿ ಚರ್ಚಿಸಿದ್ದಾನೆ. ಇದು ಮುಂದಿನ ಶಾಸ್ತ್ರ ಸಾಹಿತ್ಯ ಕೃತಿಕಾರರಿಗೆ ಪ್ರೇರಣೆಯನ್ನೊದಗಿಸಿದ ಕೃತಿಯೆಂದರೆ ತಪ್ಪಾಗಲಾರದು.

'ಕ್ರಿ.ಶ. ೧೦ನೇ ಶತಮಾನದಿಂದ ೧೨ನೇ ಶತಮಾನದ ಅಂತ್ಯದವರೆಗೂ ಶಾಸ್ತ್ರಕೃತಿಗಳ ರಚನೆ ಅಗಾಧ ಪ್ರಮಾಣದಲ್ಲಿ ಬೆಳೆದುಬಂದಿತು. ಕನ್ನಡ ಸಾಹಿತ್ಯದ ಒಂದು ಭಾಗ

ಶಾಸ್ತ್ರಸಾಹಿತ್ಯ ಎಂಬ ವಿಚಾರ ಅಂದಿನ ಕವಿಗಳಿಗೆ ಮತ್ತು ಶಾಸ್ತ್ರಕಾರರಿಗೆ ಮನದಟ್ಟಾದ ಹಿನ್ನೆಲೆಯಲ್ಲಿ ಶಾಸ್ತ್ರಸಾಹಿತ್ಯ ಪ್ರಕಾರಕ್ಕೆ ಹೆಚ್ಚಿನ ಮನ್ನಣೆ ಸಿಕ್ಕಿತು'[೧] ಎಂದು ಕಲ್ಲಯ್ಯ ಹಿರೇಮಠ ಅವರು ತಮ್ಮ ಪಿಎಚ್.ಡಿ. ಮಹಾಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ. ಶಾಸ್ತ್ರಸಾಹಿತ್ಯವೆಂಬುದು ಕೇವಲ ಒಂದು ಶಾಸ್ತ್ರಕ್ಕೆ ಸಂಬಂಧಿಸಿದಂತೆ ಸೀಮಿತ ಅರ್ಥದಲ್ಲಿ ಬಳಕೆಗೊಂಡಿಲ್ಲ. ಇದರೊಳಗೆ ಕ್ರಮಬದ್ಧವಾಗಿ, ಶಾಸ್ತ್ರೀಯವಾಗಿ ತಿಳಿಸುವ ಎಲ್ಲಾ ವಿಷಯಗಳನ್ನು ಶಾಸ್ತ್ರ ಸಾಹಿತ್ಯವೆಂದೇ ಪರಿಗಣಿಸಲಾಗುತ್ತದೆ. ಅಲಂಕಾರ, ವ್ಯಾಕರಣ, ವೈದ್ಯ, ಜ್ಞಾನಕೋಶ, ಶಬ್ಧಕೋಶ, ಆಧ್ಯಾತ್ಮಿಕ ವಿಚಾರ, ಕೃಷಿ ವಿಚಾರ ಇತ್ಯಾದಿಗಳನ್ನು ತಿಳಿಸುವ ಎಲ್ಲಾ ಕೃತಿಗಳೂ ಶಾಸ್ತ್ರ ಕೃತಿಗಳೆಂದೇ ಪರಿಗಣಿತವಾಗುತ್ತವೆ. ಈ ಶಾಸ್ತ್ರಸಾಹಿತ್ಯದ ಕೃತಿಗಳನ್ನು ಲೌಕಿಕ ಶಾಸ್ತ್ರಕೃತಿಗಳು ಹಾಗೂ ಅಲೌಕಿಕ ಶಾಸ್ತ್ರಕೃತಿಗಳು ಎಂದು ವಿಭಾಗಿಸಲಾಗಿದೆ. ಭೌತಿಕ ವಿಚಾರಗಳನ್ನು ತಿಳಿಸುವ ಕೃತಿಗಳು ಲೌಕಿಕಶಾಸ್ತ್ರ ಸಾಹಿತ್ಯ ಕೃತಿಗಳಾದರೆ, ಅಧ್ಯಾತ್ಮ, ಜ್ಞಾನ, ದೇವರು, ಧರ್ಮ ಇತ್ಯಾದಿ ವಿಚಾರಗಳನ್ನು ತಿಳಿಸುವ ಕೃತಿಗಳನ್ನು ಅಲೌಕಿಕಶಾಸ್ತ್ರ ಸಾಹಿತ್ಯ ಕೃತಿಗಳೆಂದು ಪರಿಗಣಿಸಲಾಗುತ್ತದೆ.

ಕಾವ್ಯ ಲಕ್ಷಣಗಳನ್ನು ಪ್ರಸ್ತುತಪಡಿಸಿದ ಸಂಸ್ಕೃತ ಗ್ರಂಥಗಳು ಸಾಹಿತ್ಯ ಮೀಮಾಂಸಾ, ಸಾಹಿತ್ಯ ದರ್ಪಣ, ಸಾಹಿತ್ಯಸಾರ ಇತ್ಯಾದಿ ನಾಮಗಳಿಂದ ಗುರುತಿಸಲ್ಪಡುತ್ತವೆ. ಶಾಸ್ತ್ರಕೃತಿ ರಚನೆಕಾರರು ತಮ್ಮ ಶಾಸ್ತ್ರವಿಚಾರಗಳನ್ನು ಹೊರಹೊಮ್ಮಿಸಲು ಕಾವ್ಯಪ್ರಕಾರವನ್ನೇ ಹೆಚ್ಚಾಗಿ ಆಯ್ದುಕೊಂಡರು. ಪದ್ಯರೂಪದಲ್ಲಿ ಶಾಸ್ತ್ರಗ್ರಂಥಗಳಿದ್ದುದರಿಂದಾಗಿಯೇ ಶಾಸ್ತ್ರದೊಂದಿಗೆ ಸಾಹಿತ್ಯ ಎಂಬ ಪದ ತಳಕು ಹಾಕಿಕೊಂಡಿರಬೇಕು. 'ಶಿಷ್ಯರು ಶಾಸ್ತ್ರ ಜ್ಞಾನವನ್ನು ಗುರುಮುಖದಿಂದ ಕಲಿತು ಬಾಯಿಪಾಠ ಮಾಡಿ ನೆನಪಿನಲ್ಲಿರಿಸಿಕೊಳ್ಳಬೇಕಾದ ಅಗತ್ಯವಿದ್ದುದರಿಂದ ಶಾಸ್ತ್ರವಿಷಯಗಳನ್ನು ನೇರವಾಗಿ ಶ್ಲೋಕಗಳಲ್ಲಿ ರಚಿಸುವ ಪದ್ಧತಿಯನ್ನು ಶಾಸ್ತ್ರಕಾರರು ಅನುಸರಿಸುತ್ತ ಬಂದರು. ಕನ್ನಡದಲ್ಲಿಯೂ ಇದೇ ಪದ್ಧತಿ ನಡೆದುಬಂದಿತು'[೨] ಅಲಂಕಾರ ಶಾಸ್ತ್ರವನ್ನು ವಿವರಿಸುವ ರಾಜಶೇಖರನು ಶಾಸ್ತ್ರಕವಿ ಎಂದು ಒಂದು ಕಡೆ ವಿವರಿಸುತ್ತಾನೆ. ಶ್ರೀಧರಾಚಾರ್ಯ(೧೦೪೯) ಎಂಬ ಲೇಖಕ ಚಂದ್ರಪ್ರಭ ಚರಿತೆ ಹಾಗೂ ಜಾತಕ ತಿಲಕ ಎಂಬ ಕೃತಿಗಳನ್ನು ರಚಿಸಿದ್ದಾನೆ. ಇವನು ಕಾವ್ಯಕವಿತ್ವ, ಶಾಸ್ತ್ರಕವಿತ್ವ ಎಂದು ವಿವರಿಸುತ್ತಾನೆ.

ಕಾವ್ಯವು, ಅಲಂಕಾರ, ಉಪಮೆ ಉಪಮಾಗಳಿಂದ ಕೂಡಿದ್ದು ಯಾವುದೇ ಒಂದು ವಸ್ತುವನ್ನು ಆಧರಿಸಿ ರಸಾತ್ಮಕವಾಗಿ ಓದುಗನಿಗೆ ರಸಸ್ವಾದವಾಗುವಂತೆ ಮಾಡುತ್ತದೆ. ಅದು ಕಾವ್ಯಕವಿತ್ವದ ಗುಣ. ಶಾಸ್ತ್ರಕವಿತ್ವ ಹಾಗಲ್ಲ. ಪದ್ಯ ರೂಪದಲ್ಲಿದ್ದರೂ ಒಂದು ನಿರ್ಧಿಷ್ಟವಾದ

ವಿಷಯವನ್ನು ಪ್ರಸ್ತುತಪಡಿಸುವ ಗುಣ ಶಾಸ್ತ್ರಕವಿತ್ವಕ್ಕೆ ಇದೆ. ಆ ಕಾರಣಕ್ಕಾಗಿಯೇ ಶ್ರೀಧರಾಚಾರ್ಯನು ಕಾವ್ಯಕವಿತ್ವ ಹಾಗೂ ಶಾಸ್ತ್ರಕವಿತ್ವದ ಕುರಿತು ತಿಳಿಸುತ್ತಾನೆ. ಕಾವ್ಯ ಮನಸ್ಸಿನ ಭಾವನೆಗಳ ಮೇಲೆ ನಿಂತರೆ ಶಾಸ್ತ್ರವು ಬುದ್ಧಿಯ ಪಾತಳಿಯ ಮೇಲೆ ನಿಲ್ಲುತ್ತದೆ. ಕೆಲವೊಮ್ಮೆ ಬುದ್ಧಿ ಭಾವಗಳೆರಡನ್ನೂ ಪ್ರತ್ಯೇಕಿಸುವುದು ಕಷ್ಟಸಾಧ್ಯದ ಕೆಲಸವಾಗುತ್ತದೆ. ಆದರೂ ಕೃತಿ ಹೊಂದಿದ ವಸ್ತುಸ್ವರೂಪದ ಮೇಲೆ ಕಾವ್ಯ ಮತ್ತು ಶಾಸ್ತ್ರಗಳನ್ನು ಪ್ರತ್ಯೇಕಿಸ ಬೇಕಾಗುತ್ತದೆ.

### ೨.೧. ಅರ್ಥ, ಸ್ವರೂಪ ಹಾಗೂ ಪರಂಪರೆ

ಶಾಸ್ತ್ರ ಎಂಬ ಪದ ಮೂಲತಃ ಸಂಸ್ಕೃತ ಪದ. ಇದರ ಮೂಲ ವ್ಯಾಖ್ಯೆಯನ್ನು ನಿಖರವಾಗಿ ಹೇಳುವುದು ಸಾಧ್ಯವಿಲ್ಲದ ಮಾತು. ಆದರೆ ಕೆಲವು ವಿದ್ವಾಂಸರ ಅಭಿಮತ, ಅಭಿಪ್ರಾಯಗಳನ್ನು ಈ ಕೆಳಗಿನಂತೆ ನೋಡಬಹುದು.

ಶಾಸ್ ಎಂಬ ಧಾತುವಿನಿಂದ ಶಾಸನವೆಂಬ ಪದ ಹುಟ್ಟಿದೆ. 'ಶಾಸನ ಎಂಬುದಕ್ಕೆ ಕೌಟಿಲ್ಯನು ಆಜ್ಞೆ ಮಾಡು, ಶಿಕ್ಷಿಸು, ನಿಯಂತ್ರಿಸು ಎಂಬ ಅರ್ಥದಲ್ಲಿ ಬಳಸಿದ್ದಾನೆ. ಶಾಸನಗಳು ರಾಜಾಜ್ಞೆಗಳಾಗಿದ್ದವು. ರಾಜಾಜ್ಞೆಗಳನ್ನು ಜನಸಾಮಾನ್ಯರಿಗೆ ತಿಳಿಸುವ ಬರಹಗಳೇ ಶಾಸನಗಳು.'[೩] ಇದೇ ಅರ್ಥಗಳೇ ಋಗ್ವೇದ ಸಂಹಿತೆಗಳಲ್ಲಿರುವುದನ್ನು ಕಾಣಬಹುದು. ಶಾಸ್ತ್ರ ಎಂಬ ಪದದ ಉತ್ಪತ್ತಿಯ ಕುರಿತು ಆಗಮ ಕೃತಿಗಳಲ್ಲಿ ಶಾಸ್ತ್ರ ಪದದ ಉತ್ಪತ್ತಿಯ ತಾತ್ಪರ್ಯವನ್ನು ಸೂತ್ರವೊಂದರಲ್ಲಿ ಹೀಗೆ ಹಿಡಿದಿಡಲಾಗಿದೆ.

ಶಾಸನಾತ್ ಶಂಸನಾತ್ ಶಾಸ್ತ್ರಂ ಶಾಸ್ತ್ರ ಮಿತ್ಯಬಿಧೀಯತೇ!
ಶಾಸನಂ ದ್ವಿವಿಧಂ ಪ್ರೋಕ್ತಂ ಶಾಸ್ತ್ರ ಲಕ್ಷಣ ವೇಧಿಬಿ[೪]

ಶಾಸ್> ಆಜ್ಞೆ ಮಾಡುವುದು ಮತ್ತು ಶಂಸ್ > ಪ್ರಕಟ ಮಾಡುವುದು ಎಂಬರ್ಥದಲ್ಲಿ ಬಳಕೆಗೊಂಡಿವೆ. ಶಾಸನ ಮಾಡುವ ಶಾಸ್ತ್ರವು ವಿಧಿರೂಪ ಮತ್ತು ನಿಷೇಧರೂಪವೆಂಬುದಾಗಿ ಎರಡು ವಿಧಗಳಾಗಿರುತ್ತವೆ. ಶ್ರುತಿ ಮತ್ತು ಸ್ಮೃತಿಗಳಲ್ಲಿ ಪ್ರತಿಪಾದಿತವಾಗಿರುವ ಕಾರ್ಯಗಳು ಅನುಷ್ಠಾನಕ್ಕೆ ಯೋಗ್ಯವಾದವು ಮತ್ತು ನಿಷೇಧಗೊಂಡವುಗಳಾಗಿರುತ್ತವೆ. ಅಂದರೆ ಶಾಸ್ತ್ರವು ವಿಧಿ ನಿಷೇಧಗಳನ್ನು ತಿಳಿಸುವ ರೀತಿಯಲ್ಲಿರುತ್ತವೆ. ರನ್ನನು ತನ್ನ ಅಜಿತನಾಥ ಪುರಾಣದಲ್ಲಿ 'ಧಾತ್ರಿಯೊಳ್ನುಡಿದುದೆ ನನ್ನಿ ಮಾಡಿದುದೆ ಶಾಸನವಿತ್ತುದೆ.. ..' ಈ ಭೂಮಿಯ ಮೇಲೆ ನುಡಿಯುವ ನುಡಿಯೇ ಶಾಸನವೆಂಬರ್ಥದಲ್ಲಿ ಹೇಳಿದ್ದಾನೆ. ಷಡಕ್ಷರದೇವನು ತನ್ನ ರಾಜಶೇಖರ ವಿಳಾಸದಲ್ಲಿ 'ಜಯ ಜಯ ಜಯ ದೇವದೇವ ಪುರಶಾಸನ ಶಾಸನೈಕ

ಚಿನ್ಮಯ ಮಯನುತ್ಯಸಂಪದ ಸಮಾನ...' ಎಂದು ತಿಳಿಸಿದ್ದಾರೆ. ಇಲ್ಲಿ ಶಾಸನವೆಂಬುದು ಆಜ್ಞೆ ಎಂಬರ್ಥದಲ್ಲಿ ಬಳಕೆಗೊಂಡಿದೆ.

ಕನ್ನಡದಲ್ಲಿ ಜನಪದರು ಇಂದಿಗೂ ಶಿಕ್ಷೆ ವಿಧಿಸು ಎಂಬುದಕ್ಕೆ ಶಾಸ್ತಿ ಮಾಡು ಎಂದೇ ಹೇಳುತ್ತಾರೆ. ಶಾಸ್ತಿ ಎಂಬ ಪದಕ್ಕೆ ನಿಘಂಟಿನಲ್ಲಿ ಶಾಸನ ಎಂದೇ ಅರ್ಥೈಸಲಾಗಿದೆ. ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ ಶಾಸ್ತ್ರ ಪದಕ್ಕೆ ಅಪ್ಪಣೆ, ಆಜ್ಞೆ, ಕಟ್ಟಳೆ ಮುಂತಾದ ಅರ್ಥಗಳನ್ನು ನೀಡಲಾಗಿದೆ. ಆದರೆ ಶಾಸ್ತ್ರ ಎಂಬುದನ್ನು ಶಾಸ್ತ್ರಗ್ರಂಥ ಬರೆದ ಲೇಖಕರೆಲ್ಲ ಜ್ಞಾನ, ಜ್ಞಾನಶಿಸ್ತು ಎಂಬರ್ಥದಲ್ಲಿಯೇ ಬಳಕೆ ಮಾಡಿದ್ದಾರೆ.

ಶಾಸ್ತ್ರ ಪದವನ್ನು ವಚನಕಾರರು ತಮ್ಮ ಬಹುತೇಕ ವಚನಗಳಲ್ಲಿ ಬಳಕೆ ಮಾಡಿದ್ದಾರೆ. ಕನ್ನಡದ ಶಾಸನಗಳಲ್ಲಿ ಶಾಸ್ತ್ರದ ಉಲ್ಲೇಖವಿದೆ. 'ಕಲಬುರಗಿಯ ನಾಗಾವಿ ಶಾಸನವೊಂದರಲ್ಲಿ ತ್ರೈಪುರುಷ ದೇವರಶಾಲೆ ಘಟಿಕಾಸ್ಥಾನವಾಗಿದ್ದು ಅದರಲ್ಲಿ ೨೦೦ ವಿದ್ಯಾರ್ಥಿಗಳು ವಿದ್ಯಾಭ್ಯಾಸದಲ್ಲಿ ನಿರತರಾಗಿದ್ದು ೫೦ ವಿದ್ಯಾರ್ಥಿಗಳು ಶಾಸ್ತ್ರಾಧ್ಯಯನದಲ್ಲಿ ತೊಡಗಿದ್ದರು ಎಂಬ ಉಲ್ಲೇಖವಿದೆ.'[೫]

ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿಯಲ್ಲಿ ಲೌಕಿಕ ಶಾಸ್ತ್ರವನ್ನು ಲೌಕಿಕವೇ ಧನ್ವಂತರ್ಯಾದಿಗಳಿಂದುಕ್ತವಾದ ಆಯುರ್ವೇದ, ದಂಡನೀತಿ ಮೊದಲಾದ ದೃಷ್ಟ ಫಲಂಗಳಂ ನಿರ್ಧರಿಸುತ್ತಿರುನಂ ಎಂಬ ವಿವರಣೆಯಿಂದ ಲಕ್ಷಣಿಸಿದ್ದಾರೆ. ನಿತ್ಯ ಜೀವನಕ್ಕೆ ಸಮೀಪವಾದ ಶಾಸ್ತ್ರ ಗ್ರಂಥಗಳಿಗೆ ಸಾಹಿತ್ಯ ಚರಿತ್ರೆಯಲ್ಲಿ ತನ್ನದೇ ಆದ ಸ್ಥಾನಮಾನಗಳು ಲಭ್ಯವಾಗಿದೆ. ಇದರಿಂದಾಗಿ ಶಾಸ್ತ್ರಸಾಹಿತ್ಯ ಪರಿಗಣಿಸದೇ ಮಾಡಿದ ಸಾಹಿತ್ಯ ಚರಿತ್ರೆಯ ಅಧ್ಯಯನವು ಅಪೂರ್ಣವೆಂದರೆ ತಪ್ಪಾಗಲಾರದು. ಶಾಸ್ತ್ರಸಾಹಿತ್ಯದ ಅರ್ಥ ಸ್ವರೂಪಗಳನ್ನು ಇದುವರೆಗಿನ ನಿಘಂಟುಕಾರರ ಮಿಮಾಂಸಕರ ಕಾವ್ಯ ಪುರಾಣಗಳಲ್ಲಿ ಉಲ್ಲೇಖಿತಗೊಂಡ ಹೇಳಿಕೆಗಳನ್ನು ವ್ಯಾಖ್ಯಾನಗಳನ್ನು ಒಟ್ಟುಗೂಡಿಸಿ ಶಾಸ್ತ್ರವೆಂಬ ಪದವನ್ನು ವಿಶಾಲಾರ್ಥದಲ್ಲಿ ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ

ಜನರ ಲೋಕ ವ್ಯವಹಾರಕ್ಕೆ ಮಾರ್ಗದರ್ಶನ ಮಾಡುವುದು ಶಾಸ್ತ್ರಸಾಹಿತ್ಯದ ಉದ್ದೇಶವಾಗಿದೆ. ಮಾನವನ ಆರೋಗ್ಯ, ವ್ಯವಹಾರ, ಗ್ರಹಗತಿ-ಪರಿಹಾರ, ನೈತಿಕ ಮೌಲ್ಯ ಹೀಗೆ ಒಟ್ಟಾರೆಯಾಗಿ ಮಾನವನ ನೆಮ್ಮದಿಯ ಬದುಕಿಗೆ ದಾರಿ ತೋರಿಸುವ ಕೆಲಸ ಶಾಸ್ತ್ರ ಸಾಹಿತ್ಯದ್ದು. ರತ್ನಾಕರಾಧೀಶ್ವರ ಶತಕದಲ್ಲಿ ಶಾಸ್ತ್ರದ ಕುರಿತ ವಿವರ ಹೀಗಿದೆ.

'ಶಾಸ್ತ್ರಂ ಬಂದೊಡೆ ಶಾಂತಿ ನಿಗರ್ವ ನೀತಿ ಮೆಲ್ವಾತು ಮು
ಕ್ತಿ ಸ್ತ್ರೀ ಚಿಂತೆ ನಿಜಾತ್ಮ ಚಿಂತೆ ನಿಲವೇಳ್ಕಂತಲ್ಲದಡೆ ಆ ಶಾಸ್ತ್ರದಿಂ

ದುಸ್ತ್ರೀ ಚಿಂತನೆ ದುರ್ಮುಖಂ ಕಲಹಂ ಉದ್ಗರ್ವ ಮನಂಗೊಂಡೊದಾ
ಶಾಸ್ತ್ರಂ ಶಸ್ತ್ರಮೆ ಶಾಸ್ತ್ರಿ ಶಾಸ್ತ್ರಿಕನಲಾ ರತ್ನಾಕರಾಧೀಶ್ವರಾ"[೬]

ಶಾಸ್ತ್ರಗ್ರಂಥಗಳಲ್ಲಿ ವಿಷಯ ನಿರೂಪಣೆಗೆ ಕಂದ ಪ್ರಕಾರ ಹೆಚ್ಚಾಗಿ ಬಳಕೆಗೊಂಡಿದೆ. 'ಕಂದ ಪ್ರಕಾರ ಶಾಸ್ತ್ರ ವಿಚಾರದ ಖಚಿತತೆಗಾಗಲಿ ಕಾವ್ಯ ಕಲ್ಪನೆಯ ಅಡಕಕ್ಕಾಗಲಿ ಸರಿಹೊಂದುವ ಛಂದೋಬಂಧ'[೭] ಹೀಗಾಗಿಯೇ ಶಾಸ್ತ್ರ ಸಾಹಿತ್ಯ ರಚನೆಕಾರರು ಕಂದ ಶೈಲಿಗೆ ಹೆಚ್ಚು ಮುಗಿಬಿದ್ದರೇನೊ. ಕನ್ನಡದ ಕಾವ್ಯಾವಲೋಕನ, ಸಮಯಪರೀಕ್ಷೆ, ಜಾತಕ ತಿಲಕ, ಸೂಪಶಾಸ್ತ್ರ ಮುಂತಾದ ಹಲವು ಕೃತಿಗಳನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು. ಕಂದದ ಆಚೆ ಬೇರೆ ಪ್ರಕಾರದಲ್ಲಿಯೂ ಶಾಸ್ತ್ರಸಾಹಿತ್ಯವು ಬೆಳೆದ ಉದಾಹರಣೆ ಇದೆಯಾದರೂ ಕಂದವು ಶಾಸ್ತ್ರಸಾಹಿತ್ಯಕಾರನಿಗೆ ಹೆಚ್ಚು ಪ್ರಿಯವಾದುದು ಎಂಬುದು ಮಾತ್ರ ಸ್ಪಷ್ಟ.

ಶಾಸ್ತ್ರಸಾಹಿತ್ಯದ ಉಗಮ ಎಂದಾಯಿತು ಎಂದು ಹೇಳುವುದು ಸ್ವಲ್ಪ ಕಷ್ಟದ ಕೆಲಸ. ವೇದೋಪನಿಷತ್ತಿನ ಹುಟ್ಟಿನೊಂದಿಗೆ ಶಾಸ್ತ್ರಸಾಹಿತ್ಯ ಸ್ಪಷ್ಟ ರೂಪ ತಾಳಿತು ಎಂದೆನಿಸುತ್ತದೆ. ಆದರೆ ಸಾಹಿತ್ಯ ಅಧ್ಯಯನಕಾರರು ಕಾವ್ಯಪರಂಪರೆಗೆ ಕೊಟ್ಟ ಮಹತ್ವವನ್ನು ಶಾಸ್ತ್ರ ಸಾಹಿತ್ಯಕ್ಕೆ ನೀಡಲಿಲ್ಲವೆನಿಸುತ್ತದೆ. 'ಶಾಸ್ತ್ರ ಮತ್ತು ವಿಚಾರಪ್ರಧಾನವಾದ ಪ್ರಕಾರಗಳಲ್ಲಿ ಸೃಜನಶೀಲ ಮನೋಭಾವ ಹೆಚ್ಚಾಗಿ ಬೇಕಾಗಿಲ್ಲ ಎಂಬ ಗ್ರಹಿಕೆ ನಮ್ಮಲ್ಲಿದ್ದು ಲೌಕಿಕಶಾಸ್ತ್ರ ಸಾಹಿತ್ಯದ ಗ್ರಂಥಗಳ ಪ್ರಕಟಣೆ ಅತ್ಯಂತ ಅವಜ್ಞೆಗೆ ಗುರಿಯಾಗಿರುವುದು ವಿಷಾದಕರವಾಗಿದೆ' ಎಂದು ಟಿ.ವಿ. ವೆಂಕಟಾಚಲಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ. ಇದು ಸತ್ಯವೂ ಹೌದು. ಇಷ್ಟೆಲ್ಲದರ ಮಧ್ಯ ವಿವಿಧ ಆಕರಗಳನ್ನು ಬಳಸಿ ಶಾಸ್ತ್ರಸಾಹಿತ್ಯದ ಪರಂಪರೆಯ ಜಾಡನ್ನು ಅವಲೋಕಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಹಳಗನ್ನಡದ ಜೈನಕವಿಗಳು ರಾಜಾಶ್ರಯ ನೀಡಿದ ರಾಜನಿಗೆ ನಿಷ್ಠೆ ತೋರಿಸುವುದಕ್ಕಾಗಿ ಹಾಗೂ ರಾಜನ ಆಸ್ಥಾನ ವಿದ್ವಾಂಸರ ಮನಸ್ಸನ್ನು ಓಲೈಸುವುದಕ್ಕಾಗಿ ಲೌಕಿಕ ಕಾವ್ಯಗಳನ್ನು ಬರೆದರು. ಹಾಗೆಯೇ ತಮ್ಮ ಧರ್ಮನಿಷ್ಠೆಯನ್ನು ತೋರಿಸಲು ಆಗಮಿಕ ಕಾವ್ಯಗಳನ್ನು ಬರೆದರು. ಹೀಗೆ ಲೌಕಿಕ ಆಗಮಿಕಗಳಲ್ಲಿ ಜೈನಕವಿಗಳು ಸಮನ್ವಯತೆಯನ್ನು ಸಾಧಿಸಿರುವುದನ್ನು ಅವರ ಕಾವ್ಯಗಳ ಮೂಲಕ ಅರಿಯುತ್ತೇವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಆ ಕಾಲದ ಸಾಹಿತಿಗಳು ಕೇವಲ ಕಾವ್ಯಗಳಿಗೆ ಅಂಟಿಕೊಳ್ಳದೆ ಶಾಸ್ತ್ರ ಸಿದ್ಧಾಂತ ಕೃತಿಗಳನ್ನೂ ರಚಿಸಿದರು. 'ಈ ಕಾರಣದಿಂದಲೇ ಜೈನಧರ್ಮದಲ್ಲಿ ಸಿದ್ಧಾಂತ ಬಸದಿಗಳಿರುವುದು'.[೮] ಕಾವ್ಯ ಪ್ರಕಾರದಲ್ಲಿ ಲೌಕಿಕ ಆಗಮಿಕ ಎಂದು ವಿಭಾಗವಿರುವಂತೆ ಶಾಸ್ತ್ರಸಾಹಿತ್ಯದಲ್ಲಿಯೂ ಆಗಮಿಕ ಲೌಕಿಕ ಶಾಸ್ತ್ರ ಎಂದು

ವಿಭಾಗೀಕರಿಸಲಾಗಿದೆ. ನಿತ್ಯ ಬದುಕಿಗೆ ಸ್ಪಂಧಿಸುವ, ವಿಧಿವಿಧಾನಗಳನ್ನು ತಿಳಿಸುವ ಶಾಸ್ತ್ರವನ್ನು ಲೌಕಿಕ ಶಾಸ್ತ್ರವೆಂದು ಕರೆದರೆ ಧಾರ್ಮಿಕ, ಆಧ್ಯಾತ್ಮಿಕ ವಿಚಾರಗಳನ್ನು ತಿಳಿಸುವ ಶಾಸ್ತ್ರವನ್ನು ಆಗಮಿಕ ಶಾಸ್ತ್ರ ಎಂದು ಕರೆಯಲಾಯಿತು. ಪ್ರಾಚೀನ ಸಂಸ್ಕೃತ, ಪ್ರಾಕೃತ ಭಾಷೆಯಲ್ಲಿ ಬಂದ ಧಾರ್ಮಿಕ ಗ್ರಂಥಗಳನ್ನು ಆಧರಿಸಿ ಕನ್ನಡದಲ್ಲಿ ಧಾರ್ಮಿಕ ವಿಚಾರಗಳನ್ನು ತಿಳಿಸುವ ಗ್ರಂಥಗಳು ರಚನೆಗೊಂಡವು. ವಿಶೇಷವಾಗಿ ಹಳಗನ್ನಡ ಕಾಲದ ಜೈನಧರ್ಮೀಯ ಸಾಹಿತಿಗಳು ಈ ರೀತಿಯ ಕಾರ್ಯವನ್ನು ಹೆಚ್ಚಾಗಿ ಮಾಡಿದರು.

ಕನ್ನಡದಲ್ಲಿ ಉಪಲಬ್ಧವಿರುವ ಮೊದಲ ಶಾಸ್ತ್ರಗ್ರಂಥವೆಂದರೆ ಕವಿರಾಜಮಾರ್ಗ. ಇದರಲ್ಲಿ ಭಾಷೆಯ ಬೆಳವಣಿಗೆಯ ಕುರಿತು ತಿಳಿಸುತ್ತ ಮೃಗಪಕ್ಷಿಗಳ ಭಾಷೆಗೂ ಮನುಷ್ಯನ ಭಾಷೆಗೂ ಇರುವ ವ್ಯತ್ಯಾಸಗಳನ್ನು ಸೂಚಿಸುತ್ತಾನೆ.

ಭಾಷೆಯನ್ನು ಅರಿಯುವವನು ನಿಪುಣನಾಗಿರಬೇಕು ಎಂಬುದನ್ನು ತಿಳಿಸುವ ಕವಿರಾಜ ಮಾರ್ಗಕಾರನು

'ಕುರಿತಂತು ಪೆರರ ಬಗೆಯಂ
ತೆರೆದಿರೆ ಪೆರರ್ಗೆ ಅರಿಪಲಾರ್ಪವಂ ಮಾತರಿವಂ
ಕಿರಿದರೊಳೆ ಪಿರಿದುಂ ಅರ್ಥಮಂ
ಅರಿಪಲ್ ನೆರೆನಾತನ್ ಆತನಿಂದಂ ನಿಪುಣಂ'

ಎಂದು ತಿಳಿಸುತ್ತಾನೆ. ಭಾಷೆಯ ಕುರಿತು ತಿಳಿಸಿದ ನಂತರ ಕಾವ್ಯ ಎಂಬುದು ಹೇಗಿರಬೇಕು ಎಂಬುದನ್ನು ಕನ್ನಡದ ಹಲವಾರು ಕಾವ್ಯದ ಉದಾಹರಣೆಗಳನ್ನು ಕೊಟ್ಟು ವಿವರಿಸುತ್ತಾ ಸಾಗಿದ್ದಾನೆ.

ಆದರೆ ಕವಿರಾಜಮಾರ್ಗಕ್ಕಿಂತಲೂ ಪೂರ್ವದಲ್ಲಿಯೇ ಶಾಸ್ತ್ರಗಂಥಗಳು ರಚನೆಗೊಂಡಿದ್ದ ವೆಂಬುದಕ್ಕೆ ಅನೇಕ ಉಲ್ಲೇಖಗಳು ದೊರೆಯುತ್ತವೆ. ಆದರೆ ಆ ಗ್ರಂಥಗಳ ಉಪಲಬ್ಧತೆ ಇಲ್ಲ.

ಅಲಂಕಾರ ಶಾಸ್ತ್ರದ ಮೇಲೆ ಕನ್ನಡದಲ್ಲಿ ನಾಗವರ್ಮನ ಕಾವ್ಯಾವಲೋಕನವನ್ನು ನೋಡಬಹುದು. ಇವನು ಜಗದೇಕಮಲ್ಲನಲ್ಲಿ ಕಟಕೋಪಾಧ್ಯಾಯನಾಗಿದ್ದನು. ಕಾವ್ಯಾವ ಲೋಕನದಲ್ಲಿ ಶಬ್ದ ಸ್ಮೃತಿ, ಕಾವ್ಯದ ದೋಷದ ವಿವರಣೆ, ಕಾವ್ಯದ ಗುಣ ವಿವೇಚನೆ, ರಸ ನಿರೂಪಣೆ, ಕವಿಸಮಯಗಳ ಕುರಿತ ವಿವರಗಳು ಕಾವ್ಯಾವಲೋಕನದಲ್ಲಿ ದೊರೆಯುತ್ತವೆ. ನಾಗವರ್ಮನೆ ಹೇಳುವಂತೆ ಈ ಕೃತಿಯು

'ಕವಿಗಳ್ಗೆ ಇದು ಕೈಗನ್ನಡಿ
ಕವಿತೆಗೆ ಬಾಳ್ಮೊದಲ್, ವಾಗ್ದೇವತೆಗೆ ಉದ್
ಭವಹೇತು ಕೋಶಗೃಹಂ..'

ಎಂದು ತಿಳಿಸುತ್ತಾನೆ. ಈ ಕೃತಿ ಕವಿತೆಯನ್ನು ರಚಿಸುವ ಕವಿಗಳಿಗೆ ಕೈಗನ್ನಡಿಯಾಗಿದೆ; ಕವಿತೆಗೆ ಜನ್ಮ ಸ್ಥಾನ; ವಾಗ್ದೇವಿಯ ಹುಟ್ಟಿಗೆ ಕಾರಣವಾದ ಕೋಶಾಗಾರವಿದು ಎಂದು ತನ್ನ ಕಾವ್ಯಾವಲೋಕನ ಕೃತಿಯ ಕುರಿತು ತಿಳಿಸುತ್ತಾನೆ.

ಮೊದಲ ಅಧಿಕರಣವಾದ ಶಬ್ದ ಸ್ಮೃತಿಯಲ್ಲಿ ಕನ್ನಡ ವ್ಯಾಕರಣದ ಕುರಿತ ವಿವರಣೆ ಇದೆ. ಉಳಿದ ನಾಲ್ಕರಲ್ಲಿ ಕಾವ್ಯ ಮೀಮಾಂಸೆಗೆ ಸಂಬಂಧಿಸಿದ ವಿವರಣೆಗಳಿವೆ.

ಚೋಳರಾಜನ ಮಗನಾದ ಸೋಮನಾಥನೆಂಬುವವನು ಉದಯಾದಿತ್ಯಾಲಂಕಾರ ಎಂಬ ಕೃತಿಯೊಂದನ್ನು ರಚಿಸಿದ್ದಾನೆ. ಇದರಲ್ಲಿ ಕೇವಲ ಎಪ್ಪತ್ತೆರಡು ಪದ್ಯಗಳು ಮಾತ್ರ ಇವೆ. ಈತನ ಕಾಲ ಕ್ರಿ.ಶ. ೧೨೪೫ ಇರಬಹುದೆಂದು ಕವಿಚರಿತ್ರೆಕಾರರು ಅಭಿಪ್ರಾಯ ಪಡುತ್ತಾರೆ. ಉದಯಾದಿತ್ಯಾಲಂಕಾರ ಕೃತಿಯ ನಂತರ ಕಣ್ಣಿಗೆ ಬೀಳುವ ಮತ್ತೊಂದು ಕೃತಿ ಮಾಧವಾಲಂಕಾರ. ಇದು ದಂಡಿಯ ಕಾವ್ಯಾದರ್ಶದ ಭಾಷಾಂತರ ಕೃತಿಯಾಗಿದೆ ಯೆಂಬುದಾಗಿ ತಿಳಿದುಬರುತ್ತದೆ. ಇವನ ಕಾಲವನ್ನು ಕ್ರಿ.ಶ. ೧೫೦೦ ಇರಬಹುದೆಂದು ಕವಿಚರಿತೆಕಾರರ ಅಭಿಪ್ರಾಯವಾಗಿದೆ.

ಮೈಸೂರು ರಾಜ್ಯವನ್ನಾಳಿದ ಚಿಕ್ಕದೇವರಾಜನ(ಕ್ರಿಶ ೧೬೭೨-೧೭೦೪) ಆಸ್ಥಾನದಲ್ಲಿ ಮಂತ್ರಿಯಾಗಿದ್ದ ತಿರುಮಲಾರ್ಯನು **ಅಪ್ರತಿಮ ವೀರಚರಿತೆ** ಎಂಬ ಕೃತಿಯೊಂದನ್ನು ಬರೆದಿದ್ದಾನೆ. ಇದರಲ್ಲಿ ಕಾವ್ಯದ ಲಕ್ಷಣಗಳು, ಕಾವ್ಯದ ಶಬ್ದಗುಣಗಳು, ಪ್ರಾಸ ಅನುಪ್ರಾಸಗಳು, ಅಲಂಕಾರಗಳ ಕುರಿತಾದ ವಿವರಗಳನ್ನು ಈ ಕೃತಿಯು ಒಳಗೊಂಡಿದೆ.

ಕ್ರಿಶ ೨ನೇ ಶತಮಾನದಲ್ಲಿ ನಾಗಾರ್ಜುನನು 'ಕಕ್ಷಪುಟ' ಎಂಬ ವೈದ್ಯ ಗ್ರಂಥ ರಚಿಸಿದ್ದಾಗಿ ತಿಳಿದುಬರುತ್ತದೆ. ಪೂಜ್ಯಪಾದನ ಸೋದರಳಿಯನೆಂದು ಹೇಳಲಾಗುವ ನಾಗಾರ್ಜುನನು ರಸವಾದಿ ಹಾಗೂ ನುರಿತ ವೈದ್ಯನಾಗಿದ್ದನೆಂದು ಹೇಳಲಾಗುತ್ತದೆ. ಇದೇ ಅವಧಿಯಲ್ಲಿ 'ತುಂಬಲೂರಾಚಾರ್ಯನು ಉಮಾಸ್ವಾತಿಯ ತತ್ವಾರ್ಥ ಸೂತ್ರಕ್ಕೆ ವ್ಯಾಖ್ಯಾನ ಬರೆದನೆಂದು ಹೇಳಲಾಗುತ್ತದೆ' ಗಂಗರಾಜ ಸೈಗೊಟ್ಟ ಶಿವಮಾರನು ಗಜಶಾಸ್ತ್ರ ಎಂಬ ಎಂಟು ಪದ್ಯಗಳನ್ನೊಳಗೊಂಡ ಕೃತಿಯನ್ನು ರಚಿಸಿದ್ದನೆಂದು ಹುಮ್ಮಚ ಶಾಸನವೊಂದರಲ್ಲಿ ಉಲ್ಲೇಖವಿದೆ. ಎಂಟು ಪದ್ಯಗಳಿಂದ ಕೂಡಿರುವುದರಿಂದ ಈ ಕೃತಿಗೆ ಗಜಾಷ್ಟಕವೆಂಬುದು

ಅನ್ವರ್ಥನಾಮವಾಗಿದೆ ಎಂದು ಹಿರಿಯ ಸಂಶೋಧಕರಾದ ಎಂ.ಎಂ. ಕಲಬುರ್ಗಿ ಅವರು ಅಭಿಪ್ರಾಯಪಟ್ಟಿದ್ದಾರೆ.[೧೦] ಕೀರ್ತಿವರ್ಮನ ಗೋವೈದ್ಯ, ಜಗದ್ದಾಳ ಸೋಮನಾಥನ ಕಲ್ಯಾಣಕಾರಕ, ಶ್ರೀಧರನ ವೈದ್ಯಾಮೃತ, ಸಾಳ್ವನ ವೈದ್ಯ ಸಾಂಗತ್ಯ, ದೇವೇಂದ್ರ ಮುನಿಯ ಬಾಲಗ್ರಹ ಚಿಕಿತ್ಸೆ, ವೀರಭದ್ರನ ಹಸ್ತಾಯುರ್ವೇದ, ನಂಜರಾಜನ ಸಕಲವೈದ್ಯ ಸಂಹಿತಾ ಸಾರಾರ್ಣವ, ಎಳಂದೂರು ಚೆನ್ನರಾಜನ ವೈದ್ಯ ಸಾರ ಸಂಗ್ರಹ, ಬ್ರಹ್ಮನ ವೈದ್ಯಕಂದ, ತಿಮ್ಮರಾಜಗೌಡನ ಸ್ತ್ರೀವೈದ್ಯ, ಬಾಚರಸನ ಅಶ್ವವೈದ್ಯ ಹೀಗೆ ವೈದ್ಯಶಾಸ್ತ್ರ ಗ್ರಂಥಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

ವೈದ್ಯಶಾಸ್ತ್ರ ಗ್ರಂಥಗಳಂತೆ ಜ್ಯೋತಿಷ್ಯಾಸ್ತ್ರದಲ್ಲಿಯೂ ವಿಪುಲವಾದ ಕೃತಿಗಳು ಬರೆಯಲ್ಪಟ್ಟಿವೆ. ಶ್ರೀಧರಾಚಾರ್ಯ(ಕ್ರಿ.ಶ. ೧೦೪೯)ನ ಜಾತಕ ತಿಲಕವೇ ಪ್ರಾಚೀನ ಜ್ಯೋತಿಷ್ಯಾಸ್ತ್ರ ಕೃತಿಯೆಂದು ಪರಿಗಣಿಸಲಾಗಿದೆ. ತರುವಾಯ ಲಕ್ಷಣಾಂಕ(ಕ್ರಿ.ಶ. ೧೫೦೦)ನ ಶುನಕಸಾರ, ಶುಭಚಂದ್ರನ ನರಪಿಂಗಳಿ, ಚಾಕರಾಜನ ಶಕುನ ಪ್ರಪಂಚ, ಗಂಗಾಧರನ ರಟ್ಟನ ಜಾತಕ ಮುಂತಾದ ಗ್ರಂಥಗಳನ್ನು ಹೆಸರಿಸಬಹುದು.

ಕಾಮಶಾಸ್ತ್ರಕ್ಕೆ ಸಂಬಂಧಿಸಿದಂತೆ ವಾತ್ಸಾಯನನ ಕಾಮಸೂತ್ರವನ್ನು ಅನುಸರಿಸಿ ಕನ್ನಡದಲ್ಲಿ ಚಂದ್ರರಾಜ ಎಂಬುವವನು ಮದನತಿಲಕ ಎಂಬ ಕೃತಿ ರಚಿಸಿದನು. ಕವಿ ಮಲ್ಲ ಎಂಬ ಕವಿ(೧೪ನೇ ಶತಮಾನ) ಮನ್ಮಥ ವಿಜಯ ಎಂಬ ಚಂಪೂ ಕೃತಿಯನ್ನು ರಚಿಸಿದ್ದು ಕಾಮಶಾಸ್ತ್ರಕ್ಕೆ ಸಂಬಂಧಿಸಿದ ವಿಷಯವನ್ನು ಒಳಗೊಂಡಿದೆ. ಕಲ್ಲರಸ(ಕ್ರಿ.ಶ. ೧೪೫೦)ನು ಜನವಶ್ಯ ಎಂಬ ಕಾಮಶಾಸ್ತ್ರ ಕೃತಿ ರಚಿಸಿದ್ದಾನೆ.

ಅದೇ ರೀತಿಯಾಗಿ ಗಣಿತಶಾಸ್ತ್ರಕ್ಕೆ ಸಂಬಂಧಿಸಿದ ತಿಮ್ಮರಸನ ವ್ಯವಹಾರ ಗಣಿತ, ಚಲುವ ಕವಿಯ ಲೀಲಾವತಿ(ಕ್ಷೇತ್ರ ಗಣಿತ), ಭಾಸ್ಕರನ ವ್ಯವಹಾರ ಗಣಿತ, ಸಿಂಹರಾಜನ ಗಣಿತಸಾರ, ಜೈನ ಗಣಿತ ಸೂತ್ರ ಮುಂತಾದ ಗಣಿತಶಾಸ್ತ್ರ ಗ್ರಂಥಗಳ ರಚನೆ ಕನ್ನಡದಲ್ಲಿ ಬರೆಯಲ್ಪಟ್ಟಿವೆ. ಇವುಗಳಲ್ಲದೆ ವಾಸ್ತುಶಾಸ್ತ್ರ, ಲೋಹಶಾಸ್ತ್ರ, ಹೋರಾಶಾಸ್ತ್ರ ಸೂಪಶಾಸ್ತ್ರ, ನೀತಿಶಾಸ್ತ್ರ, ಶಕುನಶಾಸ್ತ್ರ ಮುಂತಾದ ಶಾಸ್ತ್ರಗ್ರಂಥಗಳು ಬರೆಯಲ್ಪಟ್ಟಿವೆ. ಇವುಗಳಲ್ಲದೆ ಅಲಂಕಾರಶಾಸ್ತ್ರ, ಛಂದೋಂಬುಧಿ, ಕಾವ್ಯ ಮೀಮಾಂಸೆಯಂತಹ ಶಾಸ್ತ್ರಗ್ರಂಥಗಳ ರಚನೆ ಗಳಾಗಿವೆ.

## ೨.೨. ಕನ್ನಡ ಲೌಕಿಕ ಶಾಸ್ತ್ರಸಾಹಿತ್ಯ ಕೃತಿಗಳ ಸ್ಥೂಲ ಸಮೀಕ್ಷೆ

ಲೌಕಿಕ ಎಂಬುದು ಲೋಕದ ದಿನನಿತ್ಯದ ಕರ್ಮಾಚರಣೆಗೆ ಸಂಬಂಧಿಸಿದ್ದು, ಭೌತಿಕವಾದದ್ದು. ಇದನ್ನೆ ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿಯಲ್ಲಿ 'ಲೌಕಿಕವೇ ಧನ್ವಂತರಾದಿಗಳಿಂದುಕ್ತವಾದ ಆಯುರ್ವೇದ, ದಂಡನೀತಿ ಮೊದಲಾದ ದೃಷ್ಟ ಫಲಂಗಳಂ ನಿರ್ಧರಿಸುತ್ತಿರ್ಕುಂ'[೧೧] ಎಂದು ಲೌಕಿಕ ಒಳಗೊಳ್ಳುವ ವಸ್ತು ವಿಚಾರಗಳನ್ನು ತಿಳಿಸುತ್ತಾರೆ. ಭಟ್ಟಕಳಂಕನು ಶಾಸ್ತ್ರಸಾಹಿತ್ಯದ ಕುರಿತು ಹೇಳುತ್ತ ಶಬ್ದಾಗಮ, ಯುಕ್ತ್ಯಾಗಮ, ಪರಮಾಗಮ, ವಿಷಯಾಣಾಂ ತಥಾಕಾವ್ಯ ನಾಟಕಾಲಂಕಾರ ಕಲಾಶಾಸ್ತ್ರ ವಿಷಯಾಣಾಂಚ ಬಹುನಾಂ ಗ್ರಂಥನಾಮಾಪಿ ಭಾಷಾ ಕೃತನಾಮುಪ ಲಭ್ಯಮಾನತ್ವಾತ್'[೧೨] ಎಂದು ತಿಳಿಸುತ್ತಾನೆ. ಇವೆಲ್ಲವೂ ಲೌಕಿಕ ಶಾಸ್ತ್ರ ಪರಂಪರೆಯ ಕುರಿತು ತಿಳಿಸುವ ಮಾತುಗಳೆ. ಕನ್ನಡದಲ್ಲಿಯೂ ಸಂಸ್ಕೃತದಲ್ಲಿ ಬೆಳೆದಂತೆ ಸಂಸ್ಕೃತ ಕೃತಿಗಳನ್ನು ಅನುಸರಿಸಿಯೇ ಶಾಸ್ತ್ರಗ್ರಂಥಗಳು ವಿಪುಲವಾಗಿ ಬೆಳೆದಿವೆ. ಇದಕ್ಕೆ ಉದಾಹರಣೆಯಾಗಿ ಜ್ಯೋತಿಷ್ಯಾಶ್ತ್ರ, ವೈದ್ಯಶಾಸ್ತ್ರ, ಗಜಶಾಸ್ತ್ರ, ಅಶ್ವಶಾಸ್ತ್ರ, ಗೋಶಾಸ್ತ್ರ, ವ್ಯಾಕರಣ, ಛಂದಸ್ಸು, ಅಲಂಕಾರ ಮುಂತಾದ ವಿಚಾರಗಳನ್ನು ತಿಳಿಸುವ ಹಲವಾರು ಲೌಕಿಕ ಶಾಸ್ತ್ರಗಳು ಹುಟ್ಟಿ ಬೆಳೆದಿರುವುದನ್ನು ಕಾಣಬಹುದು.

### ೨.೨.೧. ಜ್ಯೋತಿಷ್ಯ ಶಾಸ್ತ್ರ

ಜ್ಯೋತಿಷ್ಯ ಶಾಸ್ತ್ರವು ಒಂದು ರೀತಿಯಲ್ಲಿ ಅಲೌಕಿಕವಾದದ್ದು. ಏಕೆಂದರೆ ಅದು ಭೌತಿಕ ಜೀವನಕ್ಕೆ ದೂರವಾದ ಗ್ರಹ ನಕ್ಷತ್ರ ವಿಚಾರಗಳನ್ನು ತಿಳಿಸುವ ಶಾಸ್ತ್ರವಾಗಿದೆ. ಆದರೆ ಇದು ಲೌಕಿಕ ಶಾಸ್ತ್ರವೆಂದೇ ಪರಿಗಣಿಸಲ್ಪಟ್ಟಿದೆ. ಮಾನವನ ಬದುಕಿನ ಮೇಲೆ ಗ್ರಹ ನಕ್ಷತ್ರಗಳ ಗೋಚರ ಅಗೋಚರ ಪ್ರಭಾವಗಳು ಹೇಗಿದೆ ಎಂಬುದನ್ನು ಈ ಶಾಸ್ತ್ರ ತಿಳಿಸುತ್ತದೆ. ಮಾನವನ ಹುಟ್ಟು ಜೀವನ ಇತ್ಯಾದಿಗಳು ನಡೆಯುವುದು ಗ್ರಹ ನಕ್ಷತ್ರಗಳ ಪ್ರಭಾವದಿಂದ ಎನ್ನುವ ನಂಬಿಕೆಯ ಮೇಲೆ ಈ ಶಾಸ್ತ್ರ ನಿಂತಿದೆ. ಈ ಶಾಸ್ತ್ರದ ಒಳಗೆ ಹತ್ತೆಂಟು ವಿಭಾಗಗಳಿವೆ. ಖಗೋಳಶಾಸ್ತ್ರದ ಒಂದು ಅಂಗವೆಂದೇ ಭಾವಿಸುವ ಜ್ಯೋತಿಷ್ಯ ಶಾಸ್ತ್ರದಲ್ಲಿ ಹಸ್ತಸಾಮುದ್ರಿಕ, ಪ್ರಶ್ನಾಶಾಸ್ತ್ರ, ಸ್ವಪ್ನಫಲ, ಶಕುನ, ನಾಡಿಶಾಸ್ತ್ರ ಇತ್ಯಾದಿ ವಿಷಯಗಳು ಜ್ಯೋತಿಷ್ಯ ಶಾಸ್ತ್ರದ ಅಡಿಯಲ್ಲಿಯೇ ನೋಡಲಾಗುತ್ತದೆ. ಕ್ರಿ.ಶ. ೧೦೪೯ ಸುಮಾರಿನಲ್ಲಿ ಇದ್ದನೆಂದು ಭಾವಿಸಲಾದ ಶ್ರೀಧರಾಚಾರ್ಯನ 'ಜಾತಕ ತಿಲಕ'ವೇ ಜ್ಯೋತಿಷ್ಯ ಶಾಸ್ತ್ರದ ಮೊದಲ ಉಪಲಬ್ಧ ಗ್ರಂಥವಾಗಿದೆ. ಚಾವುಂಡರಾಯನ ಲೋಕೋಪಕಾರದಲ್ಲಿ ಹಲವು ವಿಚಾರಗಳೊಂದಿಗೆ ಜ್ಯೋತಿಷ್ಯ ಶಾಸ್ತ್ರ ವಿಚಾರವನ್ನೂ ತಿಳಿಸಲಾಗಿದೆ. ಶ್ರೀಧರಾಚಾರ್ಯನು ಜೈನಾವಲಂಬಿಯಾಗಿದ್ದು ನರಗುಂದ ಪ್ರಾಂತಕ್ಕೆ ಸೇರಿದವನು. ಕಂದ

ವೃತ್ತಗಳನ್ನು ಬಳಸಿ ಜಾತಕ ವಿಚಾರಗಳನ್ನು ತಿಳಿಸುವ ಈ ಕೃತಿ ೨೪ ವಿಭಾಗಗಳಿಂದ ಕೂಡಿದೆ. ತನ್ನ ಕೃತಿ ಜ್ಯೋತಿಷ್ಯ ವಿಚಾರವನ್ನು ತಿಳಿಸುವ ಶಾಸ್ತ್ರಕೃತಿಯೆಂದು ತಿರಸ್ಕರಿಸಬೇಡಿ ಎಂದು ಓದುಗರಿಗೆ ತಿಳಿಸುವ ಶ್ರೀಧರಾಚಾರ್ಯನು 'ಮುನ್ನ ಆರು ಜಾತಕಮಂ ಕನ್ನಡದಿ ವ್ಯಕ್ತಮಾಗೆ ಪೇಳ್ದ ಅನ್ವಿತರಿಲ್ಲ ಇನ್ನುಂ ಪೇಳ್ದಪರಿಲ್ಲ ಉತ್ಪನ್ನಂ ಶ್ರೀಧರನೆ ಪೇಳ್ದುಂ'(೧–೧೬) ಎಂದು ಹೇಳಿಕೊಳ್ಳುತ್ತಾನೆ. ಹಾಗೆಯೇ 'ಜಾತಕ ತಿಲಕದೊಳರಿವುದು ಗಣಿತ ಧರ್ಮಂ'(೨೪–೪೦) ಎಂದು ತಿಳಿಸುತ್ತಾನೆ. 'ಭವಬದ್ಧ ಶುಭಾ ಶುಭ ಕರ್ಮವಿಚಾರದ ಫಲಮಂ ಅರಿಪುಗುಂ ಜ್ಯೋತಿರ್ ಜ್ಞಾನಂ ಅದೆಂತೆನೆ ಕತ್ತಲೆವನೆಯ ವಸ್ತುವಂ ತೋರ್ಪಸೊಡರ ಬೆಳಕಿನ ತೆರದಿ' ಎಂದು ತಿಳಿಸುತ್ತಾನೆ. ಕತ್ತಲೆಯನ್ನು ಓಡಿಸುವ ಬೆಳಕಿನ ರೀತಿಯಲ್ಲಿ ಜಾತಕ ತಿಲಕ ಉಪಕಾರಿಯಾಗಿದೆ ಎಂದು ಹೇಳುತ್ತಾನೆ.[೧೩] ಒಟ್ಟಾರೆಯಾಗಿ ಕಾವ್ಯಾತ್ಮಕ ಶೈಲಿಯಲ್ಲಿ ಜ್ಯೋತಿಷ್ಯ ಶಾಸ್ತ್ರವನ್ನು ಕೊಟ್ಟ ಕೀರ್ತಿ ಶ್ರೀಧರಾಚಾರ್ಯನಿಗೆ ಸಲ್ಲುತ್ತದೆ.

ಕ್ರಿ.ಶ. ೧೩೦೦ರ ಸುಮಾರಿನಲ್ಲಿದ್ದ ರಟ್ಟಕವಿಯ ರಟ್ಟಮತ ಕೃತಿಯು ಕೃಷಿಗೆ ಪೂರಕವಾದ ಮಳೆ, ಮಳೆನಕ್ಷತ್ರಗಳು, ಮಳೆ ತರುವ ಮಾರುತಗಳು, ಮೇಘ ಲಕ್ಷಣ, ಮಿಂಚು ಮತ್ತು ಅದರ ಲಕ್ಷಣ, ವಿವಿಧ ಧಾನ್ಯಗಳನ್ನು ಬಿತ್ತುವ ಶಕುನ ಸಂವತ್ಸರಗಳ ವಿಚಾರ ಮುಂತಾದ ಸಂಗತಿಗಳನ್ನು ತಿಳಿಸುವ ಕೃತಿಯಾಗಿದೆ. ಇದನ್ನು ಎಚ್. ಶೇಷಾಯ್ಯಂಗಾರ್ ಅವರು ಸಂಪಾದಿಸಿದ್ದಾರೆ. ಯಾವ ಮಳೆನಕ್ಷತ್ರದಲ್ಲಿ ಬೀಜ ಬಿತ್ತಿದರೆ ಎಂತಹ ಫಲ ದೊರೆಯುವುದು ಎಂದು ತಿಳಿಸುವ ರಟ್ಟಮತದ ಪದ್ಯವೊಂದು ಹೀಗಿದೆ.

'ಮೃಗಸಿರೆಯಾದಿಯಾಗೆಸೆವ ಪಂಚಕದೊಳ್ ಪುಗೆ ಬಿತ್ತುನೆಲ್ಲಳಂ
ಮಿಗೆ ಮಘೆ ಪೂಣಿಯುಂ ದಿನಕರಂ ನಿಲೆಕೊಳ್ ಪೆಸರೆಳ್ಗಳೆಂಬಿಮಂ
ನೆಳ್ದೆ ವರಾಹ ಗಾರ್ಗ್ಯನವ ಕೀರ್ತಿಯ.. .. ..'[೧೪]

ಮೃಗಶಿರ, ಪುನರ್ವಸು, ಪುಷ್ಯ ನಕ್ಷತ್ರಗಳಲ್ಲಿ ನೆಲ್ಲು ಬಿತ್ತನೆ ಮಾಡಬೇಕು. ಮಾಘ ಪೂರ್ಣಿಮೆಯ ಸುರ್ಯೋದಯದ ಸಂದರ್ಭದಲ್ಲಿ ಇತರ ಧಾನ್ಯಗಳನ್ನು ಬಿತ್ತುವುದೆಂದೆ ವರಾಹ ಗಾರ್ಗ್ಯರನ್ನನುಸರಿಸಿ ಹೇಳುತ್ತಿರುವುದಾಗಿ ರಟ್ಟನು ತಿಳಿಸುತ್ತಾನೆ.

ಹೀಗೆ ಹಲವು ವಿಚಾರಗಳನ್ನು ತಿಳಿಸುವ ರಟ್ಟನು ತನ್ನ ಕಾಲಾನಂತರದ ಶಾಸ್ತ್ರಕಾರರ ಮೇಲೆ ಪ್ರಭಾವ ಬೀರಿದ್ದನೆಂಬುದು ಕ್ರಿ.ಶ. ೧೫೦೦ರಲ್ಲಿದ್ದ ಗಂಗಾಧರನ ರಟ್ಟಜಾತಕ ಕೃತಿಯಿಂದ ತಿಳಿದುಬರುತ್ತದೆ. ಪ್ರಾಯಶಃ ರಟ್ಟನ ಮೇಲಿನ ಅಭಿಮಾನದಿಂದಾಗಿ ಗಂಗಾಧರನು ತನ್ನ ಕೃತಿಗೆ ರಟ್ಟಜಾತಕವೆಂಬ ಹೆಸರನ್ನು ಇರಿಸಿರುವ ಸಾಧ್ಯತೆಗಳು ಹೆಚ್ಚಾಗಿದೆ.

ಇದೇ ಕಾಲದವನಾದ ಶುಭಚಂದ್ರನು ನರಪಿಂಗಳಿ ಎನ್ನುವ ಜ್ಯೋತಿಷ್ಯ ಶಾಸ್ತ್ರಕ್ಕೆ ಸಂಬಂಧಿಸಿದ ಕೃತಿಯನ್ನು ರಚಿಸಿದ್ದು ೧೬೭ ಪದ್ಯಗಳಿಂದ ಈ ಕೃತಿ ಕೂಡಿದೆ ಎಂದು ಹೇಳಲಾಗುತ್ತದೆ. ಇವುಗಳಲ್ಲದೆ ಜ್ಯೋತಿಷ್ಯ ಶಾಸ್ತ್ರಕ್ಕೆ ಸಂಬಂಧಿಸಿದ ಹಲವು ಕೃತಿಗಳು ಕನ್ನಡದಲ್ಲಿ ರಚನೆಗೊಂಡಿರುವುದು ತಿಳಿದುಬರುತ್ತದೆ.

### ೨.೨.೨. ವೈದ್ಯಶಾಸ್ತ್ರ

ಮಾನವನ ದೇಹವು ರಕ್ತಮಾಂಸಗಳಿಂದ ಕೂಡಿದ ಅಂಗ ರಚನೆ ಹಾಗೂ ಅದರೊಳಗೆ ಕಾರ್ಯ ನಿರ್ವಹಿಸುವ ಮನಸ್ಸು ಎರಡನ್ನೊಳಗೊಂಡಿದೆ. ದೇಹದ ಪ್ರತಿಯೊಂದು ಕಾರ್ಯವೂ ಮನಸ್ಸಿನ ಇಷ್ಟಾರ್ಥದಂತೆ ನಡೆಯುತ್ತದೆ. ಮನುಷ್ಯ ಆರೋಗ್ಯವಂತನಾಗಿರಲು ದೇಹ ಮತ್ತು ಮನಸ್ಸು ಎರಡೂ ಉತ್ತಮ ಸ್ಥಿತಿಯಲ್ಲಿರಬೇಕು. ಎರಡರಲ್ಲಿ ಯಾವುದಾದರೂ ಒಂದಕ್ಕೆ ಘಾಸಿಯಾದರೂ ಮನುಷ್ಯನ ಆರೋಗ್ಯ ಹದಗೆಡುತ್ತದೆ. ಹೀಗಾಗಿ ದೇಹ, ಮನಸ್ಸು ಇವುಗಳಲ್ಲಿ ಯಾವುದೇ ಹದ ತಪ್ಪಿದರೂ ಅದನ್ನು ಜೋಪಾನವಾಗಿಡಲು ವೈದ್ಯೋಪಚಾರದ ಅಗತ್ಯ ಇದ್ದೇ ಇದೆ. ಇದನ್ನು ಮನಗಂಡ ನಮ್ಮ ಪೂರ್ವಜರು ದೇಹಾರೋಗ್ಯ ಕಾಪಾಡಲೆಂದು ವೈದ್ಯಶಾಸ್ತ್ರವನ್ನೇ ಹುಟ್ಟುಹಾಕಿದರು. ವೈದ್ಯೋಪಚಾರವನ್ನು ತಿಳಿಸುವ ಚರಕನು ಆ ಕುರಿತು ಸಂಹಿತೆ ಬರೆದನೆಂದು ಹೇಳಲಾಗುತ್ತದೆ.

ಭಾರತೀಯ ವೈದ್ಯಪದ್ಧತಿಗೆ ಆಯುರ್ವೇದ ಎಂದು ಕರೆಯಲಾಗುತ್ತದೆ. ಪ್ರಾಚೀನ ನಾಲ್ಕು ವೇದಗಳಲ್ಲಿ ಯಜುರ್ವೇದವೂ ಒಂದು. ಯಜುರ್ವೇದದಲ್ಲಿ ಉಲ್ಲೇಖಿಸಿದ ಒಂದು ಭಾಗವೇ ಆಯುರ್ವೇದ. ಆಯುರ್ವೇದ ಎಂದರೆ ಆಯಸ್ಸನ್ನು ವೃದ್ಧಿಸುವ ವೇದ ಎಂದೇ ಅರ್ಥ. ರೋಗ ರುಜಿನಗಳಿಂದ ದೇಹವನ್ನು ಕಾಪಾಡಿಕೊಂಡರೆ ಆಯಸ್ಸು ತಂತಾನೆ ವೃದ್ಧಿಗೊಳ್ಳುತ್ತದೆ. ಹೀಗಾಗಿ ಆಯುರ್ವೇದಕ್ಕೆ ಭಾರತೀಯ ಪರಂಪರೆಯಲ್ಲಿ ಮಹತ್ವದ ಸ್ಥಾನವಿದೆ. ವಾಗ್ಭಟನ ಅಷ್ಟಾಂಗ ಹೃದಯ ವೈದ್ಯಪದ್ಧತಿಯನ್ನು ತಿಳಿಸುವ ಮಹತ್ವದ ಗ್ರಂಥ.

ಕರ್ನಾಟಕದಲ್ಲಿ ವೈದ್ಯಶಾಸ್ತ್ರದ ಕುರಿತು ಮಹತ್ವದ ಗ್ರಂಥಗಳನ್ನು ರಚಿಸಿದ ಅನೇಕ ವಿದ್ವಾಂಸರು ಆಗಿಹೋಗಿದ್ದಾರೆ. ಇವರು ಕೇವಲ ವೈದ್ಯಶಾಸ್ತ್ರದ ಕುರಿತು ಮಾತ್ರ ಗ್ರಂಥ ರಚಿಸಲಿಲ್ಲ. ಸ್ವತಃ ವೈದ್ಯ ವಿದ್ಯೆಯಲ್ಲಿ ಪರಿಣತರೂ ಆಗಿದ್ದರೆಂದು ತಿಳಿದುಬರುತ್ತದೆ. ಅಂತಹ ಮಹನೀಯರಲ್ಲಿ ಸಮಂತಭದ್ರ (ಕ್ರಿ.ಶ. ೨ನೇ ಶತಮಾನ), ಪೂಜ್ಯಪಾದ(ಕ್ರಿ.ಶ. ೫ನೇ ಶತಮಾನ) ಮುಂತಾದ ವೈದ್ಯಶಾಸ್ತ್ರ ಕೃತಿ ರಚನೆಕಾರರಿದ್ದರೆಂದು ತಿಳಿದುಬರುತ್ತದೆ. ಆದರೆ ಅವರ ವೈದ್ಯಶಾಸ್ತ್ರ ಗ್ರಂಥಗಳಾವೂ ಉಪಲಬ್ಧವಿಲ್ಲ. 'ಪೂಜ್ಯಪಾದನ ಕಲ್ಯಾಣಕಾರಕ

ಕೃತಿಯೇ ಉಪಲಬ್ಧವಾದ ಮೊದಲ ವೈದ್ಯಶಾಸ್ತ್ರ ಕೃತಿಯೆಂದು ಪರಿಗಣಿತವಾದರೂ ಅದು ಸಂಸ್ಕೃತದಲ್ಲಿದೆ.'[೧೫] ಈ ರೀತಿ ಸಂಸ್ಕೃತದಲ್ಲಿ ಬಂದ ವೈದ್ಯಶಾಸ್ತ್ರ ಕೃತಿಗಳಿಗೆ ಕನ್ನಡದಲ್ಲಿ ವೃತ್ತಿ, ಟೀಕನ್ನು ಬರೆದ ಕುರಿತು ಉಲ್ಲೇಖಗಳು ದೊರೆಯುತ್ತವೆ.

ಪೂಜ್ಯಪಾದನ 'ಕಲ್ಯಾಣಕಾರಕ' ಸಂಸ್ಕೃತ ಗ್ರಂಥವನ್ನು ಅನುಸರಿಸಿ ಜಗದ್ದಾಳ ಸೋಮನಾಥನು(ಕ್ರಿ.ಶ. ೧೦೭೭) ಕನ್ನಡದಲ್ಲಿ ಅದೇ ಹೆಸರಿನಲ್ಲಿ ಬರೆದ ಕೃತಿಯಾಗಿದೆ. ಈ ಗ್ರಂಥದಲ್ಲಿ ರಕ್ತ, ಪಿತ್ತ, ಜ್ವರ, ಕ್ಷಯ, ಗುಲ್ಮ ಮುಂತಾದ ರೋಗಗಳ ಲಕ್ಷಣಗಳನ್ನು ಹೇಳುವುದರೊಂದಿಗೆ ರೋಗಗಳ ಪರೀಕ್ಷಾಕ್ರಮ, ನಾಡಿಪರೀಕ್ಷೆ, ಚಿಕಿತ್ಸಾವಿಧಾನ, ಔಷಧೋಪಚಾರ, ಪಥ್ಯ, ಔಷಧ ತೆಗೆದುಕೊಳ್ಳುವಲ್ಲಿ ಹಾಗೂ ಪಥ್ಯ ಕೆಟ್ಟಲ್ಲಿ ಉಂಟಾಗುವ ಅಡ್ಡ ಪರಿಣಾಮಗಳು, ಅಡ್ಡ ಪರಿಣಾಮಗಳಿಗೆ ಪರಿಹಾರ(ಉತಾರ) ಇತ್ಯಾದಿ ವಿಚಾರಗಳನ್ನು ತಿಳಿಸಿದ್ದಾನೆ. ಜ್ವರ ಬಂದಾಗ ಮಾಡಬೇಕಾದ ಪಥ್ಯ ಕ್ರಮವನ್ನು ಈ ರೀತಿಯಾಗಿ ಹೇಳುತ್ತಾನೆ. 'ಜ್ವರದ ಆದಿಯೋಳ್ ಉಪವಾಸಂ, ಜ್ವರ ಮಧ್ಯಮದಲ್ಲಿ ಗಂಜಿ, ಪೇಳ್ವ ಕಷಾಯಮಂ ಜ್ವರ ಪಾಕದೋಳ್, ಅಸ್ತಮಿತ ಜ್ವರದೊಳ್ ಮಲಹರಣಂ ಇನಿತು ಆರೋಗ್ಯಕರಂ'[೧೬] ಎಂದು ತಿಳಿಸುತ್ತಾನೆ. ಹಾಗೆಯೇ ಹೃದಯ ರೋಗಗಳ ಕುರಿತ ಪ್ರಸ್ತಾಪವೂ ಈ ಕೃತಿಯಲ್ಲಿದೆ. ಆಹಾರ ಪಾನೀಯಗಳನ್ನು ನಿಯಮಿತವಾಗಿ ತೆಗೆದುಕೊಳ್ಳದಿದ್ದಾಗ ರೋಗ ಉಂಟಾಗುತ್ತದೆ ಎಂಬ ಮಾತನ್ನೂ ತಿಳಿಸುತ್ತಾನೆ.

ಕ್ರಿ.ಶ. ೧೫೦೦ರಲ್ಲಿದ್ದ ಶ್ರೀಧರಾಚಾರ್ಯರು 'ವೈದ್ಯಾಮೃತ' ಎಂಬ ಕೃತಿಯನ್ನು ರಚಿಸಿದ್ದಾನೆ. ಜೈನ ಮತಾವಲಂಬಿಯಾದ ಈತನು ವೈದ್ಯಾಮೃತವನ್ನು ಪ್ರಸ್ತುತಪಡಿಸಲು ಚಂಪೂ ಶೈಲಿಯನ್ನು ಬಳಸಿದ್ದಾನೆ. ವಿವಿಧ ಸ್ವರೂಪದ ಜ್ವರ, ಮೂಲವ್ಯಾಧಿ, ಇತ್ಯಾದಿ ವಿವರಗಳನ್ನು ನೀಡುವ ಶಾಸ್ತ್ರಕಾರ 'ಶ್ರೀಧರದೇವರು ವಿರಚಿತಮಪ್ಪ ವೈದ್ಯಾಮೃತ ಸಕಲಜಗಜ್ಜನ ಹಿತಾರ್ಥ ಕಾರಣ' ಎಂದು ತಿಳಿಸುತ್ತಾನೆ.

ಶ್ರೀಧರಾಚಾರ್ಯನಿಗೆ ಹತ್ತಿರದ ಕಾಲದಲ್ಲಿದ್ದ ಸಾಳ್ವನು 'ವೈದ್ಯ ಸಾಂಗತ್ಯ' ಎಂಬ ಶಾಸ್ತ್ರ ಗ್ರಂಥವನ್ನು ಬರೆದಿದ್ದಾನೆ. ಇದಲ್ಲದೆ ಕವಿಯೂ, ಸಂಗೀತಗಾರನೂ ಆಗಿದ್ದನೆಂಬ ಅಭಿಪ್ರಾಯವಿದೆ. ಸಾಂಗತ್ಯ ರೂಪದಲ್ಲಿರುವ ವೈದ್ಯ ಸಾಂಗತ್ಯದಲ್ಲಿ ವಿವಿಧ ರೋಗ ವಿಚಾರ, ಔಷಧೋಪಚಾರ ಮುಂತಾದ ವಿಷಯಗಳ ಪ್ರಸ್ತಾಪವಿದೆ.

ಕ್ರಿ.ಶ. ೧೮ನೇ ಶತಮಾನದಲ್ಲಿದ್ದ ಬೊಮ್ಮಯ್ಯ ಎಂಬ ಶಾಸ್ತ್ರಕಾರ 'ವೈದ್ಯ ಕಂದ' ಎಂಬ ಕೃತಿಯನ್ನು ರಚಿಸಿದ್ದಾನೆ. ಚರಕ, ಶುಶ್ರುತ ಮುಂತಾದ ಪ್ರಾಚೀನ ವೈದ್ಯರ ವಿಚಾರಗಳನ್ನು ವೈದ್ಯಕಂದದಲ್ಲಿ ಹೇಳಿರುವುದಾಗಿ ಬೊಮ್ಮಯ್ಯ ಹೇಳಿದ್ದಾನೆ.

ಇದೇ ಶತಮಾನದಲ್ಲಿದ್ದ ಕಳಲೆ ವೀರರಾಜನು 'ಸಕಲ ವೈದ್ಯ ಸಂಹಿತ ಸಾರಾರ್ಣವ' ಬರೆದಿರುವುದು ತಿಳಿದುಬಂದಿವೆ. ದೇವಚಂದ್ರನ ರಾಜಾವಳಿ ಕೃತಿಯಲ್ಲಿ 'ಕಳಲೆ ವಂಶದ ವೀರರಾಜಂ ದೊಡ್ಡ ಕೃಷ್ಣರಾಯರ ದಿವಸದಲ್ಲಿ ಅನೇಕ ವೈದ್ಯಶಾಸ್ತ್ರಂಗಳೊಳಿರ್ಪ ರೋಗಹರಮಪ್ಪ ಚಿಕಿತ್ಸೆಗಳಂ ಕನ್ನಡ ವಾಕ್ಯದೊಳ್ ವೀರರಾಜೋಕ್ತಿ ವಿಲಾಸವೆಂದು ಬರೆಯಿಸಿದಂ'[೧೭] ಎಂಬ ಉಲ್ಲೇಖವಿದೆ. ಕಲ್ಕ, ಲೇಹ, ಘೃತ ರಸಾಯನಗಳಿಂದ ರೋಗ ನಿಧಾನವನ್ನು ಹೇಗೆ ಮಾಡಬಹುದು ಎಂಬ ವಿಚಾರ ತಿಳಿಸುವುದರೊಂದಿಗೆ ರೋಗ ಲಕ್ಷಣ, ನಾಡಿ ಪರೀಕ್ಷಾ ವಿಧಾನ ಇತ್ಯಾದಿ ವಿಚಾರಗಳಿವೆ.

ಬಂಕಾಪುರದ ಹತ್ತಿರದ ಮೂಲವಳ್ಳಿ ಎಂಬ ಗ್ರಾಮದವನೆಂದು ಹೇಳಲಾಗುವ ವೆಂಕಟೇಶ ಎನ್ನುವ ವ್ಯಕ್ತಿಯಿಂದ ರಚಿತವಾದ 'ಜ್ಞಾನ ಬೋಧಾಂಕಿತ ವೈದ್ಯಾಮೃತವು' ವೈದ್ಯ ವಿಚಾರವನ್ನು ತಿಳಿಸುವ ನಾಲ್ಕು ಸಂಧಿಗಳನ್ನೊಳಗೊಂಡ ಸಾಂಗತ್ಯ ಕೃತಿ. ಗಿರಿಜೆಗೆ ಶಿವನು ವೈದ್ಯ ವಿಚಾರವನ್ನು ತಿಳಿಸುವ ರೀತಿಯಲ್ಲಿ ನಿರೂಪಿಸಲಾದ ಕೃತಿ ಇದು.

ಕೃತಿಯಲ್ಲಿ ಕುಷ್ಠ, ಕ್ಷಯ, ದಂತಗಳ ಕುರು ಇತ್ಯಾದಿ ವಿಚಾರಗಳೊಂದಿಗೆ ಮೂಲವ್ಯಾಧಿ, ಬಾಣಂತಿಯರ ಔಷಧ, ಬಾಲಗ್ರಹ ಚಿಕಿತ್ಸೆ ಇತ್ಯಾದಿ ವಿಚಾರಗಳನ್ನು ಹೇಳಲಾಗಿದೆ.

ವೈದ್ಯಶಾಸ್ತ್ರದಲ್ಲಿ ವಿಷವೈದ್ಯಕ್ಕೆ ವಿಶೇಷ ಸ್ಥಾನವಿದೆ. ವಿಷವೈದ್ಯವನ್ನು ಕುರಿತು ಕನ್ನಡದಲ್ಲಿ ಹಲವು ಕೃತಿಗಳು ಬರೆಯಲ್ಪಟ್ಟಿವೆ. ಸಂಸ್ಕೃತದಲ್ಲಿ 'ಗರುಡ ಪಂಚಾಕ್ಷರಿಕಲ್ಪ' ಕೃತಿ ವಿಷವೈದ್ಯ ವಿಚಾರ ತಿಳಿಸುವ ಪ್ರಮುಖ ಕೃತಿಯೆಂದು ಪರಿಗಣಿಸಲಾಗಿದೆ. ಕನ್ನಡದಲ್ಲಿ ಮಂಗರಾಜ (೧೩೬೦)ನ 'ಖಗೇಂದ್ರ ಮಣಿದರ್ಪಣ' ವಿಷವೈದ್ಯವನ್ನು ವಿವರಿಸುವ ಕೃತಿಗಳಲ್ಲಿ ಪ್ರಾಚೀನ ಕೃತಿ. 'ಗುಣನಿಧಿ ಖಗೇಂದ್ರ ಮಣಿದರ್ಪಣಮೀ ಕೃತಿ ರಚಿತವಾಯ್ತು ಮಂಗಪ್ರಭುವಿಂ'[೧೮] ಎಂಬ ಉಲ್ಲೇಖ ಈ ಕೃತಿಯಲ್ಲಿಯೇ ದೊರೆಯುತ್ತದೆ.

'ಧರೆಯೊಳ್ ಸರ್ವಜನೋಪಕಾರಮೆನಲ್ ಈ ಮಂತ್ರೌಷಧಿವ್ರಾತಮಂ
ನಿರುತ ಭಾವಿಸಿ ಪೇಳ್ವ ಮಾನವನೆ ತಾಂ ಧರಾಚಕ್ರದೊಳ್'[೧೯] ಕಾವ್ಯಗಳಿಗಿಂತ ಜನೋಪಕಾರಿಯಾದ ವೈದ್ಯಗ್ರಂಥವನ್ನು ರಚನೆ ಮಾಡುವುದು ಮೇಲು ಎಂದು ತಿಳಿಸುತ್ತಾನೆ. ವಿಷಸರ್ಪ ಇತ್ಯಾದಿಗಳಲ್ಲದೆ ಇತರ ರೀತಿಯಲ್ಲಿ ಮಾನವನ ದೇಹವನ್ನು ಸೇರಿದ ವಿಷವನ್ನು ಮಂತ್ರ ತಂತ್ರ ಔಷಧಿಯಿಂದ ಹೊರತೆಗೆಯುವ ವಿಧಾನ ವಿವರಗಳು ಈ ಕೃತಿಯಲ್ಲಿವೆ.

ವಿಷ ವೈದ್ಯದಂತೆಯೇ ಸ್ತ್ರೀವೈದ್ಯ, ಬಾಲಗ್ರಹ ಚಿಕಿತ್ಸೆ ಮುಂತಾದ ಪ್ರತ್ಯೇಕ ಕೃತಿಗಳು ಕನ್ನಡದಲ್ಲಿ ರಚನೆಗೊಂಡಿವೆ. ಮಾನಸೋಲ್ಲಾಸದಲ್ಲಿ ಶಸ್ತ್ರಕ್ರಿಯೆಯ ವಿಚಾರಗಳು ದೊರೆಯುತ್ತದೆ.

ಶಿವತತ್ವ ರತ್ನಾಕರದಲ್ಲಿಯೂ ವೈದ್ಯ ವಿಚಾರಗಳನ್ನು ತಿಳಿಸುವ ವಿವರಗಳು ಕಂಡುಬರುತ್ತದೆ. ಹೀಗೆ ಮಾನವನ ಆರೋಗ್ಯಕ್ಕೆ ಮುಖ್ಯವಾಗಿದ್ದ ಅನಾರೋಗ್ಯವನ್ನು ಹೊಡೆದೋಡಿಸಲು ಅವಶ್ಯಕವಾದ ವಿವರಗಳನ್ನು ನೀಡುವ ವೈದ್ಯಗ್ರಂಥಗಳ ಕುರಿತು ಇಲ್ಲಿ ಗಮನಿಸಲಾಗಿದೆ. ಹಾಗೆಯೇ ಮನುಷ್ಯನಿಗೆ ಸಂಗಾತಿಯಾದ ಸಾಕುಪ್ರಾಣಿಗಳ ಆರೋಗ್ಯದ ಕಡೆಗೂ ಲಕ್ಷ್ಯ ವಹಿಸಿದ ಮಾನವನು ಅವುಗಳ ಕುರಿತೂ ಗ್ರಂಥ ಬರೆದಿದ್ದಾನೆ. ಅವುಗಳನ್ನು ಇಲ್ಲಿ ಗಮನಿಸಬಹುದು.

### ೨.೨.೩. ಪಶುವೈದ್ಯ

ಮನುಷ್ಯರು ಅನಾದಿಕಾಲದಿಂದಲೂ ಸಾಕುತ್ತ ಬಂದ ಪ್ರಾಣಿ ಗೋವು. ಕೃಷಿ ಪ್ರಧಾನವಾದ ಭಾರತದಲ್ಲಿ ಕೃಷಿ ಚಟುವಟಿಕೆಯಲ್ಲಿ ನೆರವಾಗುವ ಗೋವಿಗೆ ಅತ್ಯಂತ ಮಹತ್ವದ ಸ್ಥಾನ ಕೊಡಲಾಗಿದೆ. ಮಾನವರು ತಮ್ಮ ದೇಹಕ್ಕೆ ತಗಲುವ ರೋಗಗಳನ್ನು ನಿವಾರಿಸಿಕೊಳ್ಳಲು ಔಷಧೋಪಚಾರಕ್ಕೆ ಮುಂದಾದಂತೆ ತನ್ನ ಸಾಕುಪ್ರಾಣಿಗಳ ರೋಗರುಜಿನ ಗಳಿಗೂ ಔಷಧ ಮಾಡುವ ಕಲೆಯನ್ನು ಹೊಂದಿದ್ದಾರೆ. ಇದರ ಪರಿಣಾಮವೇ ಗೋವೈದ್ಯ. ಗೋವೈದ್ಯಕ್ಕೆ ಸಂಬಂಧಿಸಿದಂತೆ ಕೀರ್ತಿವರ್ಮ(ಕ್ರಿ.ಶ. ೧೧೦೦)ನ ಕೃತಿಯೇ ಮೊದಲಿನದೆನಿ ಸುತ್ತದೆ. ಈತನ ಗೋವೈದ್ಯ ಕೃತಿಯನ್ನು ಉಲ್ಲೇಖಿಸುತ್ತ 'ಆಯುರ್ವೇದ ಅಂಗವಾಗಿ ಮನುಷ್ಯರ ಚಿಕಿತ್ಸೆಯೂ ಅಶ್ವಶಾಸ್ತ್ರ, ಗಜಶಾಸ್ತ್ರಗಳ ಅಂಗವಾಗಿ ಆಯಾ ಪ್ರಾಣಿರೋಗಗಳ ಚಿಕಿತ್ಸೆಯೂ ಪ್ರತಿಪಾದಿತವಾಗುತ್ತಿದ್ದವೇ ಹೊರತು ಗೋವೈದ್ಯವನ್ನೇ ಕುರಿತ ಪ್ರತ್ಯೇಕ ಗ್ರಂಥ ಸಂಸ್ಕೃತದಲ್ಲಿ ಕೂಡ ಅಲ್ಲಿಯವರೆಗೆ ದೊರೆಯದು'[೨೦] ಎಂದಿರುವುದು ಈ ಕೃತಿಯ ಹೆಗ್ಗಳಿಕೆಗೆ ಸಾಕ್ಷಿಯಾಗಿದೆ.

### ೨.೨.೪. ಸೂಪಶಾಸ್ತ್ರ

'ಸೂಪ' ಎಂದರೆ ಅಡುಗೆ ಎಂಬ ಅರ್ಥವನ್ನು ನೀಡುತ್ತದೆ. ಸಂಸ್ಕೃತದ 'ಅಡು' ಎಂಬ ಧಾತುವಿನಿಂದ 'ಅಡುಗೆ' ಶಬ್ದದ ನಿಷ್ಪತ್ತಿಯಾಗಿದೆ. ಅಡು ಎಂದರೆ ಬೇಯಿಸು ಎಂಬ ಅರ್ಥವನ್ನು ಕೊಡುತ್ತದೆ. "ಹಸಿಯಾದ ಆಹಾರವನ್ನು ರುಚಿಯಾದ ಊಟವನ್ನಾಗಿ ಪರಿವರ್ತಿಸುವ ವಿಧಾನವೇ ಅಡುಗೆ ಶಾಸ್ತ್ರ" ಎಂದು 'ನಮ್ಮ ಅಡುಗೆ ಪಥ್ಯದ ಊಟ' ಎಂಬ ಕೃತಿಯಲ್ಲಿ ಎಂ. ಶಿವರಾಮ ಅವರು ಸ್ಪಷ್ಟಪಡಿಸುತ್ತಾರೆ.

ಸೂಪಶಾಸ್ತ್ರ ಕೃತಿ ಸಂಪಾದಕರಾದ ಎಸ್.ಎಸ್. ಕೃಷ್ಣಜೋಯಿಸ್ ಅವರು "ಮನುಷ್ಯನ ಅಸ್ತಿತ್ವಕ್ಕೆ ಕಾರಣವಾದ ಮತ್ತು ಗುಣಗಳನ್ನು ಹೊರಹೊಮ್ಮಿಸಬಲ್ಲ ಅನ್ನದ ತಯಾರಿಕೆ

ಉಪಯೋಗ ಕ್ರಮ ಮುಂತಾದ ವಿಚಾರಗಳನ್ನು ಶಾಸ್ತ್ರ ರೂಪವಾಗಿ ತಿಳಿಸುವುದೇ ಸೂಪಶಾಸ್ತ್ರ" ಎಂದಿರುವರು. ಹಾಗೆಯೇ "ಪಾಕಶಾಸ್ತ್ರ' ಅಥವಾ 'ಅಡುಗೆಯ ಶಾಸ್ತ್ರ' ಎಂಬುದರ ಪರ್ಯಾಯ ಪದವೇ ಸೂಪಶಾಸ್ತ್ರ. ಅಂದರೆ ಅಡುಗೆ ಮಾಡುವ ಪದ್ಧತಿಯನ್ನು ಕ್ರಮಬದ್ಧವಾಗಿ ತಿಳಿಸುವ ಶಾಸ್ತ್ರ ಅಥವಾ ಗ್ರಂಥ ಎಂದು ಕರೆಯಬಹುದು. ಕನ್ನಡ ಸಾಹಿತ್ಯ ಪರಿಷತ್ತಿನ ನಿಂಘಟಿನಲ್ಲಿ 'ಸೂಪ'ಕ್ಕೆ ಅನ್ನದೊಂದಿಗೆ ಕಲಸಿಕೊಳ್ಳುವ ವ್ಯಂಜನ ಪದಾರ್ಥ. ಸಾರು, ರೊಟ್ಟಿ ಇತರೆ ಮೇಲೋಗರ (ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಂಘಟು, ಸಂಪುಟ–೮, ಪು. ೮೯೫೭) ಎಂದು ಅರ್ಥ ಕೊಡಲಾಗಿದೆ. ಅದರಂತೆ ಲೋಕೋಪಕಾರ ಕೃತಿಯಲ್ಲಿ ಸಹ ಸೂಪಶಾಸ್ತ್ರದ ಬಗ್ಗೆ ಮಾಹಿತಿಯನ್ನು ಶಾಸ್ತ್ರೀಯವಾಗಿ ಉಲ್ಲೇಖಿಸಿರುವುದನ್ನು ಕಾಣುತ್ತೇವೆ. ಕಿಟಲ್ ಕೋಶದಲ್ಲಿ "ಸೂಪ' ಶಬ್ದಕ್ಕೆ 'ಸೂವ'(Soup, borth) Split pease a cook" ಎಂಬ 'ಸೂಪಶಾಸ್ತ್ರ' ಎಂಬುದಕ್ಕೆ "A Book on Cookery" ಎಂದು ತಿಳಿಸಲಾಗಿದೆ.

ಮೇಲಿನ ಎಲ್ಲ ವಿಚಾರಗಳನ್ನು ನೋಡಿದಾಗ ದ್ವಿದಳ ಧಾನ್ಯಗಳ ಸಾರವನ್ನು, ಕಸವನ್ನು, ಬೇಳೆಕಾಳುಗಳ ತಿಳಿಯ ಕಟ್ಟನ್ನು ಸೂಪ ಎಂಬ ಅರ್ಥದಲ್ಲಿ ಬಳಸಿಕೊಳ್ಳಲಾಗಿದೆ ಎಂಬುದನ್ನು ಗಮನಿಸಬಹುದು. ಇನೇ 'ಮಂಗರಸ'ನ ಸೂಪಶಾಸ್ತ್ರ ಕೃತಿ ಅತ್ಯಂತ ಮಹತ್ವದ ಕೃತಿ. ಇದು ಕ್ರಿ.ಶ. ೧೫೦೮ರಲ್ಲಿ ರಚನೆಗೊಂಡಿದ್ದು, ೬ ಅಧ್ಯಾಯಗಳ ೩೫೮ ಪದ್ಯಗಳಲ್ಲಿ ಸುಮಾರು ೨೬೦ ವಿವಿಧ ಬಗೆಯ ಪಾಕಶಾಸ್ತ್ರ ವಿಧಾನಗಳನ್ನು ವಾರ್ಧಕ ಷಟ್ಪದಿಯಲ್ಲಿ ಹೇಳಿರುವನು. ಈ ಕೃತಿಯು ಸಂಪೂರ್ಣವಾಗಿ ಅಡುಗೆ ಮಾಡುವ ವಿಧಾನಗಳನ್ನು ಒಳಗೊಂಡಿರುವುದರಿಂದ ಈ ಗ್ರಂಥಕ್ಕೆ ಸೂಪಶಾಸ್ತ್ರ ಎಂಬ ಹೆಸರು ಅನ್ವರ್ಥಕವಾಗಿ ಬಂದಿದೆ. ಕೃತಿ ರಚನೆಕಾರರು ಪೀಠಿಕಾ ಭಾಗದಲ್ಲಿ ಹೇಳುವ ಹಾಗೆ:

"ಜೀವಿಗಳ ತನೂರಕ್ಷಣೆಗೆ
ರಸರೂಪ ಗಂಧ ಶಬ್ದ ಸ್ಪರ್ಶ ಭೋಗಂಗ
ಳೆಸಕವೇ ಮುಖ್ಯಮಾ ಪಂಚವಿಧ ವಿಷಯ ಭೋಗೋಪಭೋಗಂಗಳೊಳಗೆ
ರಸನೇಂದ್ರಿಯಂ ತೃಪ್ತಿ ಪಡೆಯಲಿಹಪರ ಸೌಖ್ಯ
ಮುಸುಕುವುದು ನಿಜಮದರಿನಾ ಭೋಜ್ಯವಸ್ತುವಂ
ಹಸನಾಗಿ ಪಾಕಮಂ ಮಾಳ್ಪ ವಿವರದ ಶಾಸ್ತ್ರಮಂ ಮನಗೊಂಡುಪೆಳ್ವಂ"[೨೦] ಎಂದು

ಸೂಪಶಾಸ್ತ್ರ ಗ್ರಂಥದ ಉದ್ದೇಶ ಮತ್ತು ಅದರ ಮಹತ್ವವನ್ನು ತಿಳಿಸಿದ್ದಾನೆ.

### ೨.೨.೫. ನಾಡಿಶಾಸ್ತ್ರ

ಪ್ರಾಚೀನ ಕಾಲದಿಂದಲೂ ಭಾರತದೇಶದಲ್ಲಿ ಸಮೃದ್ಧವಾಗಿ ಬೆಳೆದುಬಂದ ಹಲವು ಶಾಸ್ತ್ರಗಳಲ್ಲಿ ನಾಡಿಶಾಸ್ತ್ರವು ಪ್ರಮುಖವಾದುದು ಮಾನವರು ತಮ್ಮ ಜೀವಿತಾವಧಿಯಲ್ಲಿ ರೋಗದಿಂದ ಬಳಲದೆ, ಲವಲವಿಕೆಯಿಂದ ಆರೋಗ್ಯದಿಂದ ಬದುಕಬೇಕು ಎಂಬ ಆಸೆ ಪ್ರತಿಯೊಬ್ಬನಿಗೂ ಇರುತ್ತದೆ. ಆದಕಾರಣ ಮಾನವರು ಆರೋಗ್ಯದಿಂದ ಇರಲು ತಮ್ಮ ಜೀವನದಲ್ಲಿ ಆಯುರ್ವೇದವನ್ನು ಅನುಸರಿಸುತ್ತಿದರು. ನಾಡಿಶಾಸ್ತ್ರದಲ್ಲಿ ಪರಿಣತಿಯನ್ನು ಹೊಂದಲು ಅಭ್ಯಾಸದ ಆರಂಭದಲ್ಲಿಯೇ ತಮ್ಮ ಸ್ವಂತ ಕೈಗಳನ್ನು ಹಿಡಿದು ಪರೀಕ್ಷಕರು ತಮ್ಮ ಬೆರಳುಗಳಿಂದ ನಾಡಿಯನ್ನು ಒತ್ತಿ ದೋಷಗಳಲ್ಲಿಯ ಭೇದಗಳನ್ನು ಗೊತ್ತು ಮಾಡಿಕೊಳ್ಳಬೇಕು. ನಾಡಿಯಲ್ಲಿ ವಾತ-ಪಿತ್ತ-ಕಫ ಸ್ಥಾನಗಳನ್ನು ಸೂಕ್ಷ್ಮವಾಗಿ ಕಂಡುಹಿಡಿದು, ನಾಡಿಯಲ್ಲಿ ಉಂಟಾಗುವ ಏರಿಕೆ ತಗ್ಗುವಿಕೆಗಳನ್ನು ತಿಳಿಯಬೇಕಾದರೆ, ಅಭ್ಯಾಸವೇ ಮುಖ್ಯವಾಗುತ್ತದೆ. ಬೆರಳುಗಳ ತುದಿಯಿಂದ ನಾಡಿಯನ್ನು ಒತ್ತಿದಾಗ ನಾಡಿಯೊಳಗಿನ ರಕ್ತಪ್ರವಾಹದ ಗತಿಯನ್ನು ತಿಳಿಯಬಹುದು. ದೋಷಗಳ ಸ್ಥಿತಿಯನ್ನು ತಿಳಿಯುವುದಕ್ಕೆ ಈ ಒತ್ತುವಿಕೆಯ ಕ್ರಮವನ್ನು ಅನುಸರಿಸಲಾಗುತ್ತದೆ.

ರೋಗಿಗಳಲ್ಲಿ ಮೂರು ಸ್ಥಾನಗಳ ನಾಡೀಗತಿಗಳು ಬೇರೆ ಬೇರೆಯಾಗಿರುವುದನ್ನು ವಿದ್ವಾಂಸರು ಈ ರೀತಿ ಗುರುತಿಸಿದ್ದಾರೆ. "ನಾಡಿಯ ಮಸ್ತಕದ ಸ್ವಲ್ಪ ಅಂಶ ಕಡಿದು ಹೋದ ಹಾಗೆ ತಲೆ ಚಟ್ಟಿಯಾಗಿರುವುದಕ್ಕೆ ತಲೆ ಇಲ್ಲದ್ದು ಎನ್ನುವುದಾಗಿರುತ್ತದೆ. ಮೇಲಿನ ಹೆಚ್ಚಿನ ಅಂಶ ಹೋಗಿ ಕೆಳಗಿನ ಭಾಗ ಪರೀಕ್ಷಕನ ಕೈ ಬೆರಳಿಗೆ ಸರಿಯಾಗಿ ತಗಲದಿರುವುದಕ್ಕೆ ಸ್ತಬ್ಧ ಏರಿಕೆ ಇಲ್ಲದ್ದು ಲೋಪ, ಸ್ವಸ್ಥಾನ ಬಿಟ್ಟು ಮೇಲಕ್ಕೆ ಅಥವಾ ಕೆಳಕ್ಕೆ ಒತ್ತುವುದಕ್ಕೆ ಸ್ಥಾನಚ್ಯೂತ, ಒಮ್ಮೆ ಮೇಲಕ್ಕೆ ಒಮ್ಮೆ ಕೆಳಕ್ಕೆ ಉಯ್ಯಾಲೆಯಂತೆ ಇತ್ತಟ್ಟು ಒತ್ತುವುದಕ್ಕೆ ದೋಲಾ, ಸಪೂರವಾಗಿಯೂ ಕಠಿಣವಾಗಿಯೂ ಕಾಣುವುದಕ್ಕೆ ತಾನ್ತ್ರೀ ಎನ್ನುವುದಾಗಿರುತ್ತದೆ. ನಾಡಿಯು ಸ್ವಸ್ಥಾನದ ಎಡಬಲದ ಪಕ್ಕಗಳಲ್ಲಿ ಅಥವಾ ಆಗ್ನೇಯಾದಿ ನಾಲ್ಕು ಮೂಲೆಗಳಲ್ಲಿ ಸ್ಪೃಶ್ಯವಾಗುವುದುಂಟು. ಒಂದೇ ಸ್ಥಾನದಲ್ಲಿ ಕೆಲವು ನಾಡಿಗಳು, ಪೂರ್ಣವಾಗಿ, ತಲೆಯಿಲ್ಲದೆ, ಕೆಲವು ಸ್ತಬ್ಧವಾಗಿ, ಕೆಲವು ಪಾಂಕ್ತವಾಗಿ ಸ್ಥಾನದಲ್ಲಿದ್ದು, ಕೆಲವು ಸ್ಥಾನಚ್ಯುತವಾಗಿರುವುದು ಸಹ ಉಂಟು. ಈ ವಿಕಾರಗಳೊಳಗೆ ಒಂದು ಸ್ಥಾನದಲ್ಲಿ ಕಾಣುವಂಥವು ಇತರ ಸ್ಥಾನಗಳಲ್ಲಿ ಕಾಣಬೇಕೆಂತಿಲ್ಲ. ಪರೀಕ್ಷಕನಾದವನು ಈ ಎಲ್ಲ ಅಂಶಗಳನ್ನು ಬಹಳ ಸೂಕ್ಷ್ಮವಾಗಿ ಗ್ರಹಿಸಬೇಕಾಗುತ್ತದೆ."[೨೨]

ದೋಷಗನ ಕ್ಷಯ-ವೃದ್ಧಿ ಲಕ್ಷಣಗಳನ್ನು ಚರಕ ಸಂಹಿತೆಯಲ್ಲಿ ಈ ರೀತಿ ಹೇಳಲಾಗಿದೆ.

"ಕರ್ಮಣಾಂ ಪ್ರಕೃತೇ ಹಾನಿವೃದ್ಧಿರ್ವಾಪಿ ವಿರೋಧಿನಾಮು ।
ದೋಷ ಪ್ರಕೃತಿ ವೈಶೇಷ್ಯಂ ನಿಯತಂ ವೃದ್ಧಿ ಲಕ್ಷಣಮ್"[೨೩]

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿ ಸಂಗ್ರಹದಲ್ಲಿ ನಾಡೀ ಪರೀಕ್ಷೆ, ನಾಡಿಶಾಸ್ತ್ರ, ನಾಡಿ ವಿಜ್ಞಾನಿಗಳ ಬಗ್ಗೆ ಮಾಹಿತಿ ಇದೆ. ಹಸ್ತಪ್ರತಿಯಲ್ಲಿ ನಾಡೀಶಾಸ್ತ್ರದ ಕುರಿತು ಶಿವಪಾರ್ವತಿಯರ ಸಂವಾದವಿದೆ.

"**ನಾಡೀಶಾಸ್ತ್ರ** ಹಸ್ತಪ್ರತಿ ಸಂಖ್ಯೆ ೧೩೮೦ ಈ ಹಸ್ತಪ್ರತಿ ಉದ್ದ x ಅಗಲ

೧೬೧/೨ x ೧೧/೨ " ಓಗರಿ ಇದ್ದು ಕೃತಿಯ ಪ್ರಾರಂಭದಲ್ಲಿ

ಆದಿ : ಕೈಲಾಸ ಶಿಖರೇ ರಮ್ಯೇ ನಾನಾರತ್ನ ವಿಭೂಷಿತೇ ।
ನಾನಾ ಕಲ್ಪದ್ರುಮಾಕೀರ್ಣ ರತ್ನಸಿಂಹಾಸನಸ್ಥಿತೇ ॥

ಟೀಕು : ಕೈಲಾಸ ಶಿಖರದಲ್ಲಿ ಮನೋಹರವಾಗಿ ವೊಪ್ಪಿಯಿದ್ದಂಥಾ ಮುತ್ತು ವೈಡೂರ್ಯ ರತ್ನ ವಿದ್ರುಮಗಳಿಂದ ಕೀಲಿತವಾದಂಥಾ ಸಿಂಹಾಸನ ಮಧ್ಯದಲ್ಲಿ ಅನೇಕ ಕಲ್ಪದ್ರುಮದ ಮರಗಳ ನೆರಳಿನಲ್ಲಿ ರಾಜಯೋಗದಲಿ ಕೂಡಿಯಿದ್ದಂಥಾ ಈಶ್ವರನು ಅತಿಗುಪ್ತವಾಗಿ ಹಲವು ಕಾಲದಲ್ಲಿ ಪಾರ್ವತೀ ದೇವಿ ಈಶ್ವರನ ಬೆಸಗೊಂಡನು.

ಶ್ರೀದೇವಿ ಉವಾಚ॥
ದೇವ ದೇವ ಜಗನಾಥ ದೇವ ದೇವ ಮಮಪ್ರಿಯ
ದೇವ ದೇವ ತ್ರಿಲೋಕೇಶ ನಮಸ್ತೇ ಪರಮಾತ್ಮನೆ॥
ಲೋಕವಾದಿಶ್ಚ ಶಾಸ್ತ್ರಾಣಿ ಮಮಪ್ರೀತ್ಯರ್ಥ ಕಾರಣಂ।
ತಸ್ಮಾತ್ಕಾರಣಸರ್ವೇಶ ಬ್ರಹ್ಮಮೇ ಪರಮೇಶ್ವರ॥

ಟೀಕು॥ ಎಲೆ ಪರಮೇಶ್ವರ । ನಂದಾವರ್ತಂಗಳಿಗೆ ಒಡೆಯನಾದಂಥ ಶಿವನೇ। ನಿನಗೆ ಪ್ರಿಯವಾದಂಥ ಮೂರು ಲೋಕಕ್ಕೆ ಒಡೆಯನಾದಂಥ ಆ ಪರಮಾತ್ಮ ಸ್ವರೂಪನೆಯೆಂದು ನಮಸ್ಕಾರವ ಮಾಡಿ ಪಾರ್ವತಿಯು ಲೋಕಂಗಳಿಗೆ ಹಿತಕರಣವಾದಂಥ ನಾಡೀಶಾಸ್ತ್ರವನ್ನು ಕೇಳಯ್ಯಾ ಯೆಂದು ಜಗನ್ನಾಥ ಈಶ್ವರನ ಬೆಸಗೊಂಡಳು.

ಶ್ರೀ ಭಗವಾನುವಾಚ॥
ಪಂಚಭೂತಾತ್ಮಕೋ ದೇಹ ಸ್ತ್ರೀದೋಷಃ ಸಪ್ತಧಾತವಃ
ಜಾಗ್ರತ್ಸ್ವ ಸುಷುಪ್ತ್ಯಾದಿ ದ್ವಾದಶಮಲಸಂಯುತಂ॥
ತ್ರಯಂ ಶರೀರಜವ್ಯಾಪಿ ಉತ್ಪತ್ತಿಸ್ಥಿತಿ ಕಾರಣಂ।
ಮೌನಿ ಸರ್ವದೋಷಾಣಿ ಪ್ರಾಣೀ ಮಾರುತ ಸನ್ನಿಭಂ॥

ಟೀಕು॥ ಪೂರ್ವದಲ್ಲಿ ಪಿತ್ತಗತಿಯಾಗಿ ಮತ್ತೆ ವಾಯುಗತಿಯಾಗಿ ನಡೆವದು । ಅತ್ಯಂತ ಭ್ರಮಣೀಯಾಗಿ ನಡೆದರೆ ವಕ್ರಾದಿಗಳಲ್ಲಿ ಎಲ್ಲಾ ತಾವುಗಳಲ್ಲಿ ನಡವಣ। ಭ್ರಷ್ಟತ್ವವಾಗಿ ನಡೆದರೆ ತಲೋರೀಸಿತದಾನೀ ಸಮಸ್ತಗತಿಯಾಗಿ ಕೂಡಿಕೊಂಡು ಕಡೆಯಲು ಅಸಾಧ್ಯವಂತರೀತಿ ನಿಶ್ಚಯಂ ಮಾಡಬಾರದು.

ಅಂತ್ಯ : ಇತಿ ಪಾರ್ವತೀ ಸಂವಾದೇ

ಶ್ರೀ ಶಾರದಾಂಬಾಯನ್ಮಃ

ಅಸಮಗ್ರ ಹಾಳೆಗಳು ಮುರಿದಿವೆ. ಸಂಸ್ಕೃತ ಶ್ಲೋಕಗಳು ಅವುಗಳಿಗೆ ಕರ್ಣಾಟಕ ಟೀಕೆಯೂ ಇದೆ.

ಪಂಚಭೂತಾತ್ಮಕವಾದ ಶರೀರವನ್ನು ಹೊಂದಿದ ಜೀವನಿಗೆ ಬ್ರಹ್ಮಜ್ಞಾನವು ನಾಡೀ ಜ್ಞಾನದ ಪ್ರಾಮುಖ್ಯತೆಯು ಮೊದಲು ಹೇಳಿದೆ. ಆ ಬಳಿಕ ಇಪ್ಪತ್ತೆರಡು ಸಾವಿರ ನಾಡಿಗಳನ್ನೊಳಗೊಂಡ ಈ ಶರೀರಿದಲ್ಲಿ ಹದಿನಾರು ನಾಡಿಗಳು ಪ್ರಧಾನಗಳೆಂದು ಅವುಗಳ ನಾಮನಿರ್ದೇಶಗಳೊಡನೆ ವರ್ಣಿಸಿ ವೈದ್ಯನು ಯಾವ ರೋಗಕ್ಕೆ ಯಾವ ನಾಡಿಯ ಬೆಟ್ಟನ್ನು ಹೇಗೆ ಪರೀಕ್ಷಿಸಬೇಕು? ನಾಡೀ ವಿಜ್ಞಾನವು ರೋಗವನ್ನು ಕಂಡುಹಿಡಿಯುವದಕ್ಕೆ ಎಷ್ಟು ಸಹಕಾರಿಯಾಗಿದೆ ಮುಂತಾದ ನಾಡಿಗಳಿಗೆ ಸಂಬಂಧಿಸಿದ ವಿಷಯವು ಇದರಲ್ಲಿ ಪ್ರತಿಪಾದಿಸಲ್ಪಟ್ಟಿದೆ."[೨೪]

ಈ ವಿಜ್ಞಾನವವನ್ನು ಪರಮಶಿವನು ಪಾರ್ವತಿಗೆ ಹೇಳಿದುದಾಗಿ ಈ ಗ್ರಂಥದಲ್ಲಿ ಉಲ್ಲೇಖಗೊಂಡಿರುವುದು ಕಂಡುಬರುತ್ತದೆ.

### ೨.೨.೬. ಖಡ್ಗಶಾಸ್ತ್ರ

ಲೌಕಿಕ ಶಾಸ್ತ್ರಗಳಲ್ಲಿ ಖಡ್ಗಶಾಸ್ತ್ರವೂ ಒಂದು. ಕೌಟಿಲ್ಯನ ಅರ್ಥಶಾಸ್ತ್ರ, ಮಾನಸೋಲ್ಲಾಸ, ಶಿವತತ್ತ್ವರತ್ನಾಕರ, ಸೌಗಂಧಿಕಾಪರಿಣಯ ಮುಂತಾದ ಕೃತಿಗಳಲ್ಲಿ ಖಡ್ಗಶಾಸ್ತ್ರದ ಬಗ್ಗೆ ಮಾಹಿತಿ ದೊರಕುತ್ತದೆ. ಸೌಗಂಧಿಕಾ ಪರಿಣಯದ ಏಳನೇ ಅಧ್ಯಾಯದಲ್ಲಿ ಖಡ್ಗಶಾಸ್ತ್ರಕ್ಕೆ ಸಂಬಂಧಿಸಿದ ಕೆಲವು ವಿಚಾರಗಳಿವೆ. "ಸುಗಂಧರಾಜನಿಗೆ ಅಸ್ತ್ರೋಪದೇಶ ಮತ್ತು ಖಡ್ಗ ಪ್ರದಾನ ಮಾಡುವಾಗ ಪಾಶುಪತಾಸ್ತ್ರ, ನಾರಾಯಣಾಸ್ತ್ರ, ಬ್ರಹ್ಮಾಸ್ತ್ರ, ಐಂದ್ರಾಸ್ತ್ರ, ಆಗ್ನೇಯಾಸ್ತ್ರ, ವಾರುಣಾಸತ್ರ, ಯಾನ್ಯಸ್ತ್ರ, ವಾಯವ್ಯಾಸ್ತ್ರ, ಕೌಬೇರಾಸ್ತ್ರ, ರೌದ್ರಾಸ್ತ್ರ, ಗಂಧರ್ವಾಸ್ತ್ರ, ಮೋಹನಾಸ್ತ್ರ, ಪರ್ವತಾಸ್ತ್ರ, ವಜ್ರಸ್ತ್ರ, ಗಾರುಡಾಸ್ತ್ರ, ಸರ್ಪಾಸ್ತ್ರ, ತಿಮಿರಾಸ್ತ್ರ, ಸೌರಾಸ್ತ್ರ, ಮೇಘಾಸ್ತ್ರ, ಐಷಿಕಾಸ್ತ್ರ, ಅಂಜನಾಸ್ತ್ರ, ರಾಕ್ಷಶಾಸ್ತ್ರ, ಜೃಂಭಕಾಸ್ತ್ರ, ದಂಡಚಕ್ರ, ಕಾಲಚಕ್ರ, ವಿಷ್ಣು ಚಕ್ರಗಳನು ಹೆಸರಿಸಲಾಗಿದೆ."[೨೫] ಈ ಎಲ್ಲ ಅಸ್ತ್ರಗಳನ್ನು ಪ್ರಯೋಗಿಸುವಾಗ ಮತ್ತು ಹಿಂಪಡೆಯುವಾಗ ಮಂತ್ರಗಳನ್ನು ಪಠಿಸಲಾಗುತ್ತಿತ್ತು.

ಖಡ್ಗ ಶಬ್ದಕ್ಕೆ ಕತ್ತಿ ಎಂಬ ಅರ್ಥವಿದೆ. ಈ ಶಾಸ್ತ್ರಕ್ಕೆ ಶಸ್ತ್ರಶಾಸ್ತ್ರ ಆಯುಧಶಾಸ್ತ್ರ ಎಂಬ ಪರ್ಯಾಯ ಪದಗಳಿವೆ. ಇತಿಹಾಸ, ಪುರಾಣ ಕೃತಿಗಳಲ್ಲಿ ಖಡ್ಗದ ಬಗ್ಗೆ ನಮಗೆ ಮಾಹಿತಿ ದೊರಕುತ್ತದೆ. ಖಡ್ಗಶಾಸ್ತ್ರವನ್ನು ಪ್ರಧಾನವಾಗಿಟ್ಟುಕೊಂಡು ಕನ್ನಡದಲ್ಲಿ ಖಡ್ಗಶಾಸ್ತ್ರ ಎಂಬ ಕೃತಿ ರಚನೆಗೊಂಡಿದೆ. ಇದರಲ್ಲಿ ಐದು ಅಧ್ಯಾಯಗಳಿವೆ. ಈ ಕೃತಿಯ ಕರ್ತೃ, ಕಾಲದ ಬಗ್ಗೆ ಖಚಿತವಾಗಿ ಹೇಳಲಾಗದಿದ್ದರೂ ಹಸ್ತಪ್ರತಿಯ ಸ್ವರೂಪದ ಆಧಾರದಿಂದ ಕ್ರಿ.ಶ. ಸು. ೧೭೦೦ರಲ್ಲಿ ಕೃತಿ ರಚನೆಗೊಂಡಿದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ವಿವಿಧ ಆಯುಧಗಳ ವೈಶಿಷ್ಟ್ಯಗಳನ್ನು ಕವಿಯು ಈ ರೀತಿ ವಿವರಿಸಿದ್ದಾನೆ.

"ದ್ರೋಣಾಚಾರ್ಯನು ಶ್ರೀಕೃಷ್ಣನನ್ನು ತನ್ನ ಮನೆಗೆ ಕರೆದೊಯ್ದು, ಪೂಜೆ ಸತ್ಕಾರಗಳನ್ನು ಮಾಡಿದ ಬಳಿಕ ಕೌರವರು, ಪಾಂಡವರು ನನ್ನಿಂದ ಧನುರ್ವಿದ್ಯೆಯನ್ನು ಕಲಿತಿದ್ದಾರೆ. ನೀನು ಅದನ್ನು ನೋಡಬೇಕು ಎಂದು ಗರಡಿಗೆ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಾನೆ. ಈ ಮೂಲಕ ಕೃತಿಯು ವಸ್ತುವಿಷಯದ ಕಡೆಗೆ ಸಾಗುತ್ತದೆ. ಸಮಕಾಲೀನ ಸಂದರ್ಭದಲ್ಲಿ ಗರಡಿ ಎಂದರೆ ಕುಸ್ತಿ ಕಲಿಸುವ ಶಾಲೆ ಎನಿಸಿಕೊಂಡಿದ್ದರೂ ಇಲ್ಲಿ ಗರಡಿ ವ್ಯಾಪಕ ಚಟುವಟಿಕೆಯ ಕೇಂದ್ರವಾಗಿದೆ. ಸಮರ ತಂತ್ರಗಳನ್ನು ಕಲಿಸುವ ಕೇಂದ್ರವಾಗಿದೆ. ರಾಜಕುಮಾರರು ಕೃಷ್ಣನ ಮುಂದೆ ತಾವು ಕಲಿತ ವಿದ್ಯೆಯನ್ನು ಪ್ರದರ್ಶಿಸಿದರೆಂದು ಕವಿ ವರ್ಣಿಸುತ್ತ ವಿವಿಧ ಅಸ್ತ್ರಗಳ ಕೌಶಲವನ್ನು ಪರಿಚಯಿಸುತ್ತಾನೆ. ದ್ರೋಣಾಚಾರ್ಯನು ತನ್ನ ಶಿಷ್ಯರನ್ನು ಒಬ್ಬೊಬ್ಬರನ್ನೇ ವೇದಿಕೆಗೆ ಆಹ್ವಾನಿಸಿದಾಗ ಧರ್ಮರಾಯ ಕೈಯಲ್ಲಿ ಮುಂಚಿ ಹಿಡಿದು ಬಂದು ಧನುಸ್ಸು ಠೇಂಕಾರ ಮಾಡಿ ಸಮರ್ಥವಾಗಿ ನೈಪುಣ್ಯತೆ ಮೆರೆದನು. ದುರ್ಯೋಧನ ಗದೆ ಹಿಡಿದು ಗದಾಯುದ್ಧದಲ್ಲಿ ಹೇಳಿರುವ ಕೌಶಲ್ಯಗಳೇ ನೆಂಬುದನ್ನು ತೋರಿಸಿದ. ಅನಂತರ ಭೀಮಸೇನನು ಗದಾಯುದ್ಧದ ಭೇದಗಳನ್ನು ಪ್ರದರ್ಶಿಸಿದ. ದುಶ್ಯಾಸನ ಮತ್ತಿತರರು ಧುನರ್ವಿದ್ಯಾ ಕೌಶಲವನ್ನು ತೋರಿದನು. ಅನಂತರ ಅರ್ಜುನನು ಧನುರ್ವಿದ್ಯೆಯನ್ನು ತೋರಿಸಿದನು. ಆತ ಆಗ್ನೆಯ ಬಾಣ ತೊಟ್ಟು ಭೂಮಿ ಆಕಾಶದ ನಡುವೆ ಅಗ್ನಿ ವ್ಯಾಪಿಸುವಂತೆ ಮಾಡಿದ. ಅನಂತರ ವಾರುಣಾಸ್ತ್ರದಿಂದ ಇದನ್ನು ಶಮನಗೊಳಿಸಿದ ಆಮೇಲೆ ಅಂಧಕಾರ ಬಾಣದಿಂದ ಭೂಮಿಯಲ್ಲಿ ಕತ್ತಲೆ ಆವರಿಸುವಂತೆ ಮಾಡಿ ಸೂರ್ಯಬಾಣದಿಂದ ಪ್ರಜ್ವಲಿಸುವಂತೆ ಮಾಡಿದ. ಪರ್ವತಬಾಣ ಗಳಿಂದ ಬೆಟ್ಟಗಳನ್ನು ಸೃಷ್ಟಿಸಿ ಮೇಘಬಾಣದಿಂದ ಮೇಘಗಳನ್ನು, ಸರ್ಪಬಾಣದಿಂದ ಸರ್ಪಗಳನ್ನು, ವಾಯವ್ಯಾಸ್ತ್ರದಿಂದ ವಾಯುವನ್ನು ಕಲ್ಪಿಸಿದನು".[೨೬]

ಭಾರತೀಯ ಸಂಸ್ಕೃತಿಯಲ್ಲಿ ಯಾವುದೇ ಕಾರ್ಯವನ್ನು ಕೈಗೊಂಡರೂ ದೇವರ ಆರ್ಶಿವಾದ ಪಡೆಯುವುದು ಮುಖ್ಯ ಎನ್ನಲಾಗುತ್ತದೆ. ಗರಡಿಯಲ್ಲಿಯೂ ಈ ಸಂಪ್ರದಾಯವನ್ನು ಅನುಸರಿಸಲಾಗುತ್ತದೆ. ಗರಡಿಯ ಬಾಗಿಲಲ್ಲಿ ಭೈರವ, ಮೃತ್ತಿಕೆಯಲ್ಲಿ ಬ್ರಹ್ಮ, ಪೂಜೆಯಲ್ಲಿ ವಿಷ್ಣು ಮುಂದೆ ದುರ್ಗೆ ಇರುತ್ತಾರೆ. ಇವರನ್ನು ಅಧಿದೇವತೆಗಳೆಂದು ಇಲ್ಲಿ ಪರಿಗಣಿಸಲಾಗಿದೆ. ಮಟ್ಟಿಪೂಜೆಯ ವಿವರಣೆಯ ನಂತರ ಕೃತಿಕಾರನು ಸಾಧನ ವಸ್ತುಗಳನ್ನು ಹೇಳುತ್ತಾನೆ. ಈ ಸಾಧನ ವಸ್ತುಗಳ ಪ್ರಮಾಣಕ್ಕೆ ಸಂಬಂಧಿಸಿದ ಪರಿಭಾಷೆಗಳನ್ನು ವೈ.ಸಿ. ಭಾನುಮತಿ ಅವರು ಈ ರೀತಿ ಗುರುತಿಸಿದ್ದಾರೆ.

ಅಂಗುಲಿ, ಗೇಣು, ಹಸ್ತ, ಮೊಳ, ವಜ್ರಮುಷ್ಟಿ, ಅಂತರಗಂಬ ಇತ್ಯಾದಿ ಮೂವತ್ತೆರಡು ಆಯುಧಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ ಅಸಿ, ಮುದ್ಗರ, ಬಿಂಡಿವಾಳ, ಕರವಾಳ, ಬಿಲ್ಲ, ಕರಗಸ, ಈಟಿ, ಗಂಡುಗೊಡಲಿ, ತೋಮರ, ಕೊಡಲಿ, ತ್ರಿಶೂಲ, ವಜ್ರಮುಷ್ಟಿ, ಗದೆ, ಗುದಿಗೆ, ನೇಗಿಲು, ಚಕ್ರ, ಕಬ್ಬಿನ ಕೋಲು, ಭಲ್ಲೆಯ, ಪಟ್ಟೆವು, ಹಗ್ಗ, ಕ್ಷುರಪ್ರ, ನಾರಾಚ, ಚೂರಿ, ಅಂಕುಶ, ಶಕ್ತಿ, ಡಮರುಗ, ಒನಕೆ, ಪ್ರಾಸ, ಶತಘ್ನಿ, ಖಡ್ಗ, ಬಾಣ, ಪರಿಘ ಮುಂತಾದವು."[೭]

ಗರಡಿಯಲ್ಲಿ ನಡೆಯುವ ಸಂಪ್ರದಾಯ, ಆಚರಣೆಗಳು, ಆಯುಧಗಳು, ಅವುಗಳ ಪ್ರಮಾಣ, ಬಳಕೆಯ ರೀತಿ ಖಡ್ಗಶಾಸ್ತ್ರದ ಕೌಶಲ ವೈರಿಗಳನ್ನು ಜಯಿಸುವ ರೀತಿ ಮುಂತಾದ ವಿಷಯಗಳ ಬಗ್ಗೆ ಸವಿವರವಾಗಿ ತಿಳಿಸಲಾಗಿದೆ.

### ೨.೨.೭ ಗಣಿತಶಾಸ್ತ್ರ

ಗಣಿತಶಾಸ್ತ್ರವು ಪ್ರತಿದಿನ ನಿತ್ಯಜೀವನದಲ್ಲಿ ನಮ್ಮ ಅವಿಭಾಜ್ಯ ಅಂಗವಾಗಿ ಬೆಳೆದುಬಂದಿದೆ. ಪ್ರಾಚೀನ ಬರವಣಿಗೆಯ ಸಾಮಗ್ರಿಗಳಲ್ಲಿ ಕಡತಗಳು ಲೆಕ್ಕಪತ್ರಗಳನ್ನಿಡಲು, ಭೂಮಿ, ಆಕಾಶ, ನೀರು, ಹಣ, ಒಡವೆ ವಸ್ತ್ರಗಳನ್ನು ಅಳೆಯುವ ಅರ್ಥಶಾಸ್ತ್ರ, ಸಂಖ್ಯಾಶಾಸ್ತ್ರಗಳು ಗಣಿತಶಾಸ್ತ್ರದ ಒಂದು ಅಂಗವಾಗಿ ರಚನೆಯಾದವು.

"ಕನ್ನಡದಲ್ಲಿ ಗಣಿತಶಾಸ್ತ್ರಕ್ಕೆ ಸಂಬಂಧಿಸಿದ ಹಸ್ತಪ್ರತಿಗಳು ಬೇರೆ ಬೇರೆ ಹೆಸರುಗಳಲ್ಲಿ ದೊರೆಯುತ್ತವೆ. ಅವುಗಳೆಂದರೆ,

೧. ಕ್ಷೇತ್ರಗಣಿತ
೨. ವ್ಯವಹಾರಗಣಿತ
೩. ಚಿತ್ರಹಸುಗೆ
೪. ಲೀಲಾವತಿ
೫. ಮುತ್ತಿನ ಚಿಪ್ಪಿನ ಸೂತ್ರ
೬. ಬಣ್ಣಾಂತರದ ಸ್ತ್ರೋ

೭. ಲೆಕ್ಕದ ಚೌಪದಿ
೮. ಗಣಿತ ಸಾರ
೯. ವ್ಯವಹಾರ ರತ್ನ
೧೦. ಜೈನಗಣಿತ ಸೂತ್ರೋದಾಹರಣ
೧೧. ಸಂಖ್ಯಾರತ್ನ ಮಾಲಾ ಟೀಕು
೧೨. ಬೇಹಾರ ಗಣಿತ
೧೩. ಗಣಿತದ ಲೆಕ್ಕ
೧೪. ಗಣಿತಸಾರ ಸಂಗ್ರಹದ ಟೀಕು
೧೫. ಗಣಿತದ ಸೂತ್ರ
೧೬. ಗಣಿತ ಮಗ್ಗಿ ಸೂತ್ರ
೧೭. ಗಣಿತ ವಿಳಾಸ
೧೮. ಜಮಾ-ಖರ್ಚಿನ ಪದ್ಧತಿ[೨೮]

ಲೋಕವ್ಯವಹಾರಕ್ಕೆ ಸಂಬಂಧಿಸಿದ ಜ್ಞಾನಶಾಖೆಯನ್ನು ವ್ಯವಹಾರ ಗಣಿತವೆಂದು, ಭೂಮಿಯ ಅಳತೆಗೆ ಸಂಬಂಧಿಸಿದಂತೆ ಅದರ ಅಗಲ ಉದ್ದ ವೃತ್ತ ಆಯತಾಕಾರಗಳನ್ನು ತಿಳಿಸುವುದಕ್ಕೆ ಕ್ಷೇತ್ರಗಣಿತ ಎಂದು ಕರೆದರೆ, ಚಮತ್ಕಾರಗಳಿಂದ ಕೂಡಿದ ಲೆಕ್ಕಸಾರವನ್ನು ವಿನೋದಗಣಿತವೆಂದು ಕರೆಯುತ್ತಾರೆ. ಇವು ಗಣಿತಶಾಸ್ತ್ರದಲ್ಲಿ ಬರುವ ಬೇರೆ ಬೇರೆ ವಿಶೇಷ ವಿಷಯಗಳಿಗೆ ಆದ್ಯತೆ ನೀಡಿ ರಚನೆಗೊಂಡವುಗಳು.

ರಾಜಾದಿತ್ಯನು ವ್ಯವಹಾರಗಣಿತ, ಕ್ಷೇತ್ರಗಣಿತ, ವ್ಯವಹಾರ ರತ್ನ, ಲೀಲಾವತಿ, ಚಿತ್ರಹಸುಗೆ, ಜಿನಗಣಿತ ಸೂತ್ರೋದಾಹರಣ, ಎಂಬ ಕೃತಿಗಳನ್ನು ರಚಿಸಿದ್ದಾನೆ. ವ್ಯವಹಾರಗಣಿತ ಕೃತಿಯಲ್ಲಿ ೫ ಅಧಿಕಾರಗಳಿವೆ. ಪ್ರತಿ ಅಧಿಕಾರದ ಕೊನೆಯಲ್ಲಿ

"ಇದು ಶುಭಚಂದ್ರದೇವ ಯೋಗಿಂದ್ರ ಪಾದಾರವಿಂದ
ಮತ್ತು ಮಧುಕರರಾಯ ಮಾನ ಮಾನಸಾಂದಿತ ಸಕಲ
ಗಣಿತತ್ತ್ವ ವಿಳಾಸಂ ವಿನೇಯಜನ ವಿನೂತಂ ಶ್ರೀ ರಾಜಾದಿತ್ಯ
ವಿರಚಿತಮಪ್ಪ ವ್ಯವಹಾರಗಣಿತದೊಳ್"[೨೯]

ಎಂಬ ಗದ್ಯವಿದೆ.

ಈ ಹಿಂದೆ ವ್ಯವಹಾರ ಗಣಿತಗಳು ಇದ್ದವು. ಇವು ದೊಡ್ಡದಾಗಿದ್ದವು. ಇಲ್ಲಿ ನಾನು ಚಿಕ್ಕದಾಗಿ ಹೇಳಲು ಪ್ರಯತ್ನಿಸಿದ್ದೇನೆ ಎಂದು ರಾಜಾದಿತ್ಯನು ತನ್ನ ವ್ಯವಹಾರಗಣಿತದ ವಿಶೇಷತೆಯ ಬಗ್ಗೆ ತಿಳಿಸಿದ್ದಾನೆ.

"ಪಿರಿದಂತ ಪೇಳ್ವೊಡೆ ಸಾಲದೆ
ಪುರಾತನರ ಗಣಿತವೊಂದೇ ಪರಕಾಲಂ ಬೆ
ಚ್ಚರಲೋದಿ ಕಿರಿದರಿಂ ವ್ಯವ
ಹರಿಸಲ್ ವ್ಯವಹಾರ ಗಣಿತಮಂ ವಿರಚಿಸಿದೆಂ"[೩೦] ಎನ್ನುತ್ತಾನೆ.

ರಾಜಾದಿತ್ಯನ ಗಣಿತಶಾಸ್ತ್ರದಲ್ಲಿ ಸಹಜ ತ್ರಯರಾಶಿ, ಸಹಜಪಂಚರಾಶಿ, ಸಹಜ ನವರಾಶಿ, ವ್ಯಸ್ತತ್ರಯರಾಶಿ, ವ್ಯಸ್ತಪಂಚರಾಶಿ, ವ್ಯಸ್ತಸಪ್ತರಾಶಿ, ವ್ಯಸ್ತನವರಾಶಿ, ಪದಪಿನಸೂತ್ರ, ತೂಬಿನ ಸೂತ್ರ, ಚಕ್ರಬಡ್ಡಿ, ಬಣ್ಣಾಂತರ ಸೂತ್ರ, ವಿಧುರೆಸೂತ್ರ, ಹರವರಿಯ ಸೂತ್ರ, ಮುಂತಾದ ವಿಷಯಗಳಿವೆ.

ರಾಜಾದಿತ್ಯ ಹಣ, ಕಾಲಮಾನ, ದೂರ ಪರಿಣಾಮ, ಅಳತೆಗಳಿಗೆ ಸಂಬಂಧಿಸಿದ ಕೋಷ್ಟಕಗಳನ್ನು ತನ್ನ ಶಾಸ್ತ್ರಕೃತಿಯಲ್ಲಿ ತಿಳಿಸಿದ್ದಾನೆ.

"ಉದ್ದಳತೆಗೆ ಸಂಬಂಧಿಸಿದ ರಾಜಾದಿತ್ಯನ ಕೋಷ್ಟಕ ಹೀಗಿದೆ.

ಬೆರಲೀರಾರನೆ ಗೇಣು
ಎರಡಾಗಲ್ ಮಾಳನೆ ಹಸ್ತನಾಲ್ಕನೆ ದಂಡಂ ।

ಎರಡು ಸಹಸ್ರಂ ಕ್ರೋಶಂ
ಶರಧಿ ಕ್ರೋಶಂಗಳೊಂದು ಯೋಜನ ಮಕ್ಕುಂ ॥

ಅಂದರೆ ೧೨ ಬೆರಳು(ಅಂಗುಲ = ೧ ಗೇಣು)

೨ ಗೇಣು = ೧ ಮೊಳ

೧ ಮೊಲ = ೧ ಹಸ್ತ

೧ ಹಸ್ತ = ೧ ದಂಡ

೨ ಸಾವಿರದಂಡ = ೧ ಕ್ರೋಶ

೪ ಕ್ರೋಶ = ೧ ಯೋಜನ ಎಂದರ್ಥ"[೫೧]

**ತಿಮ್ಮರಸ**

ತಿಮ್ಮರಸನ ಕ್ಷೇತ್ರಗಣಿತದ ಹಸ್ತಪ್ರತಿಯು ಗಣಿತಶಾಸ್ತ್ರಕ್ಕೆ ಸಂಬಂಧಿಸಿವೆ. ತಿಮ್ಮರಸನು, ಮಗ್ಗಿ, ವರ್ಗ, ಘನ, ಬಣ್ಣಾಂತರ ಸೂತ್ರ, ಮುತ್ತಿನ ಚಲ್ಪಿನ ಗುಣಿತಂ. ಕ್ಷೇತ್ರ ಇತ್ಯಾದಿಗಳನ್ನು ತಿಳಿಸುತ್ತಾನೆ. ಈ ಕೆಳಗಿನ ಪದ್ಯದಲ್ಲಿ ಅಳತೆಯಲ್ಲಿ ವ್ಯತ್ಯಾಸ ಮಾಡಬಾರದು, ಮಾಡಿದರೆ ಅದು ದೋಷಕರ ಎಂಬುದನ್ನು ವಿವರಿಸಿದ್ದಾನೆ.

"ಅಂಗುಲ ಭೂಮಿಯ ತಪ್ಪಲು
ಪಿಂಗದೆ ತಾಂ ನರಕದಲಿ ಸಂತತಮಿರ್ಪಂ ॥

ಅಂಗುಲ ಹೆಚ್ಚದೆ ತಗ್ಗದೆ
ಸಂಗತ ಮಾಗಳೆಯ ಭೂಮಿ ರಕ್ಷಿಪಳೆಂದೂ ॥[೫೨]

ಒಂದಂಗುಲ ಭೂಮಿಯನ್ನು ಬಿಟ್ಟು ಕೊಟ್ಟರೆ ನರಕ ಪ್ರಾಪ್ತಿ, ಸರಿಯಾಗಿ ಅಳತೆ ಮಾಡಿ ಬದುಕಿದರೆ ಭೂತಾಯಿ ರಕ್ಷಿಸುತ್ತಾಳೆ ಎನ್ನುತ್ತಾರೆ. ತಿಮ್ಮರಸನೂ ಭೂಮಿಯ ವಿವಿಧಾಕಾರದ ಸ್ವರೂಪ ಅವುಗಳನ್ನು ಅಳೆಯುವ ಪದ್ಧತಿಯ ಬಗ್ಗೆ ಪಟ್ಟಿಯನ್ನು ಕೊಡುತ್ತಾನೆ.

"೧. ಗಳೆ ಕಬ್ಬಳೆವ ಓಜಾಸೂತ್ರ

೨. ಪಾಶಾಕಾರದ ಭೂಮಿ ಓಜಾಸೂತ್ರ

೩. ಸಮಚತುರಭೂಮಿ ಓಜಾಸೂತ್ರ

೪. ದೀರ್ಘ ವಿಷಮ ತ್ರಿಭೂಜೆಗೆ ಓಜಾಸೂತ್ರ

೫. ನೇತ್ರಾಕಾರದ ಭೂಮಿಗೆ ಓಜಾಸೂತ್ರ

೬. ಶೂರ್ಪಾಕಾರಕ್ಕೆ ಓಜಾಸೂತ್ರ

೭. ಲಿಂಗಾಕಾರದ ಭೂಮಿಗೆ ಓಜಾಸೂತ್ರ"[೩] ಎಂದು ವಿವರಿಸುತ್ತಾನೆ.

**ಚಂದ್ರಮ ಕವಿ**

ತುಳುನಾಡಿನ ಮಧುರೆಯ ಅಳಿಯರಪ್ರರದವನಾದ ಚಂದ್ರಮಕವಿಯೂ 'ಗಣಿತ ಸಾರ' ಕೃತಿಯನ್ನು ರಚಿಸಿದ್ದಾನೆ. ಇದರಲ್ಲಿ ೨೧೯ ಕಂದಗಳಲ್ಲಿ ಗುಣಾಕಾರ, ಭಾಗಾಕಾರ, ವರ್ಗ, ತನ್ಮೂಲಘನಗಳ ವಿವರಗಳು ಇವೆ. ಈತನಿಗೆ ಗಣಿತವಿಳಾಸ ಎಂಬ ಬಿರುದು ಸಹ ಇತ್ತು.

"ಜಿನರಾಜ ನಿರೂಪಿತ ವರಮಾಗಮದಿಂದ್ಭುವಿಸಿದ
ಸಂಖ್ಯಾಜ್ಞಾನವೇ ಕರಣಾನುಯೋಗವೆಂದು ಅದನ್ನು
ಆಧರಿಸಿ ಗುರುವಿನಾಜ್ಞೆಯಂತೆ ಗಣಿತದ ಬಹುಬೇಧಗಳನ್ನು
ಕಂದಗಳಲ್ಲಿ ಹೇಳಿರುವುದಾಗಿ ತಿಳಿಸುತ್ತಾನೆ."[೩೪]

**ಬಾಲವೃದ್ಧದ ಚಲುವ**

ಚಿಕ್ಕನಾಯಕನಪುರದ ನಿವಾಸಿಯಾದ ಈತ 'ಕನ್ನಡ ಲೀಲಾವತಿ' ಎಂಬ ಕೃತಿಯನ್ನು ಬರೆದಿದ್ದಾನೆ. ಇದು ಕಂದ ಹಾಗೂ ವಾರ್ಧಕಗಳಿಂದ ಕೂಡಿದೆ.

**ಭಾಸ್ಕರ ಕವಿ**

ಭಾಸ್ಕರ ಕವಿಯ ಬೇಹಾರಗಣಿತ ಕೃತಿಯು ಎಂಟು ಅಧಿಕಾರಗಳನ್ನು ಒಳಗೊಂಡಿದೆ.

೧. ಚಕ್ರಬಡ್ಡಿಸೂತ್ರ ೫. ದೇವಗತಿ ಸಂಯೋಗದ ಸೂತ್ರ

೨. ಪದಕದ ಸೂತ್ರ ೬. ಬಿರುದಿನ ಲೆಕ್ಕ

೩. ಪದಪಿನ ಸೂತ್ರ ೭. ಅಡುಗೋಲ ಸೂತ್ರ

೪. ಮಾಟ್ಟದ ಸೂತ್ರ ೮. ಟಂಕಸಾಲೆ ಸೂತ್ರ

**ಕೆಳದಿ ಬಸವರಾಜು**

ಕೆಳದಿ ಬಸವರಾಜನ ಶಿವತತ್ತ್ವರತ್ನಾಕರ ಕೃತಿಯ ೧೫ನೇ ತರಂಗದಲ್ಲಿ ಗಣಿತಶಾಸ್ತ್ರವನ್ನು ಪ್ರಾಸಂಗಿಕವಾಗಿ ತಿಳಿಸಿಕೊಡುತ್ತದೆ.

೧. ಗಣಿತವನ್ನು ಚೆನ್ನಾಗಿ ತಿಳಿದವನನ್ನು ಖಜಾಂಚಿಯನ್ನಾಗಿ ನೇಮಕ ಮಾಡಿಕೊಳ್ಳಬೇಕೆಂದು ತಿಳಿಸುತ್ತಾನೆ.

೨. ೧ರಿಂದ ೯ರವರೆಗೆ ಮಾತ್ರ ಅಂಕಗಳು

೩. ಇದರ ಮುಂದೆ ಸೊನ್ನೆ ಹೆಚ್ಚಾದಂತೆ ಅಂಕೆಗಳು ಹೆಚ್ಚಾಗುತ್ತವೆ.

೪. ಪ್ರಮಾಣ, ಫಲ, ಇಚ್ಛೆ ಹೀಗೆ ಮೂರು ರಾಶಿಗಳು ತ್ರೈರಾಶಿಗಳು

೫. ಇಚ್ಛೆಯಿಂದ ಗುಣಿಸಿದ ವಸ್ತುವನ್ನು ಪ್ರಮಾಣದಿಂದ ಭಾಗಿಸಬೇಕು. ದ್ರವ್ಯ ಭಾಗಿಸಲು ಇಚ್ಛೆ ಅಗತ್ಯ ಬೇಕು. ಮುಂತಾದ ಸಿದ್ಧಾಂತಗಳನ್ನು ನಿರೂಪಿಸುತ್ತಾನೆ.[೫]

ವಾಣಿಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಂಖ್ಯಾಶಾಸ್ತ್ರ, ವ್ಯವಹಾರಶಾಸ್ತ್ರ, ಮಾರುಕಟ್ಟೆ ಶಾಸ್ತ್ರ, ಮುಂತಾದ ಪ್ರಕಾರಗಳು ಅಧ್ಯಯನದ ಶಿಸ್ತುಗಳಾಗಿ ಶೈಕ್ಷಣಿಕವಾಗಿ ವ್ಯಾಪಕ ನೆಲೆಯಲ್ಲಿ ಅಸ್ತಿತ್ವಕ್ಕೆ ಬಂದಿವೆ.

**೨.೨.೮. ನೀತಿಶಾಸ್ತ್ರ**

ಪ್ರಾಚೀನ ಪರಂಪರೆಯಿಂದಲೂ ಮನುಷ್ಯ ನೀತಿಯಡಿಯಲ್ಲಿಯೇ ಬದುಕಿ ಬಾಳುತ್ತಾ ಬಂದಿದ್ದಾನೆ. ನೀತಿ ಮೇಲ್ನೋಟಕ್ಕೆ ಕಾಣಿಸದೆ, ಆಂತರ್ಯದಲ್ಲಿ ಅದು ಕಾರ್ಯ ನಿರ್ವಹಿಸುತ್ತದೆ. ಸದಾ ಚಲನಶೀಲವಾದ ಗುಣವನ್ನು ಹೊಂದಿದೆ. ಕಾಲದಿಂದ ಕಾಲಕ್ಕೆ ಬದಲಾದ ಸಾಮಾಜಿಕ ನೀತಿ, ರೂಢಿ, ನಿಯಮಗಳನ್ನು ಅನುಸರಿಸಿಕೊಂಡು ಬಂದಿದೆ.

'ನೀತಿ' ಎಂದರೆ ಬಯ್ಯುವಿಕೆ, ಮಾರ್ಗದರ್ಶನ, ಮುನ್ನಡೆಸುವಿಕೆ, ಒಳ್ಳೆಯ ನಡತೆ, ಶಿಷ್ಟಾಚಾರ, ಧರ್ಮ, ನ್ಯಾಯ, ರಾಜನೀತಿ, ಅರ್ಥನೀತಿ, ಸಾರಾಸಾರ ವಿಚಾರ, ವಿವೇಚನೆ, ಕಾರ್ಯನೀತಿ, ಧೋರಣೆ ಎಂದು ಮುಂತಾದ ಅರ್ಥಗಳಿವೆ. ನೀತಿಶಾಸ್ತ್ರ ಎಂಬ ಪದಕ್ಕೆ

ಆಚಾರ, ನಡವಳಿಕೆ, ಲೋಕವ್ಯವಹಾರ, ದಾಮಿರ್ಕ ವೃತ್ತಿ ಮೊದಲಾದವುಗಳನ್ನು ತಿಳಿಸುವ ಶಾಸ್ತ್ರ, ಜನಪದರಲ್ಲಿ ನೀತಿ ಎಂದರೆ ಅರ್ಥವಂತ, ನೀತಿವಂಥ, ಧರ್ಣವಂತ, ದೃಢ ಸ್ವಭಾವದವನು, ತಿಳಿವಳಿಕೆಯುಳ್ಳವನು, ತಿಳಿದವನು ಎಂದು ಮುಂತಾದ ಮಾತುಗಳು ನೀತಿಗೆ ಸಂಬಂಧಿಸಿ ಆಡುವುದನ್ನು ಕಾಣುತ್ತೇವೆ."[೬]

ನೀತಿಗೆ ಸಂಬಂಧಿಸಿದಂತೆ ಅನೇಕ ಕೃತಿಗಳು ರಚನೆಗೊಂಡಿವೆ. ಅವುಗಳೆಂದರೆ 'ನೀತಿಗ್ರಂಥ', 'ನೀತಿ ನಿರ್ಣಯ', 'ನೀತಿಪದ', 'ನೀತಿ ರತ್ನಾಭರಣ', 'ನೀತಿ ರಸಾಯನಿಕೆ', 'ನೀತಿ ವಾರ್ಧಕ', 'ನೀತಿ ಶತಕ', 'ನಿಜಲಿಂಗ ಶತಕ', 'ನೀತಿ ಶಾಸ್ತ್ರ', 'ನೀತಿಸಾರ ಸಂಗ್ರಹ', 'ನೀತಿಬೋಧ', 'ನೀತಿ ಚಿಂತಾಮಣಿ', 'ನೀತಿ ಬೋಧಕ ಮಕ್ಕಳ ಕಥೆಗಳು', 'ನೀತಿ ವಾಕ್ಯ ಮಂಜರಿ', 'ನಂಜುಂಡ ಶತಕ', 'ಜಾಣ್ಣೆಕೆಯ ನೀತಿಗ್ರಂಥ', 'ಧರ್ಮನೀತಿ', 'ವಿವೇಕ ಚಿಂತಾಮಣಿ', 'ಪತಿಧರ್ಮಸಾರ'

ಮಹಾಭಾರತದಲ್ಲಿ ಬರುವ ಧುರ್ಯೋಧನ ವಿದುರನೀತಿ ಅನುಸರಿಸಿ, ಜನರಲ್ಲಿ ಉಳಿದುಕೊಂಡರೆ, ಚಾಣಕ್ಯ ನೀತಿಯಲ್ಲಿ ಹೇಳಿದ ರಾಜನ ಅವಗುಣಗಳಾದ ಛಲ, ಆಸೆಯಿಂದ ಧುರ್ಯೋಧನ ಜನರಿಂದ ದೂರ ಉಳಿದ ಕಾರಣ ನೀತಿಯನ್ನು ಸರಿಯಾಗಿ ಅರಿತಿಕೊಳ್ಳದೇ ಹೋದರೆ, ಜೀವನದಲ್ಲಿ ಏರುಪೇರು ಸಂಭವಿಸುತ್ತದೆ.

"ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ ।
ಬಲದೊಳ್ ಮದ್ರೇಶನ ತ್ತುನ್ನತಿಯೊಳಮರ ಸಿಂಧೂದ್ಭವಂ ಚಾಪವಿದ್ಯಾ ।
ಬಲದೊಳ್ ಕುಂಭೋದರಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ ।
ರ್ಮಲಚಿತ್ತದಿಂ ಧರ್ಮಪುತ್ರಂ ಮಿಗಿಲವರ್ಗಳನೀ ಭರತ ಲೋಕ ಪೂಜ್ಯಂ" ।[೭]

ಇಲ್ಲಿ ಚಲ ಮತ್ತು ಧರ್ಮದ ಕುರಿತಾದ ನಿಲುವುಗಳನ್ನು ಕಾಣಬಹುದು. ಹಠದಿಂದ ಧುರ್ಯೋದನ ಕೆಟ್ಟವನಾದರೆ, ಧರ್ಮದಿಂದ ಧರ್ಮರಾಯ ನೀತಿವಂತನಾಗುತ್ತಾನೆ. ಅಂದರೆ, ರಾಜ್ಯನೀತಿ ಮನುಷ್ಯನನ್ನು ಅಧೋಗತಿಗೆ ತಳ್ಳುತ್ತದೆ. ಧರ್ಮನೀತಿ ಮನುಷ್ಯನನ್ನು ನೀತಿವಂತನನ್ನಾಗಿ ಮಾಡುತ್ತದೆ.

ರಾಘವಾಂಕನು 'ಹರಿಶ್ಚಂದ್ರ ಕಾವ್ಯ'ದಲ್ಲಿ ಸತ್ಯ ಮತ್ತು ನೀತಿಗೆ ನೀಡಿದ ಮಹತ್ವವನ್ನು ಕಾಣಬಹುದು. ಹರಿಹರ ಜನಮಾನಸದಲ್ಲಿ ನೀತಿವಂತರಾದ ಶರಣರ ರಗಳೆಗಳನ್ನು ಬರೆದು ನೀತಿತತ್ವ, ಕಾಯಕತ್ವ, ನಿಷ್ಠೆಯನ್ನು ಮೆರೆಸಿ ಜನರನ್ನು ಸರಿದಾರಿಯಲ್ಲಿ ನಡೆಯುವಂತೆ ಕೃತಿಗಳನ್ನು ರಚಿಸಿದ, ಪಂಪಭಾರತ, ಆದಿಪುರಾಣ, ಯಶೋಧರ ಚರಿತೆ, ಅನಂತನಾಥ ಪುರಾಣ, ವಡ್ಡಾರಾಧನೆ, ಸಮಯ ಪರೀಕ್ಷೆ, ಹದಿಬದೆಯ ಧರ್ಮ, ಭರತೇಶವೈಭವ,

ಕುಮಾರವ್ಯಾಸ ಭಾರತ, ದಾಸರ ಹಾಡುಗಳು, ವಚನ ಸಾಹಿತ್ಯ, ಸರ್ವಜ್ಞನ ವಚನಗಳು, ತತ್ವಪದಗಳು, ಮಂಕುತಿಮ್ಮನ ಕಗ್ಗ ಇವೆಲ್ಲ ಲೋಕನೀತಿಯನ್ನು ಸಾರುವಂಥ ಕೃತಿಗಳಾಗಿವೆ.

### ೨.೨.೯. ಪ್ರಶ್ನಾ ಶಾಸ್ತ್ರ

ಪ್ರಶ್ನಾಶಾಸ್ತ್ರ ಎಂದರೆ "ಒಂದು ವ್ಯಕ್ತಿಯ ಜೀವಿತದಲ್ಲಿ ಹಾಗೂ ಭವಿಷ್ಯದಲ್ಲಿ ಘಟಿಸುವ ಘಟನೆಗಳನ್ನು, ಎದುರಾಗುವ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಇರುವ ವಿಶೇಷ ಅರಿವೇ ಪ್ರಶ್ನೆಶಾಸ್ತ್ರ" ಎನ್ನುವುದು ಪ್ರಶ್ನಾಶಾಸ್ತ್ರದ ಒಂದು ಮಗ್ಗಲು. ಅದರ ಇನ್ನೊಂದು ಮಗ್ಗಲು "ಮನಸ್ಸಿನಲ್ಲಿ ಭಾವೋದ್ರೇಕವಾಗುವುದಕ್ಕೂ ಆ ಕ್ಷಣದಲ್ಲಿ ನಡೆಯುವ ಘಟನೆಗಳಿಗೂ ಇರುವ ಸಂಬಂಧವನ್ನು ತಿಳಿಯುವ ಪ್ರಜ್ಞಾನೈಪುಣ್ಯವೇ ಪ್ರಶ್ನಶಾಸ್ತ್ರ" ಎಂದು ಹೇಳಲಾಗುತ್ತದೆ. ಎರಡು ವ್ಯಾಖ್ಯಾನಗಳಲ್ಲಿ ಮನುಷ್ಯನೇ ಕೇಂದ್ರಬಿಂದು."[೩೮]

ಮನುಷ್ಯನ ಮನಸ್ಸಿನಲ್ಲಿ ಉಂಟಾಗುವ ಅಲೋಚನೆಗಳನ್ನು ವಿಚಾರ ಮಾಡಿ, ಇನ್ನೊಬ್ಬರ ಮುಂದೆ ಮುಂದೆ ಸಂವಾದ ನಡೆಸುವಾಗ ಇಬ್ಬರಲ್ಲಿಯೂ ಸಂವಾದದ ಬಗ್ಗೆ ಹಲವಾರು ಪ್ರಶ್ನೆಗಳನ್ನು ಸೃಷ್ಟಿ ಮಾಡುತ್ತಾರೆ ಮತ್ತು ಅದಕ್ಕೆ ಉತ್ತರವನ್ನು ಸಹ ಕಂಡುಹಿಡಿಯುತ್ತಾರೆ. ಪ್ರಶ್ನೆಯ ವಿಧಿಗಳನ್ನು ವಿದ್ವಾಂಸರು ಈ ರೀತಿ ಗುರುತಿಸುತ್ತಾರೆ.

೧. ಮೌನ ಪ್ರಶ್ನೆ

೨. ಸಂಜ್ಞೆ ಪ್ರಶ್ನೆ

೩. ಶಾಬ್ಧಿಕ ಪ್ರಶ್ನೆ ಅಥವಾ ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆಯೂ ವಿಂಗಡಿಸಿದ್ದಾರೆ.

ಅ. ಗತಕಾಲಕ್ಕೆ ಸೇರಿದ ಪ್ರಶ್ನೆಗಳು

ಉದಾ: ಕಳೆದು ಹೋದವ ಸಿಕ್ಕುತ್ತಾನೋ?

ಉತ್ತರ: ಈತ ಸಿಗುವ ಸಂಭವ ಕಡಿಮೆ, ಹೋದವನಿಗೆ ರೋಗ ಬಡಿದಿದೆ.

ಆ. ಸದ್ಯಕಾಲಕ್ಕೆ ಸೇರಿದ ಪ್ರಶ್ನೆಗಳು

ಉದಾ: ಬಾವಿಯ ತೋಡಿದರೆ ಜಲ ಬೀಳುವುದು

ನಿನಗೆ ಬಿದ್ದಿರುವ ಕನಸು ಸಂಕಟ ಸೂಚಕ

ನೀನು ಇಂದು ಬಹಳ ಸುಂದರವಾಗಿ ಕಾಣುತ್ತೀದ್ದೀಯಾ

ಇ. ಭವಿಷ್ಯತ್ ಕಾಲಕ್ಕೆ ಸೇರಿದ ಪ್ರಶ್ನೆಗಳು

ಉದಾ: ಹೋದ ಕಾರ್ಯವಾದೀತೆ?

ಉತ್ತರ: ಹೋದವ ಸತ್ಯನಿಷ್ಟನಿದ್ದರೂ ಆಲಸ್ಯದಿಂದ ಕಾರ್ಯ ಹಾನಿ ಮಾಡಿಕೊಂಡು ಬರುತ್ತಾನೆ.

ಪ್ರಶ್ನೆ: ಯೀ ಆಸ್ತಿ ಜಗಳ ಬಗೆಹರಿಯುವುದೆ?

ಉತ್ತರ: ಗರ್ವ ಬಿಟ್ಟು ದೇವರನ್ನು ನೆನೆಸಿದರೆ ಕೂಡಲೇ ಋಣಮುಕ್ತನಾಗುವೆ.[೬೯]

ಈ ಎಲ್ಲಾ ಉದಾಹರಣೆಗಳು ಭೂತ, ವರ್ತಮಾನ ಮತ್ತು ಭವಿಷ್ಯತಿಗೆ ಸಂಬಂಧಿಸಿದ್ದಾಗಿದೆ. ಪ್ರಶ್ನೆಯನ್ನು ಯಾವ ರೀತಿ ಕೇಳಬೇಕು. ಅದಕ್ಕೂ ಒಂದು ಕ್ರಮಬದ್ಧತೆಯ ಶಿಸ್ತಿನ ಬಗ್ಗೆ ಹಸ್ತಪ್ರತಿಯೊಂದರಲ್ಲಿ ಈ ರೀತಿ ಸೂಚಿಸಿದ್ದಾರೆ. ಪ್ರಶ್ನೆಕಾರಕ ಶ್ರೀಮಂತನಾಗಿರಲಿ ಸಾಧಾರಣವಾಗಿರಲಿ ಭಯ ಭಕ್ತಿಯಿಂದ ಹೂವು ಹಣ್ಣು ಅರ್ಪಿಸಿ ಪ್ರಾತಃಕಾಲದಲ್ಲಿಯೇ ಪ್ರಶ್ನೆ ಕೇಳಬೇಕು.

**ಪ್ರಶ್ನೆ ಕೇಳುವ ವಿಧಾನ**

"ಶ್ರೀ ಶಾರದಾಂಬಯ ನಮ। ಕರಣ ಸಂವತ್ಸರದ ಕಾರ್ತಿಕ ಶು॥
ಸೋಮವಾರ ಪ್ರಶ್ನೆ ಬರಿಯುವುದಕ್ಕೆ ಶುಭಮಸ್ತು।
ಯೀ ಪ್ರಶ್ನೆ ನೋಡುವ ಕ್ರಮ ಹ್ಯಾಗಂದರೆ
ಭೂಮಿ ಸಾರಿಸಿ ಮಂಡಲ ಮಾಡಿ ರಂಗವಲ್ಲಿ ಹಾಕಿ
ಯೀ ಯಂತ್ರ ಅದರ ಮ್ಯಾಲೆ ಇಟ್ಟು ಗಂಧಾಕ್ಷತೆ ಹಾಕಿ
ಪೂಜೆಗೆ ತಂಬೂಲ ಇಟ್ಟು ಮಂತ್ರಾಕ್ಷತೆ ಹಾಕಿ ಬೇಡಿಕೊಂಬುದು
ಯಿದರಲ್ಲಿ ಯಾವ ಮನೆಯಲ್ಲೂ ಬೆರಳಿಟ್ಟು ನೋಡಿಕೊಂಡರೆ
ಆಗು ಸಿದ್ಧಿ ಆಗೂದು। ಇಲ್ಲಾ ಎಂಬೂದು ನೋಡಿ ಹೇಳೂರು ।
ಯಿಾ ಪ್ರಶ್ನೆ ಹನುಮಂತ ದೇವರು ಸೀತಾದೇವಿಯ ಕಾರ್‍ಯಕ್ಕೆ
ಹೋಗುವಾಗ ನೋಡಿದ ಶಕುನೆ ಕೃಷ್ಣರುಕ್ಮಿಣಿ ತಂದ ಶಕುನ
ಯೀ ಶಕುನ ನೋಡಿ ಅರ್ಜುನ ದೇವೇಂದ್ರನಲ್ಲಿ ಹೋಗುವಾಗ್ಗೆ
ಶ್ರೀ ರಾಮಚಂದ್ರ ದೇವರು ಅರಣ್ಯಕ್ಕೆ ಹೋಗುವಾಗ ಕೇಳಿದ ಶಕುನ"[೭೦]

ಕೇವಲ ಪ್ರಶ್ನೆ ಕೇಳುವ ವಿಧಾನದ ಬಗ್ಗೆ ಹಸ್ತಪ್ರತಿಯಲ್ಲಿ ಹೇಳಿಲ್ಲ. ಪ್ರಶ್ನೆ ಕೇಳುವವನ ಲಕ್ಷಣಗಳು ಹೇಗೆ ಇರಬೇಕು. ಆತನು ಬೇರೆಯವರಿಗೆ ಕೀಟಲೆ, ಮುಜುಗರ ತರುವ ಉದ್ದೇಶಪೂರ್ವಕವಾಗಿ ಪ್ರಶ್ನೆ ಕೇಳುತ್ತಾನೋ ಅಥವಾ ಮನನೊಂದು ಕೇಳುತ್ತಿದ್ದಾನೋ ಎನ್ನುವುದನ್ನು ಆತನ ಆಂಗಿಕ ಚಲನವಲನದಿಂದ ತಿಳಿದುಬರುತ್ತದೆ. ಪ್ರಶ್ನೆಶಾಸ್ತ್ರಕ್ಕೆ ಸಂಬಂಧಿಸಿದ ಹಸ್ತಪ್ರತಿಗಳು ಈ ರೀತಿಯಾಗಿವೆ. ಪ್ರಶ್ನೆಶಾಸ್ತ್ರ, ಪ್ರಶ್ನೆ ಚೂಡಾಮಣಿ, ಪ್ರಶ್ನೆ ಜಾತಕ,

ನರಪಿಂಗಲಿ, ಸಾಮುದ್ರಿಕ, ಪ್ರಶ್ನೆ ತಂತ್ರ, ಪ್ರಶ್ನೆ ರತ್ನಾಕರ, ಧೂತಲಕ್ಷಣ, ಪ್ರಶ್ನೆ ಚಿಂತಾಮಣಿ, ನಂದಿಕೇಶ್ವರನ ಪ್ರಶ್ನೆ, ಹನುಮಂತನ ಪ್ರಶ್ನೆ, ರಾಮಚಿಂತಾಮಣಿ ಮುಂತಾದವು.

### ೨.೨.೧೦. ಶಕುನಶಾಸ್ತ್ರ

ಪರಂಪರಾಗತವಾಗಿ ಹರಿದುಬಂದ ಹಲವಾರು ಜ್ಞಾನಶಾಖೆಗಳಲ್ಲಿ ಶಕುನಶಾಸ್ತ್ರವೂ ಒಂದು. ಜೋತಿಷ್ಯಶಾಸ್ತ್ರದ ಒಂದು ಭಾಗವಾಗಿ ಈ ಶಾಸ್ತ್ರ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದೆ. ಮಾನವನ ಉಗಮದೊಂದಿಗೆ ಈ ಶಾಸ್ತ್ರವು ಬೆಳೆದುಬಂದಿದೆ. "ಶಕುನ ಎಂಬ ಪದಕ್ಕೆ ನಿಘಂಟುವಿನಲ್ಲಿ ನಾನಾ ಅರ್ಥಗಳಿವೆ. ಸುಳಿವು, ಸೂಚನೆ ಎನ್ನುವುದು ಈ ಪದದ ಸಾಮಾನ್ಯ ಅರ್ಥ. ಇನ್ನು ಲೌಕಿಕ ಶಾಸ್ತ್ರದ ಪರಿಭಾಷಎಯಲ್ಲಿ ಈ ರೀತಿ ಹೇಳಲಾಗುತ್ತದೆ. 'ಶುಭಾಶುಗಳನ್ನು ಸೂಚಿಸುವುದು'. 'ಭವಿಷ್ಯದ ಸೂಚನೆಯನ್ನು ನೀಡುವುದು'. ನಿಮಿತ್ತಗಳ ಮೂಲಕ ಮುಂದಿನ ಆಗುಹೋಗುಗಳನ್ನು ತಿಳಿಸುವ ಶಾಸ್ತ್ರ"[೪೧] ಎಂದು ಅರ್ಥೈಸಲಾಗುತ್ತಿದೆ.

ಶಕುನಶಾಸ್ತ್ರಕ್ಕೆ ಸಂಬಂಧಿಸಿದಂತೆ ವಿದ್ವಾಂಸರ ವ್ಯಾಖ್ಯಾನಗಳು ಈ ರೀತಿಯಾಗಿದೆ.

೧. "ಮುಂಬರುವ ಜಯಾಪಜಯಗಳ ಅಥವಾ ವೃದ್ಧಿಹ್ರಾಸಗಳ ಮಂಗಳಾಮಂಗಳ ಸೂಚನೆಯೇ ಶಕುನ"[೪೨] – ದೇ ಜವರೇಗೌಡ.

೨. "ಮುಂದೊದಗಬಹುದಾದ್ದನ್ನು ಮೊದಲೇ ತಿಳಿದುಕೊಂಡು ಮುಂಜಾಗ್ರತೆ ವಹಿಸುವುದಕ್ಕೆ ಸಹಾಯಕವಾದ ಶಾಸ್ತ್ರ. ಒಂದು ಘಟನೆಯ ಪೂರ್ವಭಾವಿ ಸೂಚನೆಯೇ ಶಕುನ ಶಾಸ್ತ್ರ"[೪೩]

೩. "ಮುಂದೊದಗಬಹುದಾದ ಶುಭ-ಅಶುಭ ಘಟನೆಗಳ ಸಂಗತಿಗಳ ಪೂರ್ವಸೂಚನೆ ಕೊಡುವುದೇ ಶಕುನಶಾಸ್ತ್ರ"[೪೪]

ಈ ವ್ಯಾಖ್ಯಾನಗಳನ್ನು ಗಮನಿಸಿದಾಗ ಮನುಷ್ಯನು ತನ್ನ ಜೀವನದಲ್ಲಿ ತನ್ನ ಏಳಿಗೆಯ ಕುರಿತು ಶಕುನಗಳ ಮೊರೆ ಹೋದ ಸಂಬಂಧಂತೂ ಸ್ಪಷ್ಟವಾಗಿ ತಿಳಿದುಬರುತ್ತದೆ. ಶಕುನಗಳಲ್ಲಿ ಎರಡು ವಿಧ. 'ಸಹಜ ಶಕುನ' ಮತ್ತು 'ಕೃತಕ ಶಕುನ'. ಪ್ರಕೃತಿದತ್ತವಾದ ಧೂಮಕೇತು, ಉಲ್ಕಾಪಾತ, ಭೂಕಂಪ ಪ್ರಾಣಿ, ಪಶು, ಪಕ್ಷಿಗಳ ವರ್ತನೆ ಇವು ಸಹಜ ಶಕುನಗಳಾದರೆ, ಇಂಥ ವರ್ತನೆಗಳು ಸಂಭವಿಸಿದಿದ್ದಾಗ ಮನುಷ್ಯನೇ ಕೆಲವು ಶಕುನಗಳನ್ನು ಸೃಷ್ಟಿಸಿಕೊಳ್ಳುತ್ತಾನೆ. ಇದನ್ನು ಕೃತಕ ಶಕುನ ಎನ್ನುತ್ತಾರೆ.

ಒಂದು ಕಾಲದ ನಂಬಿಕೆಗಳು ಮತ್ತೊಂದು ಸಂದರ್ಭದಲ್ಲಿ ಶಕುನಗಳಾಗಿ ಸಾಮಾನ್ಯವಾಗಿ ಮಾರ್ಪಡುತ್ತಾ ಹೋಗುತ್ತದೆ. ಇಂಥ ಶಕುನ ಶಾಸ್ತ್ರದ ಕುರಿತು, ಗಾರ್ಗ್ಯ ವರಾಹಮಿಹಿರ, ಮಾಂಡವ್ಯ, ನಾರದ ಮೊದಲಾದ ಋಷಿಗಳು ಶಕುನವನ್ನು ಶಾಸ್ತ್ರ ರೂಪದಲ್ಲಿ ರಚನೆ ಮಾಡಿದ್ದಾರೆ. ಋಷಿಗಳು ಈ ಶಾಸ್ತ್ರಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿದ್ದರು. ಪ್ರಸಿದ್ಧ ಜ್ಯೋತಿಷ್ಯ ಶಾಸ್ತ್ರಜ್ಞನಾದ ವರಾಹಮಿಹಿರನು ತನ್ನ 'ಬೃಹತ್ಸಂಹಿತೆ' ಕೃತಿಯಲ್ಲಿ ಹತ್ತು ಅಧ್ಯಾಯಗಳನ್ನು ಶಕುನಶಾಸ್ತ್ರಕ್ಕಾಗಿ ಮೀಸಲಿರಿಸಿದ್ದಾನೆ.

೧. ಲಕ್ಷ್ಮಣಾಂಕನ ಶಕುನಸಾರ

೨. ಚಾಕರಾಜನ ಶಕುನ ಪ್ರಪಂಚ

೩. ಶಕುನಗಳು

೪. ಶಕುನಶಾಸ್ತ್ರ

೫. ಶಕುನ

೬. ಶಕುನದ ಪುಸ್ತಕಗಳು"[೪೫] ಮುಂತಾದ ಹಸ್ತಪ್ರತಿಗಳು ಶಕುನಶಾಸ್ತ್ರದ ಬಗ್ಗೆ ವಿವರಣೆ ಕೊಡುತ್ತದೆ. ಕನ್ನಡದಲ್ಲಿ ಶಕುನಶಾಸ್ತ್ರದ ಕುರಿತು ಮೊದಲು ಹೇಳಿದವನು ಚಾವುಂಡರಾಯ. ಈತನ ಕೃತಿಯಾದ ಲೋಕೋಪಕಾರದಲ್ಲಿ ಹನ್ನೆರಡನೆಯ ಪ್ರಕರಣವು ಶಕುನಶಾಸ್ತ್ರದ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ೬೭ ಪದ್ಯಗಳಲ್ಲಿ ಶುಭ-ಅಶುಭ ವಸ್ತುಗಳು, ಸೀನುವುದು, ಬೆಕ್ಕು, ವಿವಿಧ ಪಶುಪಕ್ಷಿಗಳು, ಆನೆ, ಕುದುರೆ, ನಾಯಿ, ಕಾಗೆ, ಹಲ್ಲಿ, ಇರುವೆ ಮೊದಲಾದ ಶಕುನಗಳ ಕುರಿತು ಹೇಳಿದ್ದಾನೆ. ಮನುಷ್ಯನು ಕೆಲವೊಂದು ಸಂದರ್ಭದಲ್ಲಿ ಶುಭ-ಅಶುಭ ಶಕುನಗಳನ್ನು ನಂಬುವುದು ಸಾಮಾನ್ಯ ಸಂಗತಿ. "ಒಂಟಿ ಸೀನಿದರೆ ಅನಿಷ್ಟ; ಎರಡು ಬಾರಿ ಸೀನಿದರೆ ಶುಭಕರ" ಎಂಬ ಮಾತು ಜನಪದರಲ್ಲಿ ಇಂದಿಗೂ ಜನಜನಿತವಾಗಿದೆ. ಸೀನಿನಂತೆ ಬೆಕ್ಕು, ಕಾಗೆ, ಹಲ್ಲಿ ಮೊದಲಾದ ಶಕುನಗಳಿಗೆ ನಮ್ಮ ಸಮಾಜದಲ್ಲಿ ಹೆಚ್ಚು ಮಹತ್ವವನ್ನು ಕೊಡಲಾಗುತ್ತಿದೆ. ಏನ ಮನ್ನಿಸದಿರಲು ಸೀನ ಮನ್ನಿಸಬೇಕು. ಸೀನ ಮನ್ನಿಸದೇ ಹೋದರೆ, ಹೋದಲ್ಲಿ ಹಾನಿಯೇ ಬಿಕ್ಕು ಎಂದು ಸರ್ವಜ್ಞ ಸೀನಿನ ಶುಭ-ಅಶುಭದ ಕುರಿತು ತಿಳಿಸಿದ್ದಾನೆ.

ಕಲ್ಯಾಣ ಚಾಲುಕ್ಯರ ಚಕ್ರವರ್ತಿ ಸೋಮೇಶ್ವರನ ಮನಸೋಲ್ಲಾಸ ಕೃತಿಯಲ್ಲಿಯೂ ದ್ವಿತೀಯ ವಿಂಶತಿಯ ೮೧೧ರಿಂದ ೯೨೭ನೆಯ ಕ್ರಮಸಂಖ್ಯೆಯ ಶ್ಲೋಕಗಳಲ್ಲಿ ಅಮಂಗಲ

ಶಕುನ, ಪಿಂಗಳ ಶಕುನ, ಮಂಗಲ ಶಕುನ, ಶ್ವಾನ ಶಕುನ, ನರಿ, ಹಲ್ಲಿ, ಕಾಗೆ ಶಕುನ, ಪಕ್ಷಿ ಶಕುನಗಳ ಬಗ್ಗೆ ವಿವರಿಸಿದ್ದಾನೆ. ಗರ್ಭಿಣಿಯರು, ವಿಧವೆಯರು, ಮುಟ್ಟಾಗಿರುವವರು, ಕುರುಡರು, ನಪುಂಸಕರು, ಕಿವುಡರ ದರ್ಶನವಾದರೆ ಪ್ರಯಾಣ ಕೈಗೊಳ್ಳಬಾರದು. ಇಂಥವುಗಳೆಲ್ಲ ಅಮಂಗಲ ಶಕುನಗಳಾದರೆ, ಪೂರ್ಣಕುಂಭ, ಕನ್ನಡಿ, ಧ್ವಜ, ಛತ್ರಿ ಚಾಮರ, ಜಿಂಕೆ, ಮದಿಸಿದ ಆನೆ, ಕುದುರೆ ಇತ್ಯಾದಿಗಳು ಎದುರಾದರೆ ವಿಜಯಾತ್ರೆಯಲ್ಲಿ ಫಲಪ್ರಾಪ್ತಿಯಾಗುತ್ತದೆ. ಇಂಥವುಗಳೆಲ್ಲ ಮಂಗಲ ಶಕುನಗಳು ಎಂದು ಸೋಮೇಶ್ವರನು ಗುರುತಿಸಿದ್ದಾನೆ.

ಲಕ್ಷ್ಮಣಾಂಕನ ಶಕುನ ಸಾರವು ೮ ಅಧಿಕಾರ ೩೧೨ ವೃತ್ತಗಳನ್ನು ಒಳಗೊಂಡ ಕೃತಿಯಾಗಿದೆ. ಶಿವಸ್ತುತಿಯೊಂದಿಗೆ ಆರಂಭವಾಗುವ ಇದರಲ್ಲಿ ರಾಜ್ಯ ಓಲಗಯಾತ್ರೆ, ಲಾಭ ಮಳೆ ಫಲಾರ್ಹ ವಿವಾಹ ಗರ್ಭ ಪುತ್ರೋತ್ಪತ್ತಿ ಜಯ ಆಕಸ್ಮಿಕ ಕಾಲ ಮೊದಲಾದ ವಿಷಯಗಳು ಪ್ರತಿಪಾದಿತವಾಗಿವೆ. ಬ್ರಾಹ್ಮಣ ಕವಿಯಾದ ಚಾಕರಾಜನು 'ಶಕುನ ಪ್ರಪಂಚ' ಎಂಬ ಗ್ರಂಥದಲ್ಲಿ ೨೫ ಅಧ್ಯಾಯ ೬೨೦ ಕಂದ ವೃತಗಳನ್ನು ತಿಳಿಸುವುದರ ಜೊತೆಗೆ ಶಕುನ ಶಾಸ್ತ್ರವನ್ನು ಬರೆದು ವಸಿಷ್ಟ, ಗಾರ್ಗ್ಯ, ಲಾಕುಳನಾಥ, ವಸಂತರಾಜರ ಹೆಸರನ್ನು ಉಲ್ಲೇಖಿಸಿದ್ದಾನೆ. ಈತನ ಕೃತಿಯನ್ನು "ಪಿಂಗಲಿಯ ಶಾಸ್ತ್ರ", "ಪಿಂಗಲಿಯ ಶಕುನ" ಎಂದು ಪರ್ಯಾಯವಾಗಿ ಕರೆಯಲಾಗಿದೆ. ಕವಿಯ ಮಂಗಲ, ಅಮಂಗಲ ಶಕುನಗಳ ವಿವರಗಳನ್ನು ನೀಡುತ್ತ, ಪ್ರಯಾಣದ ಸಂದರ್ಭದಲ್ಲಿ ಕಳಸ, ಪತಾರೆ, ತೋರಣ, ಕನ್ನಡಿ ಆನೆ, ಆಶ್ವ ಮುಂತಾದವು ಎದುರಿಗೆ ಬಂದರೆ ಒಳ್ಳೆಯದಾಗುತ್ತದೆ ಎನ್ನುತ್ತಾನೆ. ಸ್ವರ, ವಾಕ್, ಚೇಷ್ಟೆ, ರಾಜ್ಯ, ಬಳೆ, ಗರ್ಭ, ವಿವಾಹ, ಚೋರ, ಭೋಜನ, ನಿಕ್ಷೇಪ ಮುಂತಾದ ವಿಷಯಗಳ ಕುರಿತು ಚಾಕರಾಜನ ಶಕುನಗಳ ಬಗ್ಗೆ ವಿವರಣೆ ಕೊಟ್ಟಿದ್ದಾನೆ.

### ೨.೨.೧೧. ರತ್ನಶಾಸ್ತ್ರ

ಭೂಗರ್ಭದಲ್ಲಿ ದೊರೆಯುವ ಬೆಲೆ ಬಾಳುವ ಖನಿಜ ದ್ರವ್ಯಗಳ ಬಗ್ಗೆ ಭಾರತೀಯರು ಸಹಸ್ರಾರು ವರ್ಷಗಳಿಂದ ಅಧ್ಯಯನ ಮಾಡಿ ಗ್ರಂಥಗಳನ್ನು ರಚನೆ ಮಾಡಿದ್ದಾರೆ. ಚೆಲುವ ವಿರಚಿತ 'ರತ್ನಶಾಸ್ತ್ರ'ದ ಹಸ್ತಪ್ರತಿಯು ಷಟ್ಪದಿಯಲ್ಲಿದ್ದು ಕೃತಿಯ ಪ್ರಾರಂಭದಲ್ಲಿ 'ಶುಭಮಸ್ತು' 'ಶ್ರೀ ಗಣೇಶ ಶಾರದಾಗುರುಭ್ಯೋ ನಮಃ' ಎಂಬ ಉಲ್ಲೇಖಗಳಿವೆ.

"ರತ್ನಶಾಸ್ತ್ರ' ಕನ್ನಡ ವಾರ್ಧಕ ಷಟ್ಪದಿ ಕಾವ್ಯ
ಬರೆಯುವುದಕ್ಕೆ ನಿರ್ವಿಘ್ನಮಸ್ತು
ಶ್ರೀ ರಮಣಿಯನುಪಮ ಸುರತ್ನಹಾರಮನಾಂತು ।

ವಾರಿರುಹ ಪತ್ರಲೋಚನನನಂಕದೊಳೊಪ್ಪ
ರಾರಾಜಿಸುವ ರತ್ನಗಳಿಗೆ ನಾಯಕರತುನವೆನಿಪ ಚೆನ್ನಿಗರಾಯನಾ
ಚಾರುತರ ಚರಣ ಕಾನತವಾಗಿ ಚಂಡಿಕಾ
ನಾರಿಯರಸನಿಗೆರಗಿ ಶಾರದಾಪತಿಯ ಪದ
ವಾರಿಜಕ್ಕಭಿನಮಿಸಿ ಗಣಪತಿಗೆ ಪೊಡಮಟ್ಟು ಗುರುಕಟಾಕ್ಷದಿ ಪೇಳುವೇಂ ॥೧॥

ಸಾಕ್ಷಾತ್ ಲಕ್ಷ್ಮಿಯನ್ನು ಸುರತ್ನಹಾರವಾಗಿ ಧರಿಸಿರುವ ಕಮಲದಳದಂತೆ ಕಣ್ಣನ್ನು ಹೊಂದಿರುವ ರತ್ನಗಳಿಗೆ ನಾಯಕಗಿರುವ ಚನ್ನಿಗರಾಯನ ಚರಣಗಳಿಗೆ ಚಂಡಿಕಾನಾರಿಯರಸ ಅರ್ಥಾತ್ ಪರಮೇಶ್ವರನಿಗೆ ಶಾರದಾಪತಿ ಬ್ರಹ್ಮನಿಗೆ ವಾರಿಜಕ್ಕ ಅಂದರೆ ಸಮುದ್ರರಾಜನ ಸಹೋದರಿ ಅರ್ಥಾತ್ ಲಕ್ಷ್ಮಿಗೆ, ಗಣಪತಿಗೆ ನಮಸ್ಕರಿಸಿ ಗುರುಕರುಣಾ ಕಟಾಕ್ಷದಿಂದ ರತ್ನಶಾಸ್ತ್ರವನ್ನು ಹೇಳುತ್ತೇನೆ ಎಂದು ಕವಿ ಪ್ರಥಮ ಪದ್ಯದಲ್ಲಿ ಸಾರಿದ್ದಾನೆ.[೪೬]

ಪ್ರಸಿದ್ಧ ಅರ್ಥಶಾಸ್ತ್ರಜ್ಞನಾದ ಕೌಟಿಲ್ಯನು ತನ್ನ ಕೃತಿಯಲ್ಲಿ ಖಜಾನೆಗೆ ಸೇರುವ ರತ್ನಗಳ ಪರೀಕ್ಷಾ ವಿಚಾರವನ್ನು, ವಿವಿಧ ರತ್ನಗಳ ಭೇದ ಪ್ರಭೇದಗಳನ್ನು ತಿಳಿಸುತ್ತಾ, ಮುತ್ತುಗಳು, ಮಣಿಗಳು, ವಜ್ರಗಳು, ಹವಳಗಳು ಇವುಗಳ ವಿಚಾರವನ್ನು ತಿಳಿಸಿದ್ದಾನೆ. ವರಾಹಮಿಯರನು ತನ್ನ ಬೃಹತ್ಸಂಹಿತೆಯ ಎಂಬತ್ತನೆಯ ಅಧ್ಯಾಯದಲ್ಲಿ ನವರತ್ನಗಳ ವಿಚಾರಗಳನ್ನು ಸುದೀರ್ಘವಾಗಿ ತಿಳಿಸಿದ್ದಾನೆ. ಮುತ್ತುಗಳು, ಪದ್ಮರಾಗಮಣಿಗಳು, ಮರಕತ ಇವುಗಳ ಉತ್ಪತ್ತಿ, ಭೇದ-ಪ್ರಭೇದಗಳು. ಅವುಗಳ ಬೆಲೆ ಅವುಗಳಿಂದ ರಚಿಸುವ ನಾನಾ ಬಗೆಯ ಆಭರಣಗಳು, ರತ್ನಗಳ ಬೆಲೆ, ಫಲ, ಅವುಗಳ ಗುಣ-ದೋಷಗಳು ಇತ್ಯಾದಿ ಅಂಶಗಳನ್ನು ತಿಳಿಸಿದ್ದಾನೆ. ಅಗಸ್ತ್ಯನ 'ರತ್ನಶಾಸ್ತ್ರ' ಸ್ಕಂದ ಪುರಾಣದ ಅಗಸ್ತ್ಯ ಸಂಹಿತೆಯ 'ಹಾಲಾಸ್ಯ ಮಹಾತ್ಮೆ', ಆಯುರ್ವೇದದ ಗ್ರಂಥಗಳಲ್ಲಿಯು ರತ್ನಗಳು ಮತ್ತು ಉಪರತ್ನಗಳು, ಅವುಗಳ ಗುಣ-ದೋಷಗಳ ಬಗ್ಗೆ ವಿವರವಾಗಿ ತಿಳಿಸಲಾಗಿದೆ.

ಕನ್ನಡದಲ್ಲಿ ಅನುವಾದಿಸಿರುವ ಡಾ. ಹ. ಹಲನೇಕರ ಅವರ "ರಸ ಚಂಡಾಂಶು" ಅಥವಾ 'ರಸರತ್ನ ಸಂಗ್ರಹ' ಕೃತಿಯಲ್ಲಿ 'ನವರತ್ನಗಳು' ಎಂಬ ಉಪಶೀರ್ಷಿಕೆಯಲ್ಲಿ ನವರತ್ನಗಳ ಪ್ರಭೇದ, ಶೋಧನ, ಮಾರಣ ಮತ್ತು ಉಪಯೋಗದ ಬಗ್ಗೆ ವಿವರಿಸಲಾಗಿದೆ.

೧. ವಜ್ರ ೨. ಹವಳ ೩. ಮುತ್ತು ೪. ಮರಕತ ೫. ವೈದೂರ್ಯ
೬. ಗೋಮೇದ ೭. ಮಾಣಿಕ್ಯ ೮. ಇಂದ್ರನೀಲ ೯. ಪುಷ್ಪರಾಗಳೆಂಬ

ಒಂಬತ್ತು ಜಾತಿಯ ರತ್ನಗಳನ್ನು ಗುರುತಿಸಿ, ಅದರ ಗುಣಗಳನ್ನು ತಿಳಿಸಿದ್ದಾರೆ. ರತ್ನಗಳನ್ನು ಧರಿಸುವುದರಿಂದ ಸೂರ್ಯಾದಿ ನವಗ್ರಹಗಳ ಭಾಷೆಯು ನಿವಾರಣೆಯಾಗುತ್ತದೆ ಎಂದು

ಮನುಷ್ಯನು ಅವುಗಳನ್ನು ಧರಿಸುವುದು ಸರ್ವೇಸಾಮಾನ್ಯವಾಗಿದೆ. ರತ್ನಗಳನ್ನು ಧರಿಸುವುದರಿಂದ ಆರೋಗ್ಯ ಉಂಟಾಗಿ ಫಲಪ್ರಾಪ್ತಿಯಾಗುತ್ತದೆ ಎಂಬುದು ಜನಪದರ ನಂಬಿಕೆಯಾಗಿದೆ. ನವಗ್ರಹಗಳಿಗೆ ಪ್ರಿಯವಾದ ರತ್ನಗಳ ಪಟ್ಟಿಯನ್ನು ವಿದ್ವಾಂಸರು ಈ ರೀತಿ ಗುರುತಿಸಿದ್ದಾರೆ.

| | | |
|---|---|---|
| "ಸೂರ್ಯನ | ಪ್ರೀತ್ಯರ್ಥ | ಮಾಣಿಕ್ಯ (ಪದ್ಮರಾಗ) |
| ಬುಧನಿಗೆ | ಪ್ರೀತ್ಯರ್ಥ | ಪಚ್ಚೆ(ಪಾಚೆ) |
| ಗುರುವಿಗೆ | ಪ್ರೀತ್ಯರ್ಥ | ಪುಷ್ಪರಾಗ |
| ರಾಹುವಿಗೆ | ಪ್ರೀತ್ಯರ್ಥ | ಗೋಮೇದ |
| ಮಂಗಳನಿಗೆ | ಪ್ರೀತ್ಯರ್ಥ | ಪ್ರವಾಳ(ಹವಳ) |
| ಚಂದ್ರನಿಗೆ | ಪ್ರೀತ್ಯರ್ಥ | ಮೌಕ್ತಿಕ(ಮುತ್ತು) |
| ಶನಿಗೆ | ಪ್ರೀತ್ಯರ್ಥ | ಇಂದ್ರನೀಲ(ನೀಲ) |
| ಶುಕ್ರನಿಗೆ | ಪ್ರೀತ್ಯರ್ಥ | ವಜ್ರ |
| ಕೇತುವಿಗೆ | ಪ್ರೀತ್ಯರ್ಥ | ವೈಡೂರ್ಯ"[೪೭] |

ಈ ಮಣಿಗಳನ್ನು ಧರಿಸಿದರೆ ಅಥವಾ ದಾನ ಮಾಡಿದರೆ ಒಳ್ಳೆಯದಾಗುತ್ತದೆ ಎಂದು ಪುರಾತನ ಭಾರತೀಯರ ರತ್ನಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ವೈಕ್ರಾಂತ, ಸೂರ್ಯಕಾಂತ, ಚಂದ್ರಕಾಂತ, ರಾಜಾವರ್ತ, ಲಾಲಕ, ಪೀರೋಜ ಇತ್ಯಾದಿಗಳು ಉಪರತ್ನಗಳಾಗಿವೆ.

### ೨.೨.೧೨. ಗೃಹವಾಸ್ತು ಮತ್ತು ಶಿಲ್ಪಶಾಸ್ತ್ರ

ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಮಾನವನವರೆಗೂ ಗೃಹವಾಸ್ತು ಬಳಕೆಯಲ್ಲಿರುವುದನ್ನು ಕಾಣುತ್ತೇವೆ.

'ವಾಸ್ತು' ಎನ್ನುವುದು 'ವಸ್' ಎನ್ನುವ ಧಾತುವಿನಿಂದ ನಿಷ್ಪನ್ನತೆಯನ್ನು ಹೊಂದಿದೆ ಎಂದು ಗುರುತಿಸಲಾಗಿದೆ. 'ವಸ್' ಎಂದರೆ ವಾಸಿಸು, ವಾಸಿಸುವ ಸ್ಥಳ ಎಂದರ್ಥ. ವಾಸ್ತುಶಾಸ್ತ್ರವೆಂದರೆ ಭೂಮಿ, ಭವನ, ವಾಹನ ಮತ್ತು ಶಯನಗಳಿಗೆ ಸಂಬಂಧಿಸಿದ ವಿಷಯವನ್ನು ತಿಳಿಸುತ್ತದೆ. ವಾಸ್ತುಶಾಸ್ತ್ರದಲ್ಲಿ ಎರಡು ವಿಧಗಳನ್ನು ಗುರುತಿಸಲಾಗಿದೆ. ೧. ಮಾನವಶಿಲ್ಪ, ೨. ದೇವಶಿಲ್ಪ. ಮಾನವಶಿಲ್ಪದಲ್ಲಿ ಅರಮನೆ, ಕೋಟೆ, ಬೀದಿಗಳು, ಗೃಹಗಳು, ಕೆರೆ, ಭಾವಿಗಳ ರಚನೆ, ಹೂದೋಟ, ಮತ್ತಿತರ ಸಂಗತಿಗಳು ಸೇರಿಕೊಂಡರೆ ದೇವಶಿಲ್ಪದಲ್ಲಿ ದೇವಸ್ಥಾನ, ಮೂರ್ತಿರಚನೆ, ಮಠ, ಯಜ್ಞಕುಂಡ, ರಥ ಮುಂತಾದ

ವಿಷಯಗಳು ಬರುತ್ತವೆ. ಮಾನವಶಿಲ್ಪ ಲೌಕಿಕ ಸ್ವರೂಪದ್ದಾದರೆ ದೇವಶಿಲ್ಪ, ಆಗಮಿಕ ಸ್ವರೂಪದ್ದಾಗಿರುತ್ತದೆ.

ವಾಸ್ತುಶಾಸ್ತ್ರವು ೧೧,೦೦೦ ವರ್ಷಗಳ ಹಿಂದೆಯೇ ರೂಪುಗೊಂಡಿತು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಭಾಗವತ ಪುರಾಣದಲ್ಲಿ ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಉಲ್ಲೇಖಗಳಿವೆ. ವಾಸ್ತುವಿನಲ್ಲಿ ಎರಡು ಶಾಖೆಗಳಿವೆ. ಮೊದಲನೆಯದು ವಿಶ್ವಕರ್ಮ ವಾಸ್ತು. ಇದು ಉತ್ತರ ಭಾರತದಲ್ಲಿ ಚಾಲ್ತಿಯಲ್ಲಿದ್ದರೆ. ಎರಡನೆಯದು ಶೈವ ಸಂಪ್ರದಾಯದ ಮನುವಾಸ್ತು ದಕ್ಷಿಣ ಭಾರತದಲ್ಲಿ ಹೆಚ್ಚು ಪ್ರಚಲಿತವಾಗಿದೆ. ನಿವೇಶನದ ಆಯ್ಕೆಯ ಕುರಿತು ಶಾಸ್ತ್ರಗಳು ಈ ರೀತಿ ಹೇಳುತ್ತವೆ. "ಉತ್ತರ ಮತ್ತು ಪೂರ್ವ ತಗ್ಗಾಗಿಯೂ ನೈರುತ್ಯ ಎತ್ತರವಾಗಿಯೂ ಆಗ್ನೇಯ ಮತ್ತು ವಾಯವ್ಯ ಮೂಲೆಗಳು ಸ್ವಲ್ಪ ಹೆಚ್ಚು ಕಡಿಮೆ ಸಮ ಇರಬೇಕು. ನಿವೇಶನದ ದಕ್ಷಿಣ ಮತ್ತು ಪಶ್ಚಿಮ ದಿಕ್ಕಿಗೆ ಬೆಟ್ಟಗುಡ್ಡಗಳಿರಬೇಕು. ನಿವೇಶನದಲ್ಲಿಯ ಮಣ್ಣು ಬೂದು ಮತ್ತು ಹೊಗೆ ಬಣ್ಣದಿದ್ದರೆ ಹಾಗೂ ಮರುಳು, ಸೌಳು, ನೀರು ಇರುವುದಾಗಿದ್ದರೆ ಒಳ್ಳೆಯದಲ್ಲ ಎಂದು ಹೇಳಲಾಗುತ್ತದೆ. ಕಾರಣ, ಈ ಮಣ್ಣಿನಲ್ಲಿ ಜೀವಸತ್ವದ ಕೊರತೆ ಇದ್ದು ಪೊಳ್ಳಾಗಿರುತ್ತದೆ."[೪೮] ಇಂತಹ ನೆಲದಲ್ಲಿ ಕಟ್ಟಡವನ್ನು ಕಟ್ಟಿದರೆ ಹಾನಿಯೇ ಹೆಚ್ಚಾಗುತ್ತದೆ.

ವಾಸ್ತುಶಾಸ್ತ್ರದಲ್ಲಿ ವಾಸ್ತುಪುರುಷನನ್ನು ಮೂರು ಬಗೆಯಾಗಿ ವಿಂಗಡಿಸಲಾಗಿದೆ. ಸ್ಥಿರ, ಚರ ಮತ್ತು ದಿನವಾಸ್ತು ಎಂದು. 'ಸ್ಥಿರ' ವಾಸ್ತುಪುರುಷ ಗೃಹನಿರ್ಮಾಣ ಕ್ಷೇತ್ರದಲ್ಲಿ ಈಶಾನ್ಯಕ್ಕೆ ತಲೆ ಮತ್ತು ನೈಋತ್ಯಕ್ಕೆ ಪಾದಗಳನ್ನಿರಿಸಿರುತ್ತಾನೆ. 'ಚರ' ವಾಸ್ತುಪುರುಷ ಮೂರು ತಿಂಗಳಿಗೊಮ್ಮೆ ತನ್ನ ತಲೆಪಾದ ಮತ್ತು ದೃಷ್ಟಿ ದಿಕ್ಕುಗಳನ್ನು ಬದಲಿಸುತ್ತಾನೆ. 'ದಿನ' ವಾಸ್ತುಪುರುಷ ದಿನದ ನಾಲ್ಕು ವೇಳೆಯಲ್ಲೂ ಒಂದೊಂದು ಭಾಗದಲ್ಲಿ ಒಂದೊಂದು ದಿಕ್ಕಿನೆಡೆಗೆ ತಲೆ ಇಡುತ್ತಾನೆ ಎಂದು ವಾಸ್ತುಶಾಸ್ತ್ರ ಗ್ರಂಥಗಳು ಹೇಳುತ್ತವೆ.

ಶಿಲ್ಪಶಾಸ್ತ್ರದ ಹಸ್ತಪ್ರತಿಯಲ್ಲಿ ಗೃಹ ಸಂಸ್ಥಾಪನೆ ಮಾಡುವ ವಿಧಿವಿಧಾನಗಳನ್ನು ತಿಂಗಳುಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

"ಚೈತ್ರಂ ಧನ ಹಾನಿ ಮಹಾದ್ವಯಂ ವೃಶಾಖೆ ಶುಭವಂ ಗೃಹೆ ।
ಜೇಷ್ಟತು ಮರಣಂ ವಿಧುಃ ಆಷಾಢ ವಿತ್ತನಾಶಂಚ।
ಶ್ರಾವಣೆ ಪಶುವರ್ಧನಂ ಭಾದ್ರಪದೆ ಮಹಾರೋಗಂ ।
ಕಲಹಂ ಆಶ್ವೀಜ ಮೇವಚ ಕಾರ್ತೀಕೆ ಧನ ಲಾಭಂ ಚ ।
ಮಾರ್ಗಶಿರೇ ಮಹಾದ್ವಯಂ ಪುಷ್ಯಾಗ್ನಿಬಾಧಂ ಚೈವಾ ।

ಮಘಾನಾಂ ಬಹುಪುತ್ರಕಂ ಪಾಲ್ಗುಣೆ ಧನಹಾನಿಂಚ ।
ಯಿತ್ಯತೆ ಮಾಸಲಕ್ಷಣಂ ॥"[೪೮]

ಕಾಮಾಟದ ಭೀಮಣ್ಣನ ವಚನವು ಅಳತೆಯ ವಿವರಗಳನ್ನು ಒಳಗೊಂಡು ಆಧ್ಯಾತ್ಮಿಕವಾಗಿ ನಿರೂಪಿಸುತ್ತದೆ. ಉದಾಹರಣೆಗೆ,

"ಮೂರು ಕೋಲ ಬ್ರಹ್ಮಂಗೆ ಅಳೆದುಕೊಟ್ಟೆ
ನಾಲ್ಕು ಕೋಲ ವಿಷ್ಣುವಿಗೆ ಅಳೆದುಕೊಟ್ಟೆ
ಐದು ಕೋಲ ರುದ್ರಂಗೆ ಅಳೆದುಕೊಟ್ಟೆ
ಒಂದು ಕೋಲು ರುದ್ರಂಗೆ ಅಳೆದುಕೊಟ್ಟೆ
ಇಂತಿ ಐವರು ಕೋಲಿನ ಒಳ ಹರಗಿನಲ್ಲಿ
ಅಳಲುತ್ತ ಬಳಲುತ್ತ ಒಳಗಾದರು
ಇಂತಿ ಒಳಹೊರಗೆ ಶೋಧಿಸಿಕೊಂಡು
ಅಳಿವುಳಿವಿನ ವಿವರವನರಿಯಬೇಕು
ಧಾರೇಶ್ವರಲಿಂಗ ನರಿವುದಕ್ಕೆ"[೫೦]

ಬಸವಣ್ಣನವರ ಉಳ್ಳವರು ಶಿವಾಲಯ ಮಾಡುವರಯ್ಯ ನಾನೇನು ಮಾಡಲಿ ಬಡವನಯ್ಯ, ಎನ್ನ ಕಾಲೇ ಕಂಬ, ದೇಹವೇ ದೇಗುಲವಾಯಿತ್ತು ಎನ್ನುವ ವಚನದಲ್ಲಿ ತಮ್ಮ ದೇಹವನ್ನೇ ಕಟ್ಟಡ ರೂಪಕ್ಕೆ ಅನ್ವಯಿಸುವಂತೆ ರಚಿಸಿದ್ದಾರೆ. ಈ ರೀತಿಯ ಅನೇಕ ವಚನಗಳು ನಮಗೆ ದೊರೆಯುತ್ತದೆ.

**೨.೨.೧೩. ರಟ್ಟಮತಶಾಸ್ತ್ರ**

ನಕ್ಷತ್ರ, ಗ್ರಹ, ಸೂರ್ಯ, ಚಂದ್ರ ಹಾಗೂ ಆಕಾಶಕಾಯಗಳ ಪ್ರಭಾವ ಭೂಮಿಯ ಮೇಲೆ ಯಾವ ರೀತಿಯ ಪ್ರಭಾವವನ್ನು ಬೀರುತ್ತದೆ ಎಂದು ತಿಳಿಯಲು ನಮಗೆ ರಟ್ಟಮತಶಾಸ್ತ್ರ ಪ್ರಮುಖವೆನಿಸುತ್ತದೆ. ಜ್ಯೋತಿಷ್ಯಶಾಸ್ತ್ರಕ್ಕೂ ರಟ್ಟಮತಶಾಸ್ತ್ರಕ್ಕೂ ನಿಕಟವಾದ ಸಂಬಂಧವಿದೆ. 'ರಟ್ಟ' ಎಂದರೆ ಒಂದು ರಹಸ್ಯವಾದ ವಿಷಯವನ್ನು ಭೇದಿಸಿ ತಿಳಿಸಿಕೊಡುವಂತಹದ್ದು. ಪಂಚ ಮಹಾಭೂತಗಳಾದ ನೀರು, ಬೆಂಕಿ, ಗಾಳಿ, ಭೂಮಿ ಮತ್ತು ಆಕಾಶಗಳ ಗುಟ್ಟನ್ನು ರಟ್ಟಾಗಿಸುವುದು ಎಂದು ಹೇಳಬಹುದು. ಈ ಪಂಚಭೂತಗಳ ಚಲನವಲನಗಳನ್ನು ಆಧಾರವಾಗಿಟ್ಟುಕೊಂಡು ಶಾಸ್ತ್ರಬದ್ಧವಾಗಿ ಅಧ್ಯಯನ ನಡೆಸುವುದು. ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಬೆಳೆದು ಬಂದಿರುವುದಕ್ಕೆ ಕೆಲವು ಸಾಕ್ಷ್ಯಾಧಾರಗಳು ಸಿಕ್ಕುತ್ತವೆ.

ಶೇಷಯ್ಯಂಗಾರರು ಸಂಪಾದಿಸಿದ 'ರಟ್ಟಮತ' ಗ್ರಂಥವು ಕಂದ, ವೃತ್ತಗಳಲ್ಲಿ ಬರೆಯಲ್ಪಟ್ಟಿದೆ. ರಗಳೆ, ವಚನಗಳು, ಪಿರಿಯಕ್ಕರ ತ್ರಿಪದಿಗಳು ಸಹ ಉಲ್ಲೇಖಗೊಂಡಿವೆ. ಸಂಸ್ಕೃತದ ಸಂಹಿತೆಗಳು, ರತ್ನೋಜ್ವಲ ಸಂಹಿತೆ, ಧನಕೀರ್ತಿ ಸಂಹಿತೆ, ವರಾಹ ಮಿಹಿರ, ಗಾರ್ಗ್ಯಾಚಾರ್ಯ ಸಂಹಿತೆಗಳು ಈ ರಟ್ಟಮತ ಗ್ರಂಥಕ್ಕೆ ಆಧಾರಗಳೆಂದು ಸ್ವತಃ ಕವಿಯೇ ಹೇಳಿಕೊಂಡಿದ್ದಾನೆ. ಈ ಗ್ರಂಥವು ಒಟ್ಟು ಹನ್ನೆರಡು ಅಧ್ಯಾಯಗಳಿಂದ ಕೂಡಿದೆ.

ಬದುಕಿಗೆ ಮಳೆ ಯಾವ ರೀತಿ ಆಧಾರವಾಗಿದೆ. ಅದು ಇಲ್ಲದೆ ಹೋದರೆ, ಏನಾಗುತ್ತದೆ. ಮಳೆಯು ಯಾವ ತಿಂಗಳಲ್ಲಿ ಬರುತ್ತದೆ. ಮತ್ತು ಯಾವ ದಿಕ್ಕಿನಿಂದ ಸುರಿಯುತ್ತದೆ. ಹೆಚ್ಚು ಮಳೆಯಿಂದ ಯಾವ ರೀತಿ ತೊಂದರೆ ಉಂಟಾಗುತ್ತದೆ ಎಂಬ ಹಲವಾರು ವಿಷಯಗಳನ್ನು ಕವಿಯು ಹೇಳಿದ್ದಾನೆ. "ಒಂದು ಪಲ ನೂಲು, ಒಂದು ಮೊಳ ಬಟ್ಟೆ ಇವುಗಳಿಂದ ಒಂದು ಬಾವುಟವನ್ನು ಮಾಡಿ ನೆಟ್ಟು ಅದರ ಸಹಾಯದಿಂದ ಯಾವ ಯಾವ ದಿಕ್ಕಿನಿಂದ ಗಾಳಿ ಬೀಸಿದರೆ ಮಳೆ ಬರುವುದು ಹಾಗೂ ಬರದಿರುವುದು ಇವನ್ನು ತಿಳಿಯುವ ಕ್ರಮವನ್ನು ಹೇಳಿ, ಬಳಿಕ ಮಳೆಯ ಸ್ವರೂಪವನ್ನು ತಿಳಿಯಬೇಕೆಂದು ಹೇಳುತ್ತಾನೆ. ಮಳೆಗಾಲದ ಆಷಾಢ ಮಾಸದ ಪೂರ್ಣಿಮೆ ಕಳೆದು ಬರುವ ಪಶುಗಳನ್ನು ಅರ್ಚಿಸಿ ನಿರೀಕ್ಷಿಸುವಾಗ ಮೊತ್ತ ಮೊದಲು ಊರೊಳಕ್ಕೆ ಪ್ರವೇಶಿಸುವ ಗೋವುಗಳ ಲಕ್ಷಣದಿಂದ ಮಳೆಯ ಸ್ವರೂಪವನ್ನು ತಿಳಿಯುವ ಕ್ರಮವನ್ನು ಹೇಳಿ ಸಕಲ ಸಸ್ಯಾದಿಗಳು ಚಿಗುರುವಿಕೆ, ಮುತ್ತುಗದ ಕಾಯನ್ನು ಸುಲಿದು ಲಕ್ಷಣದಿಂದ ಮುಂಗಾರು-ಹಿಂಗಾರು ಬೆಳೆಗಳಾಗುವುದನ್ನು ತಿಳಿಸಿ ಕಾಡಿನಲ್ಲಿ ಮಾವು, ಬೇವು, ಹುಣಸೆ, ಎಕ್ಕೆ ಇವುಗಳ ಅತಿಶಯ ಫಲದಿಂದ, ನವಣೆ, ಎಳ್ಳು, ನೆಲ್ಲು ಯಾವ ಬೆಳೆಯು ಆಗದಿರುವುದನ್ನು ಹೇಳಿ, ಈ ಬಗೆಯಲ್ಲಿ ಮರಗಳ ಫಲ-ಪುಷ್ಪಾದಿಗಳ ನ್ಯೂನ್ಯತಾದಿತ್ಯದಿಂದ ಮಳೆ-ಬೆಳೆಗಳಾಗುವುದು ಆಗದಿರುವುದನ್ನು ಸೂಚಿಸಿ, ಮಳೆಯ ನೆಲವನ್ನು ಚಂದ್ರನ ಬೆಳಕಿನಲ್ಲಿ ಮೂರು ಮಳ ನೂಲನ್ನಿಟ್ಟು ಆ ನೆಲದ ದಿಕ್ಕಿನಿಂದ ಹೆಚ್ಚು ಮಳೆ, ಮಧ್ಯಮ ಮಳೆ, ಮಳೆಯ ಅಭಾವವನ್ನು ಸೂಚಿಸಿ ಬೀಸಿದ ಗಾಳಿ, ಸೂರ್ಯನ ಬಿಂಬ ಹೆಚ್ಚುಕಾಂತಿಯುಳ್ಳದ್ದು, ವಾಯವ್ಯದ ಗಾಳಿ, ಮೇಘಕಾಂತಿ ನಿರ್ಮಲವಾಗಿರುವುದು ಇವುಗಳಿಂದ ಮಳೆಯಲ್ಲದೆ ಬರ ಉಂಟಾಗುವುದೆಂದು"[೫೧] ಹೇಳಿದ್ದಾನೆ. ಒಟ್ಟಿನಲ್ಲಿ ಮಳೆ ಸ್ವರೂಪವನ್ನು ಅದರ ಮಹತ್ವವನ್ನು ಕೃತಿಯಲ್ಲಿ ತಿಳಿಸಲಾಗಿದೆ.

**೨.೨.೧೪. ಜಲಶಾಸ್ತ್ರ**

"ಭೂಮಿಯ ಮೇಲೆ ಇರುವ ಸಮಸ್ತ ಜೀವರಾಶಿಯಾಗಿ ನೀರು ಮೂಲ ಆಧಾರವಾಗಿದೆ. ಹಳ್ಳ, ಕೊಳ್ಳ, ನದಿ, ಕೆರೆ, ಸಮುದ್ರ, ಮಳೆ, ಇವು ನೀರಿನ ಪ್ರಾಕೃತಿಕ ಬಹುರೂಪಗಳು

ಮಾನವರ ವಿಕಾಸ ಹಾಗೂ ಜೈವಿಕ ಪರಿಸರಕ್ಕೆ ಸೂರ್ಯನ ಬಿಸಿಲಿನ ತಾಪದಿಂದ ಭೂಮಿಯನ್ನು ತಣ್ಣಗೆ ಇಡುತ್ತದೆ. ನೀರು ಜಲಸಂಸ್ಕೃತಿಯ ಜೀವನ ದರ್ಶನವಾಗಿ ಬೆಳೆದುಬಂದಿದೆ. ಇಂಥ ಜಲಸಂಸ್ಕೃತಿ ಸಂಪ್ರದಾಯ, ಆಚರಣೆ ಹಾಗೂ ಕ್ರಿಯಾರೂಪದ ಕುರಿತು ಹಲವು ರೀತಿಯ ಮೌಖಿಕ ಸಂಕಥನಗಳಿರುವಂತೆ ಅವುಗಳಿಂದ ಪ್ರೇರಿತವಾದ, ಪರಿಷ್ಕೃತಗೊಂಡ ಲಿಖಿತ ದಾಖಲೆಗಳೂ ನಮಗೆ ಲಭ್ಯವಾಗುತ್ತವೆ. ಇವು ಶಾಸ್ತ್ರಸಾಹಿತ್ಯವೆಂದು ಪರಿಗಣಿತವಾಗಿ ಹಸ್ತಪ್ರತಿ ರೂಪದಲ್ಲಿ, ಪ್ರಕಟಿತ ಕೃತಿ ರೂಪದಲ್ಲಿ ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಲಭ್ಯ ಇವೆ".[೫೨]

ಪ್ರಾಚೀನ ಸಾಹಿತ್ಯದಲ್ಲಿ ಜಲಶಾಸ್ತ್ರದ ಪ್ರಸ್ತಾಪವನ್ನು ಕುರಿತ ಕೃತಿಗಳಿದ್ದರೆ ಚಾವುಂಡರಾಯನ ಲೋಕೋಪಕಾರ(ಕ್ರಿ.ಶ. ೧೦೨೫), ಪರಾಶರನ ಕೃಷಿ ಸೂಕ್ತಿ(ಕ್ರಿ.ಶ. ೧೦೦೦), ಕುರುಬರ ರಟ್ಟಮತ(ಕ್ರಿ.ಶ. ೧೩೦೦), ಕೌಟಿಲ್ಯನ ಅರ್ಥಶಾಸ್ತ್ರ(ಕ್ರಿ.ಶ. ३೦೦), ನಾಗವರ್ಮನ ಅಭಿದಾನ ವಸ್ತುಕೋಶ(೧೨ನೇ ಶತಮಾನ), ಮಂಗರಾಜನ ಅಭಿನವಾಭಿದಾನ(ಕ್ರಿ.ಶ. ೧೫ನೇ ಶತಮಾನ), ಕೃಷ್ಣದೇವರಾಯನ ಆಮುಕ್ತ ಮಾಲ್ಯದ, ಕೆಳದಿ ಬಸವರಾಜ ಸಂಕಲಿಸಿದ ಶಿವತತ್ವ ರತ್ನಾಕರ, ಕೃತಿಗಳಲ್ಲಿ ಕೃಷಿ, ಬೆಳೆ, ಮಳೆ, ಮೋಡ, ಮಿಂಚು, ಗುಡುಗು, ನೀರಾವರಿಯ ಪ್ರಾಮುಖ್ಯತೆ ಮತ್ತು ಅವುಗಳ ಫಲಾಫಲಗಳ ವಿಚಾರಗಳನ್ನು ವಿವರಿಸಲಾಗಿದೆ.

ಜನಪ್ರಿಯ ಕೃಷಿ ಗಾದೆಗಳು ಎನ್ನುವ ಪುಸ್ತಕದಲ್ಲಿ ಮಳೆಗಳ ವರ್ಗೀಕರಣವನ್ನು ಈ ರೀತಿ ಗುರುತಿಸಿದ್ದಾರೆ.

"೧. ಪೂರ್ವ ಮುಂಗಾರು ಮಳೆಗಳು(ಮಾರ್ಚ್, ಮೇ, ಜೂನ್)
ರೇವತಿ, ಅಶ್ವಿನಿ, ಭರಣಿ, ಕೃತ್ತಿಕಾ, ರೋಹಿಣಿ

೨. ಮುಂಗಾರು ಮಳೆಗಳು(ಜೂನ್-ಅಗಸ್ಟ್ ಮಧ್ಯದವರೆಗೆ)
ಮೃಗಶಿರಾ, ಆರ್ದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ

೩. ತಡವಾಗಿ ಬರುವ ಮುಂಗಾರು ಮಳೆಗಳು
ಅಗಸ್ಟ್ ಮಧ್ಯದಿಂದ ಅಕ್ಟೋಬರ್ ಮಧ್ಯದವರೆಗೆ
ಮಖಾ(ಮಗಿ), ಪುಬ್ಬಾ, ಉತ್ತರಾ, ಹಸ್ತ

೪. ಹಿಂಗಾರು ಮಳೆಗಳು(ಆಕ್ಟೋಬರ್ ಮೂರನೇ ವಾರದಿಂದ ಡಿಸೆಂಬರ್ ಮೊದಲ ವಾರ)
ಚಿತ್ತ, ಸ್ವಾತಿ, ವಿಶಾಖ, ಅನೂರಾಧ"[೫೩]

### ೨.೨.೧೫. ಯೋಗಶಾಸ್ತ್ರ

ಲೌಕಿಕಶಾಸ್ತ್ರ ಸಾಹಿತ್ಯ ಪರಂಪರೆಯಲ್ಲಿ ಕಾವ್ಯ ಮತ್ತು ಕಾವ್ಯೇತರಶಾಸ್ತ್ರಗಳಿಂದ ವಿಭಾಗಿಸುವುದುಂಟು. ಈ ಕಾವ್ಯೇತರ ಶಾಸ್ತ್ರದಲ್ಲಿ ಯೋಗಶಾಸ್ತ್ರವು ಪ್ರಮುಖವಾದುದು. ಯೋಗವು ಕಲೆಯೂ ಹೌದು, ಶಾಸ್ತ್ರವೂ ಹೌದು. ಮಾನವನು ತನ್ನ ಬದುಕನ್ನು ಸಾರ್ಥಕಗೊಳಿಸಲು ಯೋಗವನ್ನು ಸಾಧನವನ್ನಾಗಿ ಬಳಸುತ್ತಿದ್ದಾನೆ. ಯೋಗ ಎಂಬ ಪದವು ಯುಜಿರ್ ಮತ್ತು ಯುಜ್ ಎಂಬ ಎರಡು ಸಂಸ್ಕೃತ ಧಾತುಗಳಿಂದ ನಿಷ್ಪನ್ನಗೊಂಡಿದೆ. ಯೋಗ ಪದವು ಅನೇಕ ಅರ್ಥಗಳನ್ನು ಒಳಗೊಂಡಿದೆ. ಸಂಯೋಗ, ಹೊಂದಿಕೆ, ಕೂಡುವಿಕೆ ಎಂಬುದು ಸಾಮಾನ್ಯ ಅರ್ಥವಾದರೆ, ಧ್ಯಾನ, ಸಮಾಧಿ, ಸಾಮರಸ್ಯ, ಐಕ್ಯ ಎಂಬುದನ್ನು ವಿಶೇಷ ಅರ್ಥವಾಗಿ ಬಳಸಲಾಗುತ್ತದೆ. ದಾರ್ಶನಿಕರು, ಅನುಭಾವಿಗಳು, ಶರಣರು, ಸಂತರು, ದಾಸರು, ಕವಿಗಳು ಯೋಗಕ್ಕೆ ವಿಶೇಷ ಮಹತ್ವವನ್ನು ನೀಡಿದ್ದಾರೆ. ಹೀಗಾಗಿ ಅನೇಕರು ತಮ್ಮದೇ ಆದ ಅಭಿಪ್ರಾಯಗಳನ್ನು ವ್ಯಾಖ್ಯಾನದ ರೂಪದಲ್ಲಿ ನೋಡಬಹುದು.

೧. ಸಂಯೋಗೋ ಯೋಗ ಇತ್ಯಾಹುರ್ಜೀದಾತ್ಮ್ಯ ಪರಮಾತ್ಮನೋ(ಜೀವಾತ್ಮ ಪರಮಾತ್ಮರ ಸಂಯೋಗವೇ ಯೋಗ)-ಯಾಜ್ಞವಲ್ಕ್ಯ

೨. ಯೋಗಶ್ಚಿತ್ತವೃತ್ತಿ ನಿರೋಧಃ (ಚಿತ್ತವೃತ್ತಿ ನಿರೋಧವೇ ಯೋಗ)–ಪತಂಜಲಿ

೩. ಸಮತ್ವಂ ಯೋಗ ಉಚ್ಯತೇ, ಯೋಗಃ ಕರ್ಮಸುಕೌಶಲಮಂ(ಸಮತ್ವ ಹಾಗೂ ಕರ್ಮಕೌಶಲವೇ ಯೋಗ)–ಭಗವದ್ಗೀತೆ

೪. ಕೇವಲತ್ವವೇ ಯೋಗ–ಜೈನದರ್ಶನ

೫. ನಿವೃತ್ತಿಯಂದ ಪ್ರವೃತ್ತಿ ಸಾಧನೆಯೇ ಯೋಗ–ಬೌದ್ಧದರ್ಶನ

೬. ಪ್ರಕೃತಿ ಪುರುಷರ ವಿಯೋಗವೇ ಯೋಗ–ಸಾಂಖ್ಯದರ್ಶನ

೭. ಆತ್ಮ ಪರಮಾತ್ಮರ ಸಂಯೋಗವೇ ಯೋಗ–ವಿಶಿಷ್ಟಾದ್ವೈತ

೮. ಲಿಂಗಾಂಗ ಸಾಮರಸ್ಯವೇ ಯೋಗ–ವೀರಶೈವ ದರ್ಶನ

೯. ಕಾಯ ವಾಙ್ಮನಃ ಕರ್ಮಯೋಗ–ತತ್ವರತ್ನ ಪ್ರದೀಪಿಕೆ

ಈ ಮೇಲಿನ ಎಲ್ಲಾ ಹೇಳಿಕೆಗಳೊಂದಿಗೆ "ಆತ್ಮ ಮತ್ತು ಪರಮಾತ್ಮರ ಸಂಯೋಗ ಸಾಧನೆಯೇ ಯೋಗ" ಮತ್ತು "ದೇಹ ಮೋಹವಳಿದು ಪರಮಾತ್ಮನಲ್ಲಿ ಆಸಕ್ತನಾಗುವಂತೆ

ಮಾಡುವುದೇ ಯೋಗ" ಎಂದು ವೀರಣ್ಣ ರಾಜೂರ ಹಾಗೂ ಪಿ. ಮಹಾದೇವಪ್ಪ ಅವರ ಹೇಳಿಕೆಗಳು ಇದೇ ಅರ್ಥವನ್ನು ಸೂಚಿಸುತ್ತದೆ"[೫೪]

ಯೋಗ ಪ್ರಕಾರಗಳನ್ನು ಪ್ರಾಚೀನ ಕಾಲದಲ್ಲಿ ಮಂತ್ರಯೋಗ, ಲಯಯೋಗ, ಹಠಯೋಗ ಹಾಗೂ ರಾಜಯೋಗ ಎಂದು ಗುರುತಿಸಿದರೆ, ಸಿದ್ಧರಾಮರು ಅಷ್ಟಾಂಗಯೋಗ, ಪಂಚಯೋಗ, ಏಕಮುದ್ರೆ, ತ್ರಮುದ್ರೆ, ಹಾಗೂ ಬಹುಮುದ್ರೆಗಳೆಂದು, ಗುರುತಿಸಿದರೆ, ಆದಯ್ಯನು ತನ್ನ ವಚನಗಳಲ್ಲಿ ಹಠಯೋಗ, ಲಂಬಿಕಾಯೋಗ, ಆತ್ಮಯೋಗ, ಸಿದ್ಧಯೋಗ, ಪಿಶಾಚಯೋಗ ಮತ್ತು ಅಷ್ಟಾಂಗ ಯೋಗಗಳೆಂದು ಹೇಳಿದ್ದಾನೆ.

ಯೋಗಶಾಸ್ತ್ರ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕನ್ನಡ ಕಾವ್ಯ ಪುರಾಣಗಳಲ್ಲಿ ಅಲ್ಲಲ್ಲಿ ಉಲ್ಲೇಖಗೊಂಡಿರುವುದನ್ನು ಕಾಣಬಹುದು. ಯೋಗ, ಯೋಗದ ಪ್ರಕಾರಗಳಾದ ಯಮ ನಿಯಮ ಪ್ರಾಣಾಯಮ ಆಸನ, ಯೋಗನಿದ್ರೆಗಳ ಕುರಿತು ಕವಿಗಳು ಚರ್ಚಿಸಿದ್ದಾರೆ. "ಕಾಪಿಲ ಸಿದ್ಧಾಂತ ಮುಮಂ ಯೋಗ ಶಾಸ್ತ್ರಮುಮಂ ತೋರಿ ಲೋಕಮಂ ಸಮ್ಯಗ್ ಜ್ಞಾನಿ ಪರಾಙ್ಮುಖಂ ಮಾಡಿದಂ" (ಅದೇ, ಪು.೧೯೯) ಎಂದು ಪಂಪ ಮಹಾಕವಿಯು ಆದಿಪುರಾಣದಲ್ಲಿ ಯೋಗದ ಪ್ರಸ್ತಾಪವನ್ನು ಮಾಡಿದ್ದಾನೆ. ೧೨ನೇ ಶತಮಾನದ ಶಿವಶರಣರು ಸಹ ಯೋಗಶಾಸ್ತ್ರವನ್ನು ತಮ್ಮದೇ ಅನುಭವಗಳ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ. ಅಲ್ಲಮಪ್ರಭುಗಳು ಅಷ್ಟಾಂಗ ಯೋಗಗಳನ್ನು ಹೇಳುತ್ತಾ ರಾಜಯೋಗ ಮತ್ತು ಶಿವಯೋಗದಲ್ಲಿರುವ ಭಿನ್ನತೆಯನ್ನು ಈ ರೀತಿ ಗುರುತಿಸಿದ್ದಾರೆ. "ಅಷ್ಟಾಂಗ ಯೋಗದಲ್ಲಿ ಯಮ ನಿಯಮಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಯೆಂದು ಎಂಟು ಯೋಗ ಉಂಟು. ಅಲ್ಲಿ ಅಳಿದು ಕೂಡುವುದೊಂದು ಯೋಗ, ಅಳಿಯದೇ ಕೂಡುವುದೊಂದು ಯೋಗ, ಈ ಎರಡರ ಯೋಗದೊಳಗೆ ಅಳಿಯದೇ ಕೊಡುವ ಯೋಗವರಿದು ಕಾಣಾ ಗುಹೇಶ್ವರ"[೫೫] ಎಂದಿದ್ದಾರೆ.

ಕನ್ನಡದಲ್ಲಿ ಯೋಗಶಾಸ್ತ್ರವನ್ನೇ ಮುಖ್ಯ ವಸ್ತುವನ್ನಾಗಿಟ್ಟುಕೊಂಡು ರಚನೆಗೊಂಡ ಕೃತಿಗಳೆಂದರೆ,

೧. ಶಾಂತರಸ ಕವಿಯ ಯೋಗ ರತ್ನಾಕರ

೨. ಸಪ್ತ ಕಾವ್ಯದ ಗುರುಬಸವನ-ಯೋಗಾಂಗ ವಿಭೂಷಣ

೩. ಯೋಗ ತಾರಾವಳಿ

೪. ಏಕೋರಾಮ ಶಿವಯೋಗೀಶ್ವರ-ಯೋಗ ಪ್ರಭಾವ ಸೂತ್ರ

೫. ಗೋರಕ್ಷಕ–ಗೋರಕ್ಷ ಶತಕಂ

೬. ಯೋಗದ ರಹಸ್ಯವು

೭. ಯೋಗಾಮೃತ"[೫೬]

ಯೋಗಶಾಸ್ತ್ರವನ್ನೇ ವಸ್ತುವನ್ನಾಗಿಟ್ಟುಕೊಂಡು ರಚನೆಗೊಂಡ ಯೋಗ ರತ್ನಾಕರ ಕೃತಿಯನ್ನು ಜೈನಕವಿ ಶಾಂತರಸರು ರಚಿಸಿದ್ದಾರೆ. ಎಂಟು ಸಂಧಿಗಳನ್ನೊಳಗೊಂಡ ಯೋಗರತ್ನಾಕರದಲ್ಲಿ ೪೯೯ ಕಂದ ಪದ್ಯಗಳಿವೆ. ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿ ಎಂಬ ಅಷ್ಟಾಂಗ ಯೋಗಗಳ ನಿರೂಪಣೆಯೊಂದಿಗೆ, ಪತಂಜಲಿಯ ಯೋಗ ಸೂತ್ರದ ವಿಷಯವನ್ನು ಜೈನ ತತ್ವಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಕವಿಯು ನೇಮಿಜಿನ, ಜೀನೇಂದ್ರ, ಸಿದ್ಧಾದಿ, ಆಚಾರ್ಯ, ಉಪಾಧ್ಯಾಯ, ಪರಮೇಷ್ಠಿಗಳನ್ನು ಸ್ಮರಿಸುತ್ತಾ. ಅಷ್ಟಾಂಗ ಯೋಗಗಳ ವಿವರಣೆಯನ್ನು ಮಾಡಿದ್ದಾರೆ. ಯೋಗಸಾಧಕನಾದವನು, ದೇಶ, ಕುಲ, ಜಾತಿಯಿಂದ ಪರಿಶುದ್ಧನಾಗಿದ್ದು ಜೀವದಯಾಪರನಾಗಿರಬೇಕು. ಅಲ್ಲದೆ, ಕೊಲೆ, ಹುಸಿ, ಕಳವು, ಹಾದರ ಮಾಡದವನಾಗಿರಬೇಕು ಎಂಬ ಸಾಧಕನ ಒಟ್ಟಾರೆ ಲಕ್ಷಣಗಳನ್ನು ವಿವರಿಸಿದ್ದಾರೆ.

ಇದರಲ್ಲಿ ಗುರುಬಸವನ ಶಿವಯೋಗಾಂಗ ವಿಭೂಷಣ ಕೃತಿಯಲ್ಲಿ ಅಷ್ಟಾಂಗ ಯೋಗದ ಬಗ್ಗೆ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ ಹಾಗೂ ಶಿವಾರ್ಚನೆಗಳೆಂಬ ಐದು ಪ್ರಕಾರಗಳಿವೆ. ಧ್ಯಾನ ಧಾರಣಿ ತಿಳಿಸುತ್ತಾ, ಶಿವಯೋಗದ ಮಹತ್ವವನ್ನು ನಿರೂಪಿಸಿದ್ದಾರೆ. ಸಮಾಧಿಗೆ ವಿಶೇಷ ಪ್ರಾಧಾನ್ಯತೆಯನ್ನು ನೀಡಲಾಗಿದೆ. ಅಷ್ಟಾಂಗ ಯೋಗಗಳಲ್ಲಿ ಕೊನೆಯದಾದ ಸಮಾಧಿಯ ಬಗೆಗೆ ಕವಿಯು ಈ ರೀತಿ ವ್ಯಾಖ್ಯಾನಿಸಿದ್ದಾರೆ.

"ಈರೆಂಟಂಗುಲಮಾನದ ಕುರುಹಿನ
ಭೂರಿ ಸುಖಾಶ್ರಯವೆನಿಸುವ ನಾದದ
ಮೇರೆಯ ಚಿದ್ರೂಪಿನ ಘನಲಿಂಗ ಕಳೆಯ ನಿಜ ನಿರುಪಮದ
ಸಾರ ಶಿಖಾಂತದೊಳೆರಡಿಲ್ಲದ ಘನ
ಸಾರವಳಿದು ಹೋದಂತುರಿಯೊಳಿ ತಿಳಿ
ವಾರಿಸಲಿಲದೊಳಗಿದ ಪರಿಯಂತಿಹುದೇ ಪರಮಸಮಾಧಿ"[೫೯]

ಗೋರಕ್ಷಶತಕಂ ಕೃತಿಯಲ್ಲಿ ಆಸನ ಪ್ರಾಣಾಯಾಮ, ಬಂಧ, ಮುದ್ರಾ, ಷೋಡಶಾಧಾರ, ವ್ಯೋಮಪಂಚಕ, ಶರೀರದಲ್ಲಿಯ ಕ್ಷೇತ್ರೋಪಕ್ಷೇತ್ರಗಳ ವಿವರಗಳಿವೆ. ಯೋಗ ತಾರಾವಳಿ

ಕೃತಿಯಲ್ಲಿ ದೇಹದ ಸಂರಚನೆ, ಪಂಚಭೂತಗಳ ವರ್ಣನೆ, ನಾಡಿಗಳ ವಿವರ, ಪಂಚವಿಂಶತಿ ತತ್ವಗಳ ನಿರೂಪ, ಭೋಗ, ಧ್ಯಾನ, ಮಂತ್ರ, ಲಯ, ಹಠ, ರಾಜಯೋಗಗಳ ಸಾಧನಕ್ರಮಗಳನ್ನು ಮತ್ತು ಮುದ್ರೆಗಳ ಲಕ್ಷಣಗಳು ವಿವರಣೆಯನ್ನು ಕಾಣಬಹುದು.

**೨.೨.೧೬. ಭೈಷಜಶಾಸ್ತ್ರ**

ಕನ್ನಡ ಲೌಕಿಕ ಶಾಸ್ತ್ರಸಾಹಿತ್ಯ ಪರಂಪರೆಯಲ್ಲಿ ಭೈಷಜಶಾಸ್ತ್ರವು ಸಹ ಪ್ರಮುಖವಾದ ವಿಷಯವಾಗಿದೆ. ಭೈಷಜಶಾಸ್ತ್ರ ಎಂದರೆ ಔಷಧಶಾಸ್ತ್ರ ಎಂದು ಅರ್ಥ. ಇದು ವೈದ್ಯಶಾಸ್ತ್ರದ ವ್ಯಾಪ್ತಿಗೆ ಒಳಪಡುವುದರಿಂದ ಮನುಷ್ಯರಿಗೆ ಬರುವ ಕಾಯಿಲೆಗಳಾದ ವಾತ, ಪಿತ್ತ, ಶ್ಲೇಷ್ಮಗಳಿಗೆ ನೀಡುವ ಔಷಧ ವಿಧಾನ, ಸೇವನೆಯ ಕ್ರಮ ಹಾಗೂ ರೋಗ ನಿವಾರಣೆಯ ಹಂತವನ್ನು ತಿಳಿಸುತ್ತದೆ. "ಈ ಹೆಸರಿನ ಏಕೈಕ ಓಲೆಗರಿ ಹಸ್ತಪ್ರತಿ (ಕೆ.೧೭೭೭/೧, ಗಾತ್ರ ೮.೨ ಇಂಚು ೧.೨ ಇಂಚು ಪುಟ ೩೬)ಯು ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿದೆ. ಸಾಂಗತ್ಯ ಪ್ರಕಾರದಲ್ಲಿರುವ ಈ ಕೃತಿಯನ್ನು ಬರೆದ ಕವಿಯ ಉಲ್ಲೇಖವಾಗಲಿ, ಕಾಲದ ಉಲ್ಲೇಖವಾಗಲಿ ಹಸ್ತಪ್ರತಿಯಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಹಾಗೆಯೇ ಕೃತಿಯನ್ನು ಲಿಪೀಕರಿಸಿದ ಲಿಪಿಕಾರನ ಹೆಸರು ಹಾಗೂ ಕಾಲಗಳೂ ಸಹ ಈ ಹಸ್ತಪ್ರತಿಯಲ್ಲಿ ಉಪಲಬ್ಧವಿರುವುದಿಲ್ಲ. ಹಸ್ತಪ್ರತಿಯಲ್ಲಿನ ಪಠ್ಯವು 'ಸಾಂಗತ್ಯ' ಪ್ರಕಾರದಲ್ಲಿದ್ದುದನ್ನು ಆಧರಿಸಿ ಇದೊಂದು ಮಧ್ಯಕಾಲೀನ ಕನ್ನಡ ಸಾಹಿತ್ಯಿಕ ಸಂದರ್ಭದಲ್ಲಿ ರಚನೆಗೊಂಡ ಕೃತಿಯೆಂದು ಭಾವಿಸಬಹುದು."[೫೮] ವಾತ, ಪಿತ್ತ, ಶ್ಲೇಷ್ಮಗಳಿಂದುಂಟಾಗುವ ವಿವಿಧ ರೋಗಗಳಿಗೆ ಔಷಧ ತಯಾರಿಕೆಯ ವಿಧಾನ, ಔಷಧಿ ಸೇವನೆಯ ಕ್ರಮ ಮತ್ತು ರೋಗ ಉಪಶಮನದ ಕುರಿತು ಮೂರು ಹಂತಗಳೆಂದು ಅವುಗಳನ್ನು ೧. ಆನಂದಭೈರವ ರಸ ೨. ಚಂಡಭಾನು ರಸ ಮತ್ತು ೩. ಚಂಡಭಾಸ್ಕರ ರಸ ಹಾಗೂ ಅವುಗಳ ಔಷಧಿ ಸೇವನೆಯ ಕ್ರಮವನ್ನು ವಿವರಿಸಲಾಗಿದೆ.

ಭೈಷಜಶಾಸ್ತ್ರವು ಪ್ರತಿಯೊಂದು ಕಾಯಿಲೆಗೆ ಸಂಬಂಧಿಸಿದ ಔಷಧಿ ಹಾಗೂ ಸಿದ್ಧತೆಯ ವಿಧಾನಗಳನ್ನು ವಿವಿಧ ಬಗೆಯ ಪದಾರ್ಥಗಳೊಂದಿಗೆ ಔಷಧಿಯನ್ನು ಸೇವಿಸುವ ಕ್ರಮವನ್ನು ಹಾಗೂ ರೋಗ ನಿವಾರಣೆಗೆ ಸಂಬಂಧಿಸಿದಂತೆ ಉಪಕ್ರಮವನ್ನು ವಿಸ್ತಾರವಾಗಿ ತಿಳಿಸುತ್ತದೆ.

ಭೈಷಜಶಾಸ್ತ್ರದಲ್ಲಿ ಪ್ರಮುಖವಾಗಿ ನೀಲಕಂಠರಸ, ಪಂಚಾಮೃತ ರಸ, ರಸ ಸಿಂಧೂರ, ಚಂದ್ರಕಲಾ ರಸ, ಸೂರ್ಯ ಪ್ರಭಾಕರ ರಸ, ಹಿರಣ್ಯ ಗರ್ಭರಸ, ಅಗ್ನಿಕುಮಾರ ರಸ, ಅಜೀರ್ಣ ಕಂಠಕ ರಸ, ಪ್ರಭಾವತಿ ರಸ, ಗೋಡಾಚೂಳಿ ರಸ, ಚಂಡವಿಕ್ರಮರಸ,

ಸಂಕರ್ಶಣರಸ, ಉದಯಭಾಸ್ಕರ ರಸ, ಈ ಎಲ್ಲ ರಸಗಳನ್ನು ಕ್ರಮಬದ್ಧವಾಗಿ ಸೇವಿಸಿದರೆ ಅದರಿಂದ ಉಂಟಾಗುವ ಪ್ರಯೋಜನಗಳನ್ನು ಈ ಶಾಸ್ತ್ರಕೃತಿಯಲ್ಲಿ ಕವಿಯು ತಿಳಿಸಿದ್ದಾನೆ.

ನೀಲಕಂಠ ರಸದೊಂದಿಗೆ ಜೇನುತುಪ್ಪ ಬೆರೆಸಿ ತೆಗೆದುಕೊಳ್ಳುವುದರಿಂದ ಕ್ಷಯರೋಗ ನಿವಾರಣೆ ಆಗುತ್ತದೆ. ಮುಂದುವರಿದು ಶ್ವಾಸದ ತೊಂದರೆ ನಿವಾರಣೆ, ಕಲ್ಮವು ನಿವಾರಣೆ, ಜ್ವರ ನಿವಾರಣೆಗೆ ಸನ್ನಿರೋಗ ನಿವಾರಣೆ, ಸಕಲರೋಗ ನಿವಾರಣೆ, ಗಂಟಲು ರೋಗ ನಾಲಿಗೆ ರೋಗಗಳ ನಿವಾರಣೆ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಪಂಚಾಮೃತ ರಸದಿಂದ ಹಿಪ್ಪಲಿಶುಂಠಿ ಬೆರೆಸಿ ತೆಗೆದುಕೊಳ್ಳುವುದರಿಂದ ಕಪ ನಿವಾರಣೆ ಮತ್ತು ತ್ರಿ ಕಟುಕವನ್ನು ಪಂಚಾಮೃತದೊಂದಿಗೆ ಪಡೆಯುವುದರಿಂದ ಕ್ಷಯರೋಗ, ಹೃದ್ರೋಗ, ಶ್ವಾಸದ ತೊಂದರೆ ನಿವಾರಣೆಯನ್ನು ಮಾಡುತ್ತದೆ. ಹೀಗೆ ಭೈಷಜಶಾಸ್ತ್ರವು ಮನುಷ್ಯರಿಗೆ ಉಂಟಾಗುವ ಎಲ್ಲಾ ಕಾಯಿಲೆಗಳಿಗೆ ಆಯುರ್ವೇದದ ಮಾದರಿಯಲ್ಲಿ ಔಷಧೋಪಚಾರವನ್ನು ಒದಗಿಸುವ ಮೂಲಕ ಉಪಯುಕ್ತ ಮಾಹಿತಿ ನೀಡುತ್ತದೆ.

### ೨.೨.೧೭. ಕಾಮಶಾಸ್ತ್ರ

ಪುರುಷಾರ್ಥಗಳಲ್ಲಿ ಒಂದಾದ ಕಾಮಶಾಸ್ತ್ರವು ಲೈಂಗಿಕ ಜ್ಞಾನವನ್ನು ತಿಳಿಸುವ ಶಾಸ್ತ್ರವಾಗಿದೆ. ಲೌಕಿಕವಾಗಿ ಕಾಮದಿಂದ ಸಂತಾನಾಭಿವೃದ್ಧಿಯಾಗುವ ಮೂಲಕ ಸಂತಾನಾಭಿವೃದ್ಧಿಯೊಂದಿಗೆ ಸಮಾಜದ ಬೆಳವಣಿಗೆಗೆ ಕಾರಣವಾಗಿದೆ. ಈ ಕಾಮಕ್ರಿಯೆ ಜಗತ್ತಿನ ಸರ್ವ ಜೀವರಾಶಿಗಳಲ್ಲಿ ಒಂದಲ್ಲ ಒಂದು ರೀತಿಯಿಂದ ಅಭಿವ್ಯಕ್ತಗೊಳ್ಳುತ್ತಿರುತ್ತದೆ. ಈ ಕ್ರಿಯೆಯ ಸ್ವರೂಪ ವೈವಿಧ್ಯತೆಗಳನ್ನು ತಿಳಿಸುವುದಕ್ಕಾಗಿ ಪ್ರಾಚೀನಕಾಲದಿಂದಲೂ ನಮ್ಮ ಪೂರ್ವಜರು ಶಾಸ್ತ್ರೋಕ್ತವಾಗಿ ಕೃತಿಗಳನ್ನು ರಚಿಸಿದ್ದಾರೆ. ಕ್ರಿ.ಪೂ. ೧೩೦೦ರಲ್ಲಿ ಈಜಿಪ್ಪಿನಲ್ಲಿ ದೊರೆತ ಕಾಗದ ರೂಪದ ಕಾಮಶಾಸ್ತ್ರದ ಹಸ್ತಪ್ರತಿ ಅತ್ಯಂತ ಪ್ರಾಚೀನವಾದ ಲಿಖಿತ ದಾಖಲೆ ಎಂದು ನಂಬಲಾಗಿದೆ. ಭಾರತದಲ್ಲಿ ವಾತ್ಸಾಯನನ ಕಾಮಸೂತ್ರ ಕೃತಿಯು ಈ ಪರಂಪರೆಯಲ್ಲಿ ದಾಖಲಾದ ಮೊದಲ ಕೃತಿಯಾಗಿದೆ. ಇದರ ರಚನೆಯ ಕಾಲದ ಬಗ್ಗೆ ವಿದ್ವಾಂಸರು ಒಂದನೆಯ ಶತಮಾನದಲ್ಲಿ ರಚನೆಗೊಂಡಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಈ ಕೃತಿಯನ್ನು ಅನುಸರಿಸಿ ಭಾರತದ ವಿವಿಧ ಭಾಷೆಗಳಲ್ಲಿ ಅನೇಕ ಕಾವ್ಯಗಳು ರಚನೆಗೊಂಡಿವೆ. ಕನ್ನಡದಲ್ಲಿ ಕಾಮಶಾಸ್ತ್ರದ ಕುರಿತಂತೆ ರಚನೆಯಾಗಿರುವ ಕೃತಿಗಳು ಕಡಿಮೆ ಇದ್ದರೂ ಸ್ವರೂಪ ಮತ್ತು ಶಾಸ್ತ್ರದ ದೃಷ್ಟಿಯಿಂದ ಜನಪ್ರಿಯತೆ ಪಡೆದುಕೊಂಡಿದೆ. ಇವುಗಳಲ್ಲಿ ಪ್ರಮುಖವಾದ ಚಂದ್ರರಾಜನ ಮದನತಿಲಕ, ಜನ್ನನ ಅನುಭವ ಮುಕುರ, ಕಲ್ಲರಸನ ಜನವಶ್ಯ, ಕಲಾಮಲ್ಲನ ಮನ್ಮಥವಿಜಯ, ಕಕ್ಕೋಕನ

ರತಿರಹಸ್ಯ ಟೀಕು, ಅಂಗಜಬೋಧ, ಮಲ್ಲಣ್ಣ ಕವಿಯ ಕೋಕಶಾಸ್ತ್ರ ಹೀಗೆ ಹತ್ತಾರು ಕೃತಿಗಳನ್ನು ನೋಡಬಹುದಾಗಿದೆ.

**೨.೨.೧೮. ಸಾಮುದ್ರಿಕ ಶಾಸ್ತ್ರ**

ಕನ್ನಡ ಶಾಸ್ತ್ರಸಾಹಿತ್ಯದ ಕೃತಿಗಳಲ್ಲಿ ಸಾಮುದ್ರಿಕ ಶಾಸ್ತ್ರವು ಸಹ ಒಂದಾಗಿದೆ. ಸಾಮುದ್ರಿಕ ಶಾಸ್ತ್ರವು ಜ್ಯೋತಿಷ್ಯಶಾಸ್ತ್ರದ ಪರಿಧಿಗೆ ಸೇರುವ ಪ್ರಮುಖ ವಿಷಯವಾಗಿ ಉಲ್ಲೇಖಿಸಲಾಗಿದೆ. ಪ್ರಾಚೀನ ಭಾರತದಲ್ಲಿನ ಪ್ರಮುಖ ಋಷಿಮುನಿಗಳಾದ ಭೃಗು, ಕಶ್ಯಪ, ಪರಾಶರ ಮುಂತಾದವರು ಈ ಸಾಮುದ್ರಿಕ ಶಾಸ್ತ್ರದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದರೂ ಅವರ ಯಾವ ಗ್ರಂಥಗಳೂ ಇಂದು ಉಪಲಬ್ಧವಿಲ್ಲ. ವರಾಹಮಿಹಿರನ ಬೃಹತ್ಸಂಹಿತೆ, ಕೆಳದಿ ಬಸವರಾಜನು ಶಿವತತ್ತ್ವ ರತ್ನಾಕರ, ಚಾವುಂಡರಾಯನ ಲೋಕೋಪಕಾರದಲ್ಲಿ ಈ ಶಾಸ್ತ್ರ ಕುರಿತು ಉಲ್ಲೇಖಗಳಿರುವುದನ್ನು ಕಾಣುತ್ತೇವೆ. ಎಂ.ವಿ. ಸೀತಾರಾಮಯ್ಯನವರು ತಮ್ಮ 'ಶಾಸ್ತ್ರ ಸಾಹಿತ್ಯ' ಎಂಬ ಕೃತಿಯಲ್ಲಿ ಸಿದ್ಧಾಂತ ಶಿವಶಂಕರ ಶಾಸ್ತ್ರೀಯ 'ಸಾಮುದ್ರಿಕಶಾಸ್ತ್ರ', 'ಸಾಮುದ್ರಿಕ ಲಕ್ಷಣ' ಹಾಗೂ ರಾಮಸೂರಿಯ 'ಸಾಮುದ್ರಿಕ ಶಾಸ್ತ್ರಸಾರ ಸಂಗ್ರಹ' ಕೃತಿಗಳನ್ನು ಉಲ್ಲೇಖಿಸಿದ್ದಾರೆ.

**೨.೨.೧೯. ಸಮಾಧಿಕ್ರೀಯೆಶಾಸ್ತ್ರ**

ಪ್ರಾಚೀನ ನಾಗರಿಕತೆಯ ಕಾಲದಿಂದ ಮಾನವನು ತನ್ನ ಬದುಕಿನಲ್ಲಿ ಅನೇಕ ವಿವಿಧ ಪದ್ಧತಿ, ಸಂಪ್ರದಾಯ, ಆಚರಣೆಗಳನ್ನು ವಿಧಿವಿಧಾನಗಳನ್ನು ಅಳವಡಿಸಿಕೊಂಡು ಬಂದಿದ್ದಾನೆ. ಹೀಗೆ ಆಚರಿಸಿಕೊಂಡು ಬಂದಿದ್ದ ಸಂಪ್ರದಾಯಗಳನ್ನು ಶಾಸ್ತ್ರದ ಹಿನ್ನೆಲೆಯಲ್ಲಿ ದಾಖಲಿಸುತ್ತಾ ಬಂದಿದ್ದಾನೆ. ಮಾನವನ ಜೀವನದಲ್ಲಿ ಹುಟ್ಟು ಸಹಜವಾದರೆ ಸಾವು ಖಚಿತವಾಗಿರುತ್ತದೆ. ಈ ಹುಟ್ಟು ಮತ್ತು ಸಾವಿನ ನಡುವೆ ಅನೇಕ ವಿಭಿನ್ನ ಪದ್ಧತಿಯನ್ನು, ವಿಧಿವಿಧಾನಗಳನ್ನು ಅನುಸರಿಸುತ್ತಾನೆ. ಮನುಷ್ಯನಿಗೆ ಸಾವು ಸಂಭವಿಸಿದಾಗ ಆತನ ಶವವನ್ನು ವ್ಯವಸ್ಥಿತವಾಗಿ ಹೀಗೆ ಸಂಸ್ಕಾರ ಮಾಡಬೇಕೆಂಬ ವಿಧಾನವನ್ನು ಅನುಸರಿಸಿಕೊಂಡು ಬರಲಾಗಿದೆ. ಆದರೆ ಇಂದಿನ ದಿನಗಳಲ್ಲಿ ಬೆಳೆಯುತ್ತಿರುವ ಜನಸಂಖ್ಯೆಯಲ್ಲಿ ಹಾಗೂ ನಗರೀಕರಣದ ಕಾರಣದಿಂದ ಹಿಂದಿನ ವಿಧಾನಗಳು ಅನೇಕ ರೀತಿಯಿಂದ ಬದಲಾವಣೆಯಾಗಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಶವಾಗಾರದಲ್ಲಿ ಮೃತವ್ಯಕ್ತಿಯನ್ನು ಸಂಸ್ಕಾರ ಮಾಡುವ ಪದ್ಧತಿಯನ್ನು ಕಾಣುತ್ತೇವೆ.

"ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಶವವನ್ನು ಸುಡುವುದು ಮತ್ತು ಹೂಳುವುದು ಎಂಬ ಎರಡು ವಿಧಾನಗಳು ಪ್ರಚಲಿತದಲ್ಲಿವೆ. ಅದರಲ್ಲಿಯೂ ಹೂಳುವ ಪದ್ಧತಿಯು

ಅನಾದಿ ಕಾಲದಿಂದಲೂ ಪ್ರಚಲಿತವಾಗಿತ್ತು. ಆದರೆ ಮೃತವ್ಯಕ್ತಿಯ ಶವವನ್ನು ಸ್ಮಶಾನದವರೆಗೆ ಜನರೇ ಹೊತ್ತುಕೊಂಡು ಹೋಗುವುದು ಇಂದಿಗೂ ಸಹ ಚಾಲ್ತಿಯಲ್ಲಿದೆ. ಮೃತವ್ಯಕ್ತಿಯ ಶವವನ್ನು ಹೊತ್ತೊಯ್ಯುವ ಚಟ್ಟಕ್ಕೆ ವಿಮಾನ ಮಾಡ ಎಂದು ಕರೆಯುವ ಪದ್ಧತಿ ಬಹುಹಿಂದಿನಿಂದಲೂ ಇದೆ. ಶವದ ಮೇಲೆ ಹಣವನ್ನು ಎಸೆಯುತ್ತಿದ್ದುದರ ಬಗೆಗೆ ವಡ್ಡಾರಾಧನೆಯಲ್ಲಿ ಉಲ್ಲೇಖಗಳಿವೆ. ಶವವನ್ನು ಸಂಸ್ಕಾರ ಮಾಡಿ ಬಂದ ನಂತರ ಮಾಡುವ ಸೂತಕ ಸ್ನಾನಕ್ಕೆ ಅಲ್ಲಮಪ್ರಭುದೇವನು 'ನೀರಿಳಿ' ಎಂದಿದ್ದಾನೆ. ಈ ಸ್ನಾನವಾದ ಮೇಲೆ ಸತ್ತವರಿಗೆ ಅರ್ಪಿಸುವ ತರ್ಪಣಕ್ಕೆ ಪಂಪನು 'ನೀರ್ಗುಡುವುದು' ಎಂದು ಕರೆದಿರುವನು. ಶಿವಾಧೀನನಾದ ಲಿಂಗಾಯತನನ್ನು ಸಂಸ್ಕಾರ ಮಾಡಬೇಕಾದ ಕ್ರಮವನ್ನು ಚನ್ನಬಸವಣ್ಣ ತನ್ನ ವಚನದಲ್ಲಿ ಹೀಗೆ ಹೇಳುತ್ತಾನೆ.

ಅವಸಾನ ಕಾಲದಲ್ಲಿ ಮಹಾಗಣಂಗಳು ಲಿಂಗಮುದ್ರಾಭೂಮಿಯಲ್ಲಿ ಪಾದದಳತೆಯಲ್ಲದೆ
ನೋಟ ಮಾತ್ರ ಪ್ರಮಾಣಿಸಿ ಸಹಜ ಸಮಾಧಿಯ ಮಾಡಿ
ಲಿಂಗಾಕೃತಿ ಪ್ರಣವ ಸಂಬಂಧವಾದ ತಗಡಸಂಬಂಧವ ಮಾಡದೆ
ಪುಷ್ಪಾಂಜಲಿಯ ಮಾಡದೆ



ಆ ನಿಕ್ಷೇಪದ ಸ್ಥಾನದಲ್ಲಿ ಜಂಗಮದ ಪಾದವಿಟ್ಟು
ಆ ಮರಣ ಸನ್ನದ್ಧನ ನಿಕ್ಷೇಪವ ಮಾಡುವುದಯ್ಯಾ
ಈ ರೀತಿಯಿಂದಾಚರಿಸಿದೊಡೆ ಮರಳಿ ಗುರುಕರಜಾತನಾಗಿ
ಸದ್ಭಕ್ತಿ ಜ್ಞಾನಾಚಾರ ಕ್ರೀಯಲ್ಲಿ ನಡೆನುಡಿಸಂಪನ್ನನಾಗಿ
ಷಟ್ಸ್ಥಲದ ಬ್ರಹ್ಮವ ಕೂಡಿ ಘನಸಾರದಂತೆ ಸರ್ವಾಂಗವೆಲ್ಲ
ಜ್ಯೋತಿರ್ಮಯ ಲಿಂಗದಲ್ಲಿ ನಿರವಯವಪ್ಪುದು ನೋಡಾ"[೫೯]

ಶವಸಂಸ್ಕಾರ ಮಾಡುವ ನಿಯಮಗಳನ್ನು ನಮ್ಮ ಜನಪದರು ಮೌಖಿಕ ಮತ್ತು ಲಿಖಿತ ರೂಪದಲ್ಲಿ ಉಲ್ಲೇಖಿಸಿದ್ದಾರೆ. ಅಲ್ಲದೆ ಶವಸಂಸ್ಕಾರದ ಪದ್ಧತಿಗೆ ಶಾಸ್ತ್ರದ ಚೌಕಟ್ಟನ್ನು ನೀಡಿದ್ದಾರೆ. ಈ ಶಾಸ್ತ್ರವನ್ನು ಸಮಾಧಿ ಕ್ರಿಯಾಶಾಸ್ತ್ರ ಎಂದು ಕರೆಯುತ್ತೇವೆ.

ವ್ಯಕ್ತಿ ಮರಣ ಹೊಂದಿದಾಗ, ಆತನನ್ನು ಸಮಾಧಿಗೊಳಿಸುವ ಸಂದರ್ಭದಲ್ಲಿ ಕೈಕೊಳ್ಳಬಹುದಾದ ವಿಧಿ ವಿಧಾನಗಳನ್ನು ವಿದ್ವಾಂಸರು ಈ ರೀತಿ ಗುರುತಿಸಿದ್ದಾರೆ.

೧. ಮನೆ ಗೋಸಾಲಿ ಕೆರೆಯ ದಂಡೆ ಹೊಳೆ ತೋಯ ಅಡವಿ ಬೆಟ್ಟ ತಪ್ಪಲು ಹೀಗೆ ವಿವಿಧೆಡೆ ಐಕ್ಯನಾದ ವ್ಯಕ್ತಿಯನ್ನು ಸಮಾಧಿಗೊಳಿಸಬೇಕು. ೨. ಸತ್ತ ವ್ಯಕ್ತಿಯ

ಅಳತೆಗೆ ಅನುಗುಣವಾಗಿ ಸಮಾಧಿಯನ್ನು ಎಂಟು ದಿಕ್ಕಿಗೆ ಸಮಪ್ರಮಾಣದಲ್ಲಿ ತೋಡಬೇಕು. ತೋಡಿದ ಆ ಸಮಾಧಿ ಬೆಲ್ಲದ ಅಚ್ಚಿನಂತೆ ಇರಬೇಕು. ೩. ಸಮಾಧಿಯ ಒಳ ಉದ್ದವು ಆಳೆತ್ತರದ ಪ್ರಮಾಣದಲ್ಲಿರಬೇಕು. ೪. ಸತ್ತ ವ್ಯಕ್ತಿ ಪದ್ಮಾಸನರೂಪದಲ್ಲಿ ಕೂಡ್ರುವ ಹಾಗೆ ಸಮಾಧಿಯ ಒಳಗಡೆ ಗೂಡನ್ನು ರಚಿಸಿರಬೇಕು. ೫. ಸಂಸ್ಕಾರದ ಮುನ್ನ ವ್ಯಕ್ತಿ ಮೈ ಕೈಗೆ ವಿಭೂತಿಯನ್ನು ಲೇಪಿಸಿ ಓಂನಮಃಶಿವಾಯ ಷಡಕ್ಷರವನ್ನು ಬರೆದಿರಬೇಕು. ೬. ಪಂಚಮುದ್ರೆಯ ತಗಡಿನಲ್ಲಿ ಪಂಚಾಕ್ಷರ(ನಮಃಶಿವಾಯ)ವ ಬರೆದು ಪಂಚಲೋಹ ಪಂಚರತ್ನ ಸುವರ್ಣಮಯದ ಚೂರುಗಳನ್ನು ಹರಡಬೇಕು. ೭. ನಾಲ್ಕು ಮೂಲೆಗೆ ನಾಲ್ಕು ಲಿಂಗವನ್ನು ಪ್ರತಿಷ್ಠಾಪಿಸಬೇಕು. ೮. ಹೀಗೆ ಸಿದ್ಧಗೊಳಿಸಿದ ಸಮಾಧಿಯೊಳಗೆ ವ್ಯಕ್ತಿಯನ್ನು ಕೂಡ್ರಿಸಿದ ಮೇಲೆ ಮಣ್ಣನ್ನು ಹಾಕಬೇಕು. ೯. ಸಮಾಧಿಯ ಮೇಲೆ ಹೂ ಹಣ್ಣು ಕಾಯಿ ಇಟ್ಟು ಶೃಂಗಾರಗೊಳಿಸಬೇಕು. ೧೦. ಹೀಗಾದಾಗ ಮಾತ್ರ ಸಮಾಧಿಕ್ರಿಯಾ ವಿಧಾನ ಕ್ರಮಬದ್ಧವಾಗಿರುತ್ತದೆ ಎಂಬುದು ಕವಿಯ ಆಶಯವಾಗಿದೆ. ಸಾಮಾನ್ಯವಾಗಿ ಇಲ್ಲಿ ಸೂಚಿಸಿದ ಎಲ್ಲ ಕೃತಿಗಳನ್ನು ಅವಲೋಕಿಸಿದಾಗ ಶರಣಪರಂಪರೆಯಲ್ಲಿ ಸಮಾಧಿಕ್ರಿಯೆಯ ವಿಧಾನಗಳನ್ನು ಇಲ್ಲಿ ಸೂಚಿಸಿದ್ದು ಕಂಡುಬರುತ್ತದೆ. ಹೀಗಿದ್ದೂ ಇಂದು ಬಹುತೇಕ ಸಮುದಾಯಗಳಲ್ಲಿ ಇದೇ ಮಾದರಿಯಲ್ಲಿ ಶವಸಂಸ್ಕಾರಗೊಳಿಸಲಾಗುತ್ತಿದೆ."[೬೦]

ಇಂದಿನ ಬಹುತೇಕ ಸಮುದಾಯಗಳಲ್ಲಿ ಇದೇ ಮಾದರಿಯಲ್ಲಿ ಶವಸಂಸ್ಕಾರ ವಿಧಾನವನ್ನು ಅನುಸರಿಸುತ್ತಿರುವುದನ್ನು ಕಾಣಬಹುದು.

ಮರೆತು ಹೋದ ಮಸಾಮ್ರಾಜ್ಯ ವಿಜಯನಗರ ಎಂಬ ಕೃತಿಯಲ್ಲಿ ಪಾಶ್ಚಿಮಾತ್ಯ ವಿದ್ವಾಂಸರಾದ ರಾಬರ್ಟ್ ಸಿವೆಲ್ ಅವರು ಮೇಲ್ವರ್ಗದ ಸಮುದಾಯದಲ್ಲಿ ಒಂದಾದ ಬ್ರಾಹ್ಮಣ ಸಮುದಾಯ ವ್ಯಕ್ತಿ ಮೃತನಾದ ನಂತರ ಆಚರಿಸುವ ಸಂಸ್ಕಾರದ ವಿಧಿವಿಧಾನಗಳನ್ನು ಉಲ್ಲೇಖಿಸಿದ್ದಾರೆ. ಬ್ರಾಹ್ಮಣರಲ್ಲಿ ಶವವನ್ನು ಚಿತೆಗೆ ಹಾಕಿ ಸಂಸ್ಕಾರ ಮಾಡುವುದು. ಉತ್ತರಾಧಿಕಾರಿಯ ಆಚರಣೆ, ತಿಥಿ ಊಟ ಹಾಕುವ ಪದ್ಧತಿ ಹೀಗೆ ಅನೇಕ ವಿಷಯಗಳನ್ನು ಸಿವೆಲ್ ಪ್ರಸ್ತಾಪಿಸಿದ್ದಾರೆ.

ಕರ್ನಲ್ ಮೆಕೆಂಜಿ ಅವರು ಕೊರವರ, ಗಂಗಡಿಕಾರ ಒಕ್ಕಲಿಗರು ಮುಂತಾದ ಸಮುದಾಯದವರು ಸತ್ತಾಗ ಸಂಸ್ಕಾರ ಮಾಡುವ ವಿಧಾನವನ್ನು ತನ್ನ ಕೈಫಿಯತ್ತುಗಳಲ್ಲಿ ದಾಖಲಿಸಿದ್ದಾನೆ. ಕೊರಮರ ಸಮುದಾಯದಲ್ಲಿ "ಸತ್ತವಂಗ ಮದುವೆ ಆದವರಿಗೆ ಸುಡುತ್ತಾರೆ. ಮದುವೆಯಿಲ್ಲದವರಿಗೆ ಹುಗಿಯುತ್ತಾರೆ. ಯಿದಕ್ಕೆ ಸೂತಕ ಹನ್ನೊಂದು ದಿವಸ ತನಕಯಿದ್ದು ಆಮೇಲೆ ದಾಸರ ಕರದು ಕುಲದವರು ಊಟ ಮಾಡಿ ಶುದ್ಧವಾಗಬೇಕು. ಹಾಗೆಯೇ

ವುಂಡಿ ಗಂಗಡಿಕಾರ ಒಕ್ಕಲಿಗರಲ್ಲಿ "ಸತ್ತರೆ ಹುಗಿಯುವುದು, ಸುಡುವುದು ಉಂಟು. ಸೂತಕ ೧೧ ದಿನವಿದ್ದು ವೈಷ್ಣವಯ್ಯನ ಕರದು ಆತನಿಂದ ತೀರ್ಥಪ್ರಸಾದ ತಕ್ಕೊಂಡು, ಅದರಿಂದಾ ಶುದ್ಧವಾಗಿ, ಕಾಣಿಕೆ, ಅಕ್ಕಿ, ಪಡಿಸಾಹಿತ್ಯ ಕೊಟ್ಟು ಆಮೇಲೆ ಕುಲದವರು ಯಲ್ಲಾ ಕೂಡಿ ಊಟಾ ಮಾಡಬೇಕು."[೧] ಎಂಬಂಥ ಅನೇಕ ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಗತಿಗಳನ್ನು ಮೆಕೆಂಜಿ ಅವರು ತಿಳಿಸಿದ್ದಾರೆ.

**೨.೨.೨೦. ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ**

ಕನ್ನಡದಲ್ಲಿ ಕೃಷಿಶಾಸ್ತ್ರಕ್ಕೆ ಸಂಬಂಧಿಸಿದಂತೆ ರಚನೆಯಾಗಿರುವ ಶಾಸ್ತ್ರಕೃತಿಗಳೆಂದರೆ ಚಾವುಂಡರಾಯನ ಲೋಕೋಪಕಾರ, ಶಿವತತ್ತ್ವ ರತ್ನಾಕರ, ರಟ್ಟಮತ, ಕೃಷಿಜ್ಞಾನ ಪ್ರದೀಪಿಕೆ ಇವುಗಳ ಜೊತೆಗೆ ಪ್ರಾಸಂಗಿಕವಾಗಿ ಕನ್ನಡದ ಪ್ರಾಚೀನ ಕಾವ್ಯ ಪುರಾಣಗಳು, ವಚನ ಸಾಹಿತ್ಯ ಮತ್ತು ಶಾಸನಗಳಲ್ಲಿ ಮತ್ತು ಕೈಫಿಯತ್ತುಗಳಲ್ಲಿ ಕೃಷಿ ಶಾಸ್ತ್ರದ ಬಗ್ಗೆ ಉಲ್ಲೇಖ ವಾಗಿರುವುದನ್ನು ಕಾಣುತ್ತೇವೆ.

೧. ಲೋಕೋಪಕಾರ: ಚಾವುಂಡರಾಯನ ಈ ಕೃತಿಯಲ್ಲಿ ಮಾನವನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಬೇಕಾದ ಲೌಕಿಕ ಜ್ಞಾನವನ್ನು ತಿಳಿಸುತ್ತದೆ. ಲೋಕೋಪಕಾರದ ಪೀಠಿಕಾ ಪ್ರಕರಣದ ೨೩ನೇ ಕಂದ ಪದ್ಯದಲ್ಲಿ ಕವಿಯು ಹೀಗೆ ಹೇಳುತ್ತಾನೆ.

"ಮೇದಿನಿಯುಪಕಾರ ಕಲಿ
ವೋದುಗಳೆನಿತೊಳುವವಿಲ್ಲಿ ನೆಲಸಿರ್ದು ಬುಧೋ
ಪಾದೇ ಯಮಾದ ದೂಸಜೆ
ನಾದುದೂ ಲೋಕೋಪಕಾರಮೇಕನ್ವರ್ಥಂ"[೨]

ಲೋಕೋಪಕಾರ ಕೃತಿಯನ್ನು ಪ್ರತಿ ಮಾಡಿದ ಅಪ್ಪಯ್ಯನೆಂಬ ಲಿಪಿಕಾರನು ಇದು ಜನೋಪಕಾರದ ಪುಸ್ತಕವೆಂದು ಕರೆದಿದ್ದಾನೆ. ೧೨ ಅಧಿಕಾರಗಳಿಂದ ರಚನೆಗೊಂಡ ಈ ಕೃತಿಯ ಕಂದಪದ್ಯಗಳ ಜೊತೆಗೆ ೯೪೦ ವೃತ್ತಗಳನ್ನು ಒಳಗೊಂಡಿದೆ. ಕೃಷಿ ವಿಷಯಕ್ಕೆ ಸಂಬಂಧಿಸಿದಂತೆ ಚಾವುಂಡರಾಯನು ೫ ಮತ್ತು ೬ನೇ ಅಧಿಕಾರಗಳಲ್ಲಿ ಚರ್ಚಿಸಿದ್ದಾನೆ.

೨. ರಟ್ಟಮತಶಾಸ್ತ್ರ: ಕನ್ನಡದಲ್ಲಿ ಕೃಷಿಶಾಸ್ತ್ರದ ಕುರಿತು ಉಲ್ಲೇಖವನ್ನು ಹೊಂದಿರುವ ಮತ್ತೊಂದು ಪ್ರಮುಖ ಕೃತಿ 'ರಟ್ಟಮತಶಾಸ್ತ್ರ' ಇದನ್ನು ಕ್ರಿ.ಶ. ೧೩೦೦ರಲ್ಲಿ ಬದುಕಿದ್ದ ರಟ್ಟ ವಿಡಂಗ ಎಂಬ ಕವಿಯು ಬರೆದಿದ್ದಾನೆ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಇದು ಕೃಷಿಶಾಸ್ತ್ರದ ಬಗ್ಗೆ ಅನೇಕ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ.

೩. ಶಿವತತ್ತ್ವ ರತ್ನಾಕರ: ಕೆಳದಿ ಬಸವರಾಜ ವಿರಚಿತ ಶಿವತತ್ತ್ವ ರತ್ನಾಕರವೆಂಬ ಕೃತಿಯಲ್ಲಿ ಅನೇಕ ವಿಷಯಗಳನ್ನು ಶಾಸ್ತ್ರೀಯವಾಗಿ ನಿರೂಪಿಸಲಾಗಿದೆ. ಇದರ ೨ನೇ ತರಂಗದಲ್ಲಿ ಬರುವ ೧೦೦ ಶ್ಲೋಕಗಳು ಕೃಷಿಶಾಸ್ತ್ರಕ್ಕೆ ಮೀಸಲಾಗಿವೆ. ವಿಶೇಷವಾಗಿ ಮಳೆ ಬರುವ ಕಾಲ, ಅದರ ಪ್ರಮಾಣ ಹಾಗೂ ಸ್ವರೂಪಗಳ ಹಿನ್ನೆಲೆಯಲ್ಲಿ ಬೆಳೆಯ ಸ್ಥಿತಿಗಳನ್ನು ತಿಳಿಸುತ್ತದೆ. ಉದಾಹರಣೆಗೆ ಕಾರ್ತಿಕ, ಮಾರ್ಗಶಿರ ಮಾಸಗಳಲ್ಲಿ ಸಂಕ್ರಮಣ ಕಾಲದಲ್ಲಿ ಮಳೆ ಬಂದರೆ ಮಧ್ಯಮ ಫಲದ ಸಸ್ಯಗಳು ಹುಟ್ಟುತ್ತವೆ. ಪುಷ್ಯಮಾಸದ ಮಳೆ ಸುಭಿಕ್ಷೆಯ ಸಂಕೇತ. ಹೀಗೆ ವರ್ಷ ಋತುವಿನ ಜಾತಕವನ್ನು ನಿರೂಪಿಸುತ್ತದೆ."[೬೩]

೪. ಕೃಷಿಜ್ಞಾನ ಪ್ರದೀಪಿಕೆ: ಕೃಷಿಜ್ಞಾನ ಪ್ರದೀಪಿಕೆ ಕೃತಿಯನ್ನು ನಾಗಭೂಷಣ ಶಿವಯೋಗಿಗಳು ೧೮೭೮ರಲ್ಲಿ ರಚಿಸಿದ್ದಾರೆ. ಇದರಲ್ಲಿ ಒಟ್ಟು ೨೩ ಪ್ರಕರಣಗಳಿದ್ದು ೧ರಿಂದ ೧೮ ಪ್ರಕರಣಗಳು ಪೂರ್ವಭಾಗವಾಗಿದ್ದು ಇದು ಲೌಕಿಕ ಕೃಷಿಜ್ಞಾನವನ್ನು ಬೋಧಿಸುತ್ತದೆ. ೧೯ರಿಂದ ೨೩ ಪ್ರಕರಣಗಳು ಉತ್ತರ ಭಾಗವಾಗಿದ್ದು, ಇದರಲ್ಲಿ ಪಾರಮಾರ್ಥಿಕ ಕೃಷಿಜ್ಞಾನ ವಿಷಯವನ್ನು ಬೋಧಿಸುತ್ತದೆ.

ಕೃಷಿಜ್ಞಾನ ಪ್ರದೀಪಿಕೆ ಕೃತಿಯು ಪ್ರಮುಖವಾಗಿ ಎರಡು ರೀತಿಯ ವ್ಯವಸಾಯ ಪದ್ಧತಿಯನ್ನು ಪರಿಚಯಿಸುತ್ತದೆ. ಇಲ್ಲಿ ಎತ್ತು ಪ್ರಮುಖವಾದ ಪಾತ್ರ ವಹಿಸುತ್ತದೆ. ಆದ್ದರಿಂದ ಇಲ್ಲಿ ಎತ್ತಿನ ಬಳಕೆ, ಆರೈಕೆ, ಪೋಷಣೆ, ಆಹಾರಕ್ರಮಗಳು, ಎತ್ತಿನ ಕೊಟ್ಟಿಗೆಯ ಸ್ವಚ್ಛತೆ ಬಗ್ಗೆ ಸಂಪೂರ್ಣವಾದ ಮಾಹಿತಿಯನ್ನು ನೀಡುತ್ತದೆ.

ಭೂಮಿಯ ಸಂಸ್ಕರಣ ಕುರಿತಂತೆ ನಟ್ಟು ಕಡಿಯುವ ಪದ್ಧತಿಯನ್ನು ಹೀಗೆ ವಿವರಿಸುತ್ತಾನೆ. "ಬನ್ನಿಕಂಟಿ, ಎಕ್ಕಿಯ ಗಿಡ, ಕಲ್ಲು ಕುಟರಿ, ಕರಿಕೆ ಇರದಂತೆ ೮–೧೨ ಎತ್ತುಗಳ ದೊಡ್ಡ ನೇಗಿಲು ಹೊಡೆಯಬೇಕು. ಸ್ಥಿತಿವಂತರು ಶಿವರಾತ್ರಿಗೆ ಆರಂಭಿಸಿ ಎರಡು ತಿಂಗಳು ನೂರಿನ್ನೂರು ಆಳುಗಳನ್ನು ಹಚ್ಚಿ ಹೊಲದ ೪ ಮೂಲೆ ಸಹಿತ ನಟ್ಟು ಕಡಿಸಿದರೆ ಹೊಲ ಬಿಸಲನ್ನುಂಡು ಹದವಾಗುತ್ತದೆ. ನಟ್ಟು ಕಡಿಸಿದ ಭೂಮಿ ಎರೆನೆಲವಾಗಿದ್ದರೆ ಅದೇ ವರ್ಷ ಕಡಲೆ ಬಿತ್ತಬೇಕು. ಮಸೂರಿಯಾಗಿದ್ದರೆ ಎಳ್ಳು ಬಿತ್ತಬೇಕು. ಮಡಿ ಕಟ್ಟಾಗಿದ್ದರೆ ಬಿಳಿಜೋಳ, ಗೋಧಿ, ಕಡಲೆ ಬಿತ್ತಬೇಕು." ಒಟ್ಟಿನಲ್ಲಿ ಆಯಾಯ ಋತುವಿಗೆ ತಕ್ಕಂತೆ ಯಾವ ಬೆಳೆಗಳನ್ನು ಬೆಳೆಯಬೇಕು ಎಂಬ ಮಾಹಿತಿಯನ್ನು ಈ ಹೊತ್ತಿಗೆಯಲ್ಲಿ ಕಾಣಬಹುದು."[೬೪]

ಅದೇ ರೀತಿಯಾಗಿ ಲೌಕಿಕ ಶಾಸ್ತ್ರಗಳ ಜೊತೆಗೆ ಛಂದಸ್ಸು, ನಿಘಂಟು, ವ್ಯಾಕರಣ ಮುಂತಾದ ಶಾಸ್ತ್ರಸಂಬಂಧಿ ಕೃತಿಗಳು ಕನ್ನಡದಲ್ಲಿ ಬೆಳಕು ಕಂಡಿವೆ.

ಸಂಸ್ಕೃತ ಭಾಷೆಯನ್ನು ಅನುಸರಿಸಿಯೇ ಕನ್ನಡದಲ್ಲಿ ಛಂದಶ್ಶಾಸ್ತ್ರ ಜನನವಾಗಿದೆ. ಛಂದಸ್ಸು ಕಾವ್ಯದ ಗುಣಲಕ್ಷಣಗಳನ್ನು ತಿಳಿಸುವಂತದ್ದು. ಕಾವ್ಯವೆಂಬುದು ಛಂದಸ್ಸೆಂಬ ದೋಣಿಯಲ್ಲಿ ಪ್ರಯಾಣಿಸುವ ಪ್ರಯಾಣಿಕ ಎಂಬ ಸೂಕ್ತಿ ಸಂಸ್ಕೃತದಲ್ಲಿದೆ. ಏಕೆಂದರೆ ಛಂದಸ್ಸಿಲ್ಲದೆ ಕಾವ್ಯವಿಲ್ಲ. ಕನ್ನಡದ ಲಾಕ್ಷಣಿಕ ಗ್ರಂಥ ಕವಿರಾಜಮಾರ್ಗದಲ್ಲಿ ಛಂದಸ್ಸಿನ ಕುರಿತಾಗಿ ಪ್ರಾಸಂಗಿಕ ವಿಚಾರ ಬಂದಿದೆ. ಶಾಸ್ತ್ರಸಾಹಿತ್ಯದಲ್ಲಿ ಛಂದಸ್ಸನ್ನು ಕುರಿತಾದ ಕೃತಿಗಳು ಬಂದಿವೆ.

ನಾಗಮರ್ವನ ಛಂದೋಂಬುಧಿ ಛಂದಸ್ಸನ್ನು ಕುರಿತಾಗಿ ವಿವರವಾಗಿ ವಿಷಯ ಮಂಡನೆ ಮಾಡಿರುವ ಪ್ರಮುಖ ಕೃತಿ. ಇವನ ಕಾಲ ಕ್ರಿಶ ೯೯೦ ಎಂದು ಕವಿಚರಿತೆಕಾರರು ಅಭಿಪ್ರಾಯಪಡುತ್ತಾರೆ.

ಜೈನ ಕವಿ ಗುಣಚಂದ್ರನು ಛಂದಸ್ಸಾರ ಎಂಬ ಕಿರು ಗ್ರಂಥವನ್ನು ಬರೆದಿದ್ದಾನೆ. ಕನ್ನಡ ಮತ್ತು ಸಂಸ್ಕೃತ ಛಂದಸ್ಸುಗಳ ಮುಖ್ಯ ವಿಚಾರಗಳ ಸಾರವನ್ನು ಈ ಕೃತಿ ಒಳಗೊಂಡಿದೆ. ಇದರಾಚೆಗೆ ಇವನ ಚರಿತ್ರೆಯ ಕುರಿತಾಗಿ ಯಾವ ವಿಚಾರಗಳೂ ತಿಳಿಯುತ್ತಿಲ್ಲ. ಛಂದಸ್ಸಾರದಲ್ಲಿ ಐದು ಅಧ್ಯಾಯಗಳಿವೆ. ಮೊದಲನೆಯದು ಸಂಜ್ಞಾ ಪ್ರಕರಣ. ಇದರಲ್ಲಿ ಗುರು ಲಘು, ಅಕ್ಷರ ಗಣ, ಯತಿ ಮುಂತಾದ ವಿವರಗಳಿವೆ. ಎರಡನೇ ಅಧ್ಯಾಯದಲ್ಲಿ ಮಾತ್ರಾವೃತ್ತ ಪ್ರಕರಣವಿದ್ದು ಕಂದ ಶರ ಭೋಗ ಭಾಮಿನಿ ಪರಿವರ್ಧಿನಿ, ವಾರ್ಧಕಗಳ ಗುಣ ಲಕ್ಷಣಗಳನ್ನು ಹೇಳಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಸಮವೃತ್ತ ಎಂಬ ಪ್ರಕರಣದಲ್ಲಿ ಹುಟ್ಟಿನಿಂದ ಪ್ರಾರಂಭಗೊಂಡು ವಿವಿಧ ವೃತ್ತಗಳ ಕುರಿತಾದ ವಿವರಣೆಗಳಿವೆ.

ಧಾರವಾಡದಲ್ಲಿ ಶಿಕ್ಷಕರಾಗಿದ್ದ ಧೊಂಡೋ ನರಸಿಂಹ ಮುಳಬಾಗಿಲ ಅವರು ಛಂದಸ್ಸಾರ ಹೆಸರಿನ ಗ್ರಂಥವನ್ನು ೧೮೭೦ರಲ್ಲಿ ಬರೆದು ಪ್ರಕಟಿಸಿದರು. ೧೮೭೫ರಲ್ಲಿ ಛಂದೋಮಾಲಿಕೆ ಹೆಸರಿಸ ಛಂದಸ್ಸಿನ ಕುರಿತಾದ ಗ್ರಂಥವನ್ನು ಶ್ರೀನಿವಾಸ ರಾಘವಾಚಾರ್ಯರು(ಕಾರವಾರ) ಬರೆದು ಪ್ರಕಟಿಸಿದ್ದಾರೆ. ಹೀಗೆ ನಾಗವರ್ಮನಿಂದ ಹಿಡಿದು ಇಲ್ಲಿಯವರೆಗೂ ನಾನಾ ಲೇಖಕರು ಛಂದಶ್ಶಾಸ್ತ್ರದ ಕೃತಿಗಳನ್ನು ರಚಿಸಿದ್ದಾರೆ.

ಕ್ರಿ.ಶ. ೧೦೪೨ರ ಸುಮಾರಿಗೆ ಎರಡನೆಯ ನಾಗವರ್ಮನು ಶಬ್ದಸ್ಮೃತಿ ಹಾಗೂ ಭಾಷಾಭೂಷಣ ಕೃತಿಗಳನ್ನು ಬರೆದಿದ್ದಾನೆ.

ಶಬ್ದಸ್ಮೃತಿಯಲ್ಲಿ ಐದು ಪ್ರಕರಣಗಳಿವೆ. ಸಂಧಿ, ನಾಮ, ಸಮಾಸ, ತದ್ಧಿತ, ಅಖ್ಯಾತ ಈ ಪ್ರಕರಣಗಳ ಕುರಿತು ವಿವರಗಳಿವೆ. ಭಾಷಾಭೂಷಣವು ಸಂಸ್ಕೃತದಲ್ಲಿ ಪ್ರಕಟವಾಗಿರುವುದರಿಂದ ಅದನ್ನು ಇಲ್ಲಿ ತಿಳಿಸುವ ಅವಶ್ಯಕತೆಯಿಲ್ಲವೆಂದು ಇಲ್ಲಿ ವಿವರಿಸಿಲ್ಲ.

ಕನ್ನಡದಲ್ಲಿ ವ್ಯಾಕರಣ, ನಿಘಂಟು, ಜ್ಞಾನಕೋಶಗಳು ಹಲವಾರು ಪ್ರಕಟಗೊಂಡಿವೆ. ರಾಬರ್ಟ್ ಕಾಲ್ಡ್‌ವೆಲ್‌ರು ದ್ರಾವಿಡ ಭಾಷೆಗಳ ತೌಲನಿಕ ಅಧ್ಯಯನ ಎಂಬ ಕೃತಿಯನ್ನು ರಚಿಸಿದರು. ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ದ್ರಾವಿಡ ಭಾಷೆಗಳ ಕುರಿತಾಗಿ ಬಂದ ಮೊದಲ ಕೃತಿ ಇದೆನ್ನಬಹುದು. ಕವಿರಾಜಮಾರ್ಗದಲ್ಲಿ ವ್ಯಾಕರಣದ ಕುರಿತಾಗಿ ಉಲ್ಲೇಖಗಳು ದೊರೆಯುತ್ತವೆ. ಅದಾದ ನಂತರ ಕ್ರಿಶ ೧೨೫೦-೬೦ರ ಕಾಲದಲ್ಲಿದ್ದ ಕೇಶಿರಾಜನು ಶಬ್ದಮಣಿ ದರ್ಪಣ ಎಂಬ ಕೃತಿಯನ್ನು ರಚಿಸಿದ್ದಾನೆ. ಇವನು ಸುಮನೋಬಾಣನ ಮೊಮ್ಮಗ ಕವಿ ಮಲ್ಲಿಕಾರ್ಜುನನ ಮಗ. ಸಾಹಿತ್ಯ ವಾತಾವರಣದಲ್ಲಿಯೇ ಹುಟ್ಟಿಬೆಳೆದ ಕೇಶಿರಾಜನು ಶಬ್ದಮಣಿ ದರ್ಪಣ ಎಂಬ ವ್ಯಾಕರಣಶಾಸ್ತ್ರ ಕೃತಿಯನ್ನು ಕನ್ನಡಕ್ಕೆ ಕೊಟ್ಟಿದ್ದಾನೆ. ಇದರಲ್ಲಿ ಶಬ್ದೋತ್ಪತ್ತಿ, ನಾಮ, ಲಿಂಗ, ರಳಕುಳಕ್ಷಳ ವಿಚಾರ, ನಾಮಗಳು, ವಿಭಕ್ತಿ ವಚನ ಮುಂತಾದ ಪ್ರಕರಣಗಳ ಕುರಿತು ವಿವರಿಸಿದ್ದಾನೆ.

ಚತುರಾಸ್ಯ ಬೊಮ್ಮಕವಿ ಎಂಬುವವನು ಕ್ರಿಶ ೧೪೫೦ ಸುಮಾರಿನಲ್ಲಿದ್ದವನು. ಇವನು ಚತುರಾಸ್ಯ ನಿಘಂಟು ಎಂಬ ಕೃತಿ ರಚಿಸಿದ್ದಾನೆ.

ಕ್ರಿಶ ೧೫೩೦ರಲ್ಲಿದ್ದ ಲಿಂಗಮಂತ್ರಿ ಎಂಬುವವನು ಕಬ್ಬಿಗರ ಕೈಪಿಡಿ ಎಂಬ ಕೃತಿ ರಚಿಸಿದ್ದಾನೆ. ಇದು ವಾರ್ಧಕ ಷಟ್ಪದಿ ಪ್ರಕಾರವನ್ನು ಹೊಂದಿದ ಹಳೆಗನ್ನಡ ಪದಗಳಿಗೆ ಅರ್ಥವನ್ನು ತಿಳಿಸುವ ಕೃತಿಯಾಗಿದೆ. ಕ್ರಿ.ಶ. ೧೫೬೦ರ ಸುಮಾರಿನಲ್ಲಿದ್ದ ವಿರಕ್ತ ತೋಂಟದಾರ್ಯ ಎಂಬ ಕವಿಯು ಕರ್ನಾಟಕ ಶಬ್ದಕೋಶವನ್ನು ರಚಿಸಿದ್ದಾನೆ.

ಕ್ರಿಶ ೧೮೩೨-೧೯೦೩ರಲ್ಲಿದ್ದ ರೆವೆರೆಂಡ್ ಎಫ್ ಕಿಟೆಲ್ಲರು ಕನ್ನಡ ಇಂಗ್ಲಿಷ್ ಶಬ್ದಕೋಶವನ್ನು ರಚಿಸಿದರು. ಇದರಿಂದ ಅವರ ಕೀರ್ತಿ ಶಾಶ್ವತವಾಗಿ ಉಳಿಯುವಂತಾಯಿತು.

ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯು ಕನ್ನಡದ ಆಧ್ಯಾತ್ಮಿಕ ವಿಚಾರಗಳನ್ನು ತಿಳಿಸುವ ಕೃತಿ. ನಿಜಗುಣರು ಕೊಳ್ಳೆಗಾಲದ ಆಸುಪಾಸಿನಲ್ಲಿ ಪಾಳೆಯಗಾರರಾಗಿದ್ದ ವಿಚಾರ ತಿಳಿಯುತ್ತದೆ. ಇವರು ಕ್ರಿ.ಶ. ೧೪೫೦ರ ಸುಮಾರಿನಲ್ಲಿದ್ದರು ಎಂದು ಚರಿತ್ರೆಕಾರರು ಅಭಿಪ್ರಾಯಪಡುತ್ತಾರೆ.

### ಕೊನೆಯ ಟಿಪ್ಪಣಿ

೧. ಕಲ್ಲಯ್ಯ ಹಿರೇಮಠ, 'ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ,(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ೨೦೦೯, ಪು. ೧೨.

೨. ಸೀತಾರಾಮಯ್ಯ ಎಂ.ವಿ., ಶಾಸ್ತ್ರಸಾಹಿತ್ಯ, ಸಂಪುಟ–೩, ೨೦೧೨, ಪು. ೭.

೩. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೬, ಪು. ೧೩.

೪. ಕಲ್ಲಯ್ಯ ಹಿರೇಮಠ, 'ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ,(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ೨೦೦೯, ಪು. ೧೪.

೫. ಅದೇ, ಪು. ೧೮.

೬ ಶೇಷಾಯ್ಯಂಗಾರ್(ಸಂ), ರತ್ನಾಕರಾಧೀಶ್ವರ ಶತಕ, ೧೯೮೭, ಪು. ೧೫.

೭ ಮುಗಳಿ ರಂ ಶ್ರೀ, ಕನ್ನಡ ಸಾಹಿತ್ಯ ಚರಿತ್ರೆ, ೧೯೭೫, ಪು. ೬೫.

೮. ಕಲ್ಲಯ್ಯ ಹಿರೇಮಠ, 'ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ,(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ೨೦೦೯, ಪು. ೨೧.

೯. ಅದೇ, ಪು. ೨೨.

೧೦. ಅದೇ, ಪು. ೨೩.

೧೧. ನಿಜಗುಣ ಶಿವಯೋಗಿ, ವಿವೇಕ ಚಿಂತಾಮಣಿ, ೧೯೮೯, ಪು. ೨೩.

೧೨. ಕಲ್ಲಯ್ಯ ಹಿರೇಮಠ, ೨೦೦೯, ೫೪.

೧೩. ಶ್ರೀಕಂಠಶಾಸ್ತ್ರಿ ಎಸ್.(ಸಂ), ಭಾರತೀಯ ಸಂಸ್ಕೃತಿ, ೧೯೫೪, ಪು. ೨೪.

೧೪. ಶೇಷಾಯ್ಯಂಗಾರ್(ಸಂ), ರಟ್ಟಮತಂ, ೧೯೫೦, ಪು. ೧.

೧೫. ಕಲ್ಲಯ್ಯ ಹಿರೇಮಠ, 'ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ೨೦೦೯, ಪು. ೨೬

೧೬. ಸೀತಾರಾಮಯ್ಯ ಎಂ.ವಿ., ಶಾಸ್ತ್ರಸಾಹಿತ್ಯ, ೨೦೧೨, ಪು. ೨೦೭

೧೭. ನರಸಿಂಹಾಚಾರ್ ಡಿ. ನರಸಿಂಹಾಚಾರ್ ಡಿ.ಎಲ್.(ಸಂ), ಸಕಲ ವೈದ್ಯ ಸಂಹಿತಾ ಸಾರಾರ್ಣವ, ಸಂಪುಟ–೧, ಕನ್ನಡ ಸಂಸ್ಕೃತಿ ಇಲಾಖೆ, ೧೯೬೫, ಪು. ೮.

೧೮. ಕಲ್ಲಯ್ಯ ಹಿರೇಮಠ, 'ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ೨೦೦೯, ಪು. ೩೦.

೧೯. ಸೀತಾರಾಮಯ್ಯ ಎಂ.ವಿ., ಶಾಸ್ತ್ರಸಾಹಿತ್ಯ, ೨೦೧೨, ಪು. ೨೭೪.

೨೦. ಕಲ್ಲಯ್ಯ ಹಿರೇಮಠ, ಕನ್ನಡದಲ್ಲಿ ಅಶ್ವಶಾಸ್ತ್ರ, ೨೦೦೯, ಪು. ೩೨.

೨೧. ಸೀತಾರಾಮಯ್ಯ ಎಂ.ವಿ., ಶಾಸ್ತ್ರಸಾಹಿತ್ಯ, ೨೦೧೨, ಪು. ೨೯.

೨೧. ಮಂಜುಳಾ, ಕನ್ನಡದಲ್ಲಿ ಸೂಪಶಾಸ್ತ್ರ, ೨೦೦೬, ಪು.

೨೨. ರವೀಂದ್ರನಾಥ ಕೆ.(ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೧೨, ಡಾ. ಬಿ. ನಂಜುಂಡಸ್ವಾಮಿ (ಲೇ), ೨೦೧೨, ಪು. ೧೦೧.

೨೩. ಅದೇ, ಪು. ೧೦೨.

೨೪. ಅದೇ, ಪು. ೧೦೫–೧೦೬.

೨೫. ಅದೇ, ಪು. ೮೭.

೨೬. ಅದೇ, ಪು. ೮೯.

೨೭. ಅದೇ, ಪು. ೯೦.

೨೮. ಚನ್ನವೀರಪ್ಪ ಎಸ್.ಆರ್. (ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೧೦, ೨೦೧೧, ಪು, ೧೨೭.

೨೯. ಅದೇ, ಪು. ೧೨೮.

೩೦. ಅದೇ, ಪು. ೧೨೯.

೩೧. ಅದೇ, ಪು. ೧೩೦–೧೩೧.

೩೨. ಅದೇ, ಪು. ೧೩೩.

೩೩. ಅದೇ, ಪು. ೧೩೩.

೩೪. ಅದೇ, ಪು. ೧೩೪.

೩೫. ಅದೇ, ಪು. ೧೩೬.

೩೬. ಅದೇ, ಪು. ೧೪೧–೧೪೨.

೩೭. ಅನಂತರಂಗಾಚಾರ್ ಎನ್. ಪಂಪಭಾರತಂ(ಗದ್ಯಾನುವಾದ), ೨೦೧೩, ಪು. ೨೬.

೩೮. ಅದೇ, ಪು. ೧೫೪–೧೫೫.

೩೯. ಅದೇ, ಪು. ೧೫೫–೧೫೭.

೪೦. ಅದೇ, ಪು. ೧೫೭.

೪೧. ರವೀಂದ್ರನಾಥ ಕೆ.(ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೧೧, ಡಾ. ಎಫ್.ಟಿ. ಮಹಾದೇವಪ್ಪ (ಲೇ), ೨೦೧೨, ಪು. ೧೨೭.

೪೨. ಜವರೇಗೌಡ ದೇ., ಜಾನಪದ ಸೌಂದರ್ಯ, ೧೯೮೧, ಪು. ೩೩.

೪೩. ರಂಗಸ್ವಾಮಿ ಎ., ಚಾವುಂಡರಾಯನ ಲೋಕಪಕಾರ ಒಂದು ಅಧ್ಯಯನ, ೧೯೯೬, ಪು. ೩೬೬.

೪೪. ಜೋಗಳೇಕರ್ ಎನ್.ಕೆ., ಶಕುನ ಜ್ಯೋತಿಷ್ಯ, ಪು. ೧೪.

೪೫. ರವೀಂದ್ರನಾಥ ಕೆ.(ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೧೧, ೨೦೧೨, ಪು. ೧೨೯

೪೬. ಅದೇ, ಪು. ೧೩೮.

೪೭. ಅದೇ, ಪು. ೧೪೪.

೪೮. ಹಳ್ಳಿಕೇರಿ ಎಫ್.ಟಿ.(ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೭, ಡಾ. ವಿ.ಎಸ್. ಬಡಿಗೇರ (ಲೇ), ೨೦೦೬, ಪು. ೧೨೪.

೪೯. ಹಳ್ಳಿಕೇರಿ ಎಫ್.ಟಿ.(ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೯, ೨೦೦೬, ಪು. ೧೩೦.

೫೦. ಹೊಸತು(ಮಾಸಿಕ), ಸಂಪುಟ–೨, ಸಂಚಿಕೆ–೪, ನವೆಂಬರ್ ೨೦೦೧.

೫೧. ಹಳ್ಳಿಕೇರಿ ಎಫ್.ಟಿ.(ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೮, ೨೦೦೮, ಪು. ೧೩೮–೧೩೯.

೫೨. ರವೀಂದ್ರನಾಥ ಕೆ.(ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೧೧, ಡಾ. ವಿ.ಎಸ್. ಬಡಿಗೇರ (ಲೇ), ೨೦೧೨, ಪು. ೧೦೩.

೫೩. ಅದೇ, ಪು. ೧೦೭.

೫೪. ಚನ್ನವೀರಪ್ಪ ಎಸ್.ಆರ್.(ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೧೦, ಡಾ. ಎಫ್.ಟಿ. ಹಳ್ಳಿಕೇರಿ ೨೦೧೧, ಪು. ೧೧೬.

೫೫. ಅದೇ, ಪು. ೧೧೯.

೫೬. ಅದೇ, ಪು. ೧೨೦.

೫೭. ಅದೇ, ಪು. ೧೨೩.

೫೮. ರವೀಂದ್ರನಾಥ ಕೆ.(ಸಂ), ಹಸ್ತಪ್ರತಿ ವ್ಯಾಸಂಗ ಸಂಪುಟ–೧೨, ಡಾ. ಎಸ್.ಆರ್. ಚನ್ನವೀರಪ್ಪ (ಲೇ), ೨೦೧೨, ಪು. ೧೦೯.

೫೯. ಅಂಗಡಿ ಎಸ್.ಎಸ್.(ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೯, ಡಾ. ಎಫ್.ಟಿ. ಹಳ್ಳಿಕೇರಿ ೨೦೧೧, ಪು. ೯೭–೯೮.

೬೦. ಅದೇ, ಪು. ೧೦೭.

೬೧. ಅದೇ, ಪು. ೧೦೮.

೬೨. ಅದೇ, ಪು. ೭೬.

೬೩. ಅದೇ, ಪು. ೮೨.

೬೪. ಅದೇ, ಪು. ೮೪.

# ಅಧ್ಯಾಯ ಮೂರು

# ಗಜಶಾಸ್ತ್ರ: ಆಕರಗಳು

**೩.೧. ಸಾಹಿತ್ಯಿಕ ಆಕರಗಳು**

೩.೧.೧. ಪ್ರಧಾನ ಶಾಸ್ತ್ರಕೃತಿಗಳು

೩.೧.೨. ಪ್ರಾಸಂಗಿಕ ಶಾಸ್ತ್ರಕೃತಿಗಳು

೩.೧.೩. ಕನ್ನಡ ಕಾವ್ಯಗಳು

**೩.೨. ದಾಖಲು ಸಾಹಿತ್ಯ ಆಕರಗಳು**

೩.೨.೧. ಶಾಸನಗಳು

೩.೨.೨. ಪ್ರವಾಸಿಗರ ವರದಿಗಳು

೩.೨.೩. ದಿನಚರಿಗಳು

**೩.೩. ಪುರಾತತ್ವ ಆಕರಗಳು**

೩.೩.೧. ನಾಣ್ಯಗಳು

## ಅಧ್ಯಾಯ ಮೂರು

# ಗಜಶಾಸ್ತ್ರ: ಆಕರಗಳು

### ೩.೧. ಸಾಹಿತ್ಯಿಕ ಆಕರಗಳು

ಗಜಶಾಸ್ತ್ರದ ಕುರಿತು ಕನ್ನಡದ ಬಹುತೇಕ ಕೃತಿಗಳು ಸಂಸ್ಕೃತದ ಗಜಶಾಸ್ತ್ರ ಕೃತಿಗಳನ್ನು ಅನುಸರಿಸಿಯೇ ಬಂದಿವೆ. ಪಾಲಕಾಪ್ಯ ಮುನಿಯ ಗಜಶಾಸ್ತ್ರ ಸಂಸ್ಕೃತ ಗ್ರಂಥಕ್ಕೆ ತಮಿಳಿನಲ್ಲಿ ಟೀಕನ್ನು ಸುಬ್ರಹ್ಮಣ್ಯಶಾಸ್ತ್ರಿ ಎನ್ನುವವರು ಬರೆದು ಸಂಸ್ಕೃತ ಗಜಶಾಸ್ತ್ರ ಕೃತಿಯನ್ನು ಸಂಪಾದಿಸಿದ್ದಾರೆ. ಗೌತಮ ಮುನಿಯು ವ್ಯಾಸ ಹಾಗೂ ವೈಶಂಪಾಯನರಿಂದ ತಿಳಿದ ವಿಚಾರವನ್ನು ರೋಮಪಾದ ಎಂಬ ರಾಜನಿಗೆ ಆನೆಗಳ ರೀತಿ ರಿವಾಜು, ಆನೆಗಳ ಸ್ವರೂಪ ಲಕ್ಷಣ, ಆನೆಗಳಿಗೆ ಬರುವ ರೋಗಗಳು, ಆ ರೋಗಗಳಿಗೆ ಮಾಡಬೇಕಾದ ವೈದ್ಯೋಪಚಾರ ಇತ್ಯಾದಿ ವಿಚಾರಗಳನ್ನು ತಿಳಿಸಿಕೊಡುತ್ತದೆ. ಇದರ ಜೊತೆಗೆ ಗಜಶಾಸ್ತ್ರಕ್ಕೆ ಸಂಬಂಧಿಸಿದಂತೆ ಕೃತಿಗಳು ವಿರಳವಿದ್ದು, ಲಭ್ಯವಿರುವ ಪ್ರಧಾನಶಾಸ್ತ್ರ ಕೃತಿಗಳು ಹಾಗೂ ಪ್ರಾಸಂಗಿಕಶಾಸ್ತ್ರ ಕೃತಿಗಳು ಮತ್ತು ಕನ್ನಡ ಕಾವ್ಯಗಳಲ್ಲಿ ಆನೆಗಳ ಉಲ್ಲೇಖಗಳು ಮತ್ತು ಆಧುನಿಕ ಸಾಹಿತ್ಯ ಕೃತಿಗಳಾದ ಗಜಗಾಮಿನಿ, ಗಜೇಂದ್ರ ಲೋಕ ಮತ್ತು ಜಾನಪದ ಕಥೆಗಳಲ್ಲಿ, ದಾಖಲಾತ್ಮಕ ಆಕರಗಳಾದ ಶಾಸನಗಳಲ್ಲಿ, ಪ್ರವಾಸಿಗರ ವರದಿಗಳಲ್ಲಿ, ದಿನಚರಿಗಳಲ್ಲಿ ಮತ್ತು ಪುರಾತತ್ವ ಆಕರಗಳಲ್ಲಿ, ನಾಣ್ಯಗಳಲ್ಲಿ ಪ್ರಸ್ತಾಪವಾದ ಆನೆಗಳ ವಿವರಗಳನ್ನು ಈ ಅಧ್ಯಯನದಲ್ಲಿ ಆಕರಗಳನ್ನಾಗಿ ಬಳಸಿಕೊಂಡಿದೆ.

#### ೩.೧.೧. ಪ್ರಧಾನ ಶಾಸ್ತ್ರಕೃತಿಗಳು

ಕನ್ನಡದಲ್ಲಿ ಗಜಶಾಸ್ತ್ರ ಸೃಷ್ಟಿಯಾಗಿರುವುದು ತುಂಬಾ ಕಡಿಮೆ. ಕ್ರಿ.ಶ. ೮೦೦ರಲ್ಲಿದ್ದ ಸೈಗೊಟ್ಟ ಶಿವಮಾರನ "ಶಿವಮಾರ ಮತ"ವೆಂಬ ಗಜಾಷ್ಟಕ. ಕ್ರಿ.ಶ. ೧೬೦೦ರಲ್ಲಿ ಜೀವಿಸಿದ್ದ

ವೀರಭದ್ರರಾಜನು ಬರೆದ "ಹಸ್ತಾಯುರ್ವೇದ ಟೀಕೆ," ಇದು ಪಾಲಕಾಪ್ಯಮುನಿ ಬರೆದ ಹಸ್ತಾಯುರ್ವೇದ ಕೃತಿಗೆ ಬರೆದ ವ್ಯಾಖ್ಯಾನ. ಕ್ರಿ.ಶ. ೧೬೭೪-೧೬೮೦ರಲ್ಲಿ ಜೀವಿಸಿದ್ದ ಸ್ವಾದಿ ಸದಾಶಿವ ರಾಜನು ಬರೆದ "ಗಜಾಶ್ವ ಲಕ್ಷಣ," ಕ್ರಿ.ಶ. ೧೮ನೇ ಶತಮಾನದಲ್ಲಿ ಜೀವಿಸಿದ್ದ ಮಳೆಯ ಗುರುನಂದೀಶ್ವರ ಬರೆದ "ಗಜಲಕ್ಷಣ" ಇವು ಗಜಶಾಸ್ತ್ರ ಕುರಿತಾದ ಪ್ರಮುಖ ಪ್ರಧಾನ ಕೃತಿಗಳಾಗಿದ್ದು ಇವು ಸಂಪಾದನೆಗೆ ಒಳಪಟ್ಟಿದ್ದು ಕನ್ನಡದಲ್ಲಿ ಪ್ರಾಸಂಗಿಕವಾಗಿ ಗಜಶಾಸ್ತ್ರ ಕೃತಿ ರಚನಕಾರರಿಗೆ ಪ್ರಮುಖ ಆಕರಗಳಾಗಿವೆ. ಪ್ರಸ್ತುತ ಈ ಅಧ್ಯಾಯದಲ್ಲಿ ಗಜಶಾಸ್ತ್ರಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಕೃತಿಗಳನ್ನು ಪ್ರಮುಖ ಶಾಸ್ತ್ರ ಕೃತಿಗಳನ್ನಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೧. ಗಜಾಷ್ಟಕ**

"ಕ್ರಿ.ಶ. ೮೦೦ರಲ್ಲಿದ್ದ ಸೈಗೊಟ್ಟ ಶಿವಮಾರನು ಶಾಸ್ತ್ರಪಂಡಿತನೂ, ನಾಟ್ಯನಿಪುಣನೂ ಆಗಿದ್ದನು. ಈತನ ಗಜಾಷ್ಟಕ ಕರ್ನಾಟಕದಲ್ಲಿ ಒನಕೆವಾಡಾಗಿ ಪ್ರಸಿದ್ಧಿ ಹೊಂದಿದ್ದನ್ನು ಶಿವಮೊಗ್ಗ ಜಿಲ್ಲೆ ಹೊಸನಗರದ ೩೫ನೇ ಶಾಸನದಲ್ಲಿ ಹೀಗೆ ಹೇಳಲಾಗಿದೆ.

ಏವೇಲ್ವುದೋ ಶಿವಮಾರಮ
ಹೀವಳಯಾಧಿಪತ ಸುಭಗಕವಿತಾ ಗುಣಮಂ ||
ಭೂವಳಯದೋಳ್ ಗಜಾಷ್ಟಕ
ವೋವನಿಗೆಯು ವೊನಕೆವಾಡುಮಾದುದೆ ಪೇಳ್ಗುಂ ||

ಹೀಗಾಗಿ ಇದು ಗಜಶಾಸ್ತ್ರ ಕುರಿತಾದ ಮೊದಲ ಅಷ್ಟಕವಾಗಿದೆ. ಈತನಿಂದಲೇ ರಚಿತವಾದುದೆಂದು ಹೇಳುವ "ಗಜಮತ ಕಲ್ಪನಾ" ಎಂಬ ಸಂಸ್ಕೃತ ಕೃತಿಯೊಂದು ೨ ಪರಿಚ್ಛೇದಗಳಲ್ಲಿ ಲಭ್ಯವಿದೆ. ಗಂಗರ ಮನೆತನದಲ್ಲಿ ಬರುವ ಮೊದಲನೆಯ ಶಿವಮಾರನನ್ನು 'ಗಜದಾನ ಮನರ್ಥಿಗಿತ್ತು ಚಾಗಿ' ಎಂದು ಬಣ್ಣಿಸಲಾಗಿದೆ. ಈತನ ಮೊಮ್ಮಗ ಶ್ರೀ ಪುರುಷನು 'ಗಜಶಾಸ್ತ್ರ'ದ ಕರ್ತೃವೆಂಬುದು ತಿಳಿದುಬರುತ್ತದೆ. ಶ್ರೀಪುರುಷನ ಮಗನಾದ ಎರಡನೆ ಶಿವಮಾರನಿಂದ "ಗಜಾಷ್ಟಕ" ಹಾಗೂ 'ಗಜಮತ ಕಲ್ಪನಾ' ಕೃತಿಗಳು ಪುನರ್ ಸೃಷ್ಟಿಯಾಗಿರಬೇಕೆಂದು ಊಹಿಸಬಹುದಾಗಿದೆ. ಅಂದರೆ ೧ನೇ ಶಿವಮಾರನಿಂದ 'ಗಜಮತ ಕಲ್ಪನಾ', ಶ್ರೀಪುರುಷನಿಂದ ಗಜಶಾಸ್ತ್ರ; ೨ನೇ ಶಿವಮಾರನಿಂದ 'ಗಜಾಷ್ಟಕ' ಕೃತಿಗಳು ರಚನೆಯಾದಂತಾಯಿತು."[೧]

"ಎರಡನೇ ಶಿವಮಾರ ಗಜಾಷ್ಟಕ ಹಾಗೂ ಸೇತುಬಂಧ ಎಂಬ ಕೃತಿಗಳನ್ನು ಬರೆದಿದ್ದಾನೆ. ಇವೆರಡು ಅನುಪಲಬ್ಧ ಕೃತಿಯಾಗಿವೆ. ಆದರೆ ಗಜಾಷ್ಟಕ ಒನಕೆವಾಡಾಗುವಷ್ಟು ಜನಪ್ರಿಯ ಕೃತಿಯಾಗಿತ್ತೆಂದು ಶಾಸನಗಳಿಂದ ತಿಳಿಯುತ್ತದೆ."[೨]

"ಹೀಗೆ ಗಂಗ ಅರಸರು ಗಜಶಾಸ್ತ್ರಕ್ಕೆ ಹೆಚ್ಚು ಒತ್ತುಕೊಟ್ಟಿರುವುದನ್ನು ನೋಡಿದರೆ ಆನೆಗಳ ಬಳಕೆ ಮತ್ತು ಅವುಗಳ ತಿಳುವಳಿಕೆ ಈ ವಂಶಜರಲ್ಲಿ ತೀವ್ರ ಸ್ವರೂಪದಲ್ಲಿದುದು ಕಂಡುಬರುತ್ತದೆ. ಈ ವಂಶದ ಮೂರನೇ ರಾಜನಾದ ಹರಿವರ್ಮನ ಒಂದು ಶಾಸನ ತಲಕಾಡು ಇವರ ರಾಜಧಾನಿಯಾಗಿತ್ತೆಂದು ಅಧಿಕೃತವಾಗಿ ತಿಳಿಸುತ್ತದೆ. ಸ್ಥಳ ಪುರಾಣಗಳ ಪ್ರಕಾರ ತಲಕಾಡು ಆ ಕಾಲದಲ್ಲಿ ದಟ್ಟವಾದ ಅರಣ್ಯಗಳಿಂದ ಕೂಡಿದ್ದು ಗಜಾರಣ್ಯವೆಂದು ಪ್ರಸಿದ್ಧವಾಗಿತ್ತು. 'ಮದಗಜ' ಗಂಗರ ರಾಜಲಾಂಛನವಾಗಲು ಈ ಸಂಗತಿಯೇ ಕಾರಣವಿರಬೇಕು."[೩]

### ೨. ಹಸ್ತ್ಯಾಯುರ್ವೇದ ಟೀಕು

"ಕ್ರಿ.ಶ. ೧೬೦೦ರಲ್ಲಿದ್ದ ಹಸ್ತ್ಯಾಯುರ್ವೇದ ಟೀಕು ಬರೆದ ವೀರಭದ್ರರಾಜ ಒಬ್ಬ ಟೀಕಾಕಾರನಾಗಿದ್ದು; ಈ ಮೊದಲು ರಚನೆಗೊಂಡ "ಪಾಲಕಾಪ್ಯಮುನಿ" ವಿರಚಿತ ಹಸ್ತ್ಯಾಯುರ್ವೇದ ಕೃತಿಯ ಕನ್ನಡ ವ್ಯಾಖ್ಯಾನವಾಗಿದೆ. ಪ್ರಾಯಶಃ ಹಸ್ತ್ಯಾಯುರ್ವೇದ ಕೃತಿಯ ಹಸ್ತಿಪ್ರದೇಶ ಜ್ಞಾನವೆಂಬ ೨೯ನೆಯ ಅಧ್ಯಾಯಕ್ಕೆ ಟೀಕು ಬರೆದಂತಿದೆ.

ಆನೆಯ ಶರೀರ ಪ್ರದೇಶಗಳು, ಉಪಾಂಗಗಳು, ಇಂದ್ರಿಯಗಳು ಮುಂತಾದ ಪರಿಚಯವನ್ನು ಅಂಗುಲಂಗುಲವಾಗಿ ಈ ಕೃತಿ ತಿಳಿಸುತ್ತದೆ. ಆನೆಯ ಅಂಗುಲಿ ಪ್ರದೇಶವೆಂದರೆ ಸೊಂಡಿಲಿನಲ್ಲಿ ಇರುವ ಬೆರಳಿನ ರೀತಿಯ ತುದಿ ಪ್ರದೇಶದಿಂದ ಆನೆಯ ಸೊಂಡಿಲಿನವರೆಗಿನ ೨೮ ಅವಯವಗಳನ್ನು ಕ್ರಮವಾಗಿ ಹೇಳಲಾಗಿದೆ. ಹಾಗೆಯೇ ಮುಖಭಾಗದಲ್ಲಿರುವ ದಂತಗಳ ಭಾಗ, ಕಟಸೂತ್ರ, ಕಪೋಲ ಇತ್ಯಾದಿ ೩೦ ಪ್ರದೇಶಗಳನ್ನು ವಿವರಿಸಲಾಗಿದೆ. ಉರಪ್ರದೇಶ, ಹೃದಯ ಸ್ಥಾನ, ಜಠರ, ಆಸನಭಾಗ, ಜಘನಭಾಗ, ಮೇಢ್ರಭಾಗ, ಲಾಂಗೂಲಭಾಗ ಮುಂತಾಗಿ ವಿವರಿಸುವ ಶಾಸ್ತ್ರಗಾರ ಆಯಾ ಭಾಗಗಳನ್ನು ಶಾಸ್ತ್ರಾನುಸಾರ ತಿಳಿದು ರೋಗಕ್ಕೆ ಮದ್ದು ನೀಡಬೇಕು ಮತ್ತು ಸರಿಯಾದ ಮದ್ದನ್ನು ಕೊಡದ ವೈದ್ಯ ಆನೆಯನ್ನು ಕೊಲ್ಲುತ್ತಾನೆ. ಸರಿಯಾದ ತಿಳುವಳಿಕೆ ಇಲ್ಲದಿದ್ದಲ್ಲಿ ಚಿಕಿತ್ಸೆ ಮಾಡಬಾರದೆಂದು ನಿಷ್ಠುರವಾಗಿ ಹೇಳುತ್ತಾನೆ. ಯಾಕೆಂದರೆ "ಆನೆಗೆ ಮುಖ್ಯವಾದ ೧೫ ಪ್ರದೇಶಗಳು ಶರೀರದ ಮುಖ್ಯಭಾಗಗಳೆಂದು; ಈ ೧೫ ಮುಖ್ಯ ಶರೀರ ಭಾಗಗಳಲ್ಲಿ ೪೬೦ ಪ್ರದೇಶಗಳು ವ್ಯಾಪಿಸಿಕೊಂಡಿವೆಯೆಂದು ಗಜಶಾಸ್ತ್ರ ವಿಶಾರದರು ತಿಳಿಸಿದ್ದಾರೆ. ಆದ್ದರಿಂದ ಆನೆಗೆ ಚಿಕಿತ್ಸೆ ನೀಡುವಾಗ ಆನೆಯ ಶರೀರದ ಈ ಎಲ್ಲ ಪ್ರದೇಶಗಳೂ ಸರಿಯಾಗಿ ತಿಳಿದಿರಬೇಕು."[೪]

**೩. ಗಜಾಶ್ವಲಕ್ಷಣ**

"ಕ್ರಿ.ಶ. ೧೬೭೪-೧೭೫೭ರಲ್ಲಿ ಜೀವಿಸಿದ್ದ ಸೋದೆ ಸದಾಶಿವರಾಜನು ೭೮ ಕಂದ ಪದ್ಯಗಳಲ್ಲಿ ಬರೆದ ಈ ಕಾವ್ಯದ ಹಸ್ತಪ್ರತಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಬಿ.೧೧೬೪/೭ ನಂಬರಿನಲ್ಲಿ ಸಂಗ್ರಹಗೊಂಡಿದೆ. ಇಲ್ಲಿಯ ಕಂದಗಳು "ಗುರು ನಂದೀಶಾ" ಅಂಕಿತದಿಂದ ಮುಕ್ತಾಯಗೊಂಡಿವೆ. ಸೋದೆ ಸದಾಶಿವರಾಜನ ಈ ಕೃತಿ ಶಾಸ್ತ್ರ ವಿಷಯಗಳನ್ನೊಳಗೊಂಡ ಸರ್ವ ವಿಷಯಗಳ "ಕಿರುವಿಶ್ವಕೋಶ" ದಂತಿರುವುದರಿಂದ ಇದಕ್ಕೆ "ಸದಾಶಿವ ನೀತಿ" ಎಂಬ ಪರ್ಯಾಯ ಹೆಸರು ಇದೆ. ಆನೆಯ ಸತ್ವ, ಆವರ್ತ ಲಕ್ಷಣ, ಶುಭ-ಅಶುಭ ಇತ್ಯಾದಿ ಕುರಿತು ವಿವರಿಸುತ್ತದೆ."[೫]

**೪. ಗಜಲಕ್ಷಣ**

"ಕ್ರಿ.ಶ. ೧೮ನೇ ಶತಮಾನದಲ್ಲಿದ್ದ ಮಳೆಯ ಗುರುನಂದೀಶ್ವರನು ಬರೆದ ಈ ಕೃತಿ ೧೪ ಕಂದ ಪದ್ಯಗಳಲ್ಲಿ ರಚನೆಯಾಗಿದೆ. ಧಾರವಾಡ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ೬೮೦(iv) ನಂಬರಿನಲ್ಲಿ ಸಂರಕ್ಷಿಸಲಾದ ತಾಡೋಲೆ ಪ್ರತಿಯಲ್ಲಿ(೧೨x೨ ಅಳತೆ) ಗಜಗಳ ಜಾತಿ ನಾಲ್ಕು ಎಂದು ಹೇಳುತ್ತಾನೆ.

ದ್ವಿಜ, ಕ್ಷತ್ರಿಯ ವೈಶ್ಯ ಶೂದ್ರ ಭೇದಗಳಿಂದಂ ||
ರುಜು ಗುಣಯುತ ಭದ್ರಮಂಡಲಾ
ನಿಜಬಲ ಮ್ರುಗ ಮಿಶ್ರವೆಂಬ ನಾಮದಿ ಗುರುವೇ ||

ಎಂದು ಭ್ರದ, ಮಂಡಲಾ, ಮ್ರುಗ ಹಾಗು ವಿಶ್ರಜಾತಿಗಳೆಂಬ ೪ ತಳಿಗಳನ್ನು ಹೇಳುತ್ತಾನೆ. ಈ ನಾಲ್ಕು ಜಾತಿಯ ಆನೆಗಳ ಲಕ್ಷಣವೆಂದರೆ

ಅತಿ ಸುಂದರವಾದಾನನ
ಕ್ಷಿತಿ ತಳವನು ಮುಟ್ಟುವಂತ ಸೊಂಡಿಲುವಾಲಂ ||
ಶೃತಿ ಶುಭ್ರ ಜಿಂಹ್ವೆಯ ರುಣಂ
ಶಿತ ದಂತೋನ್ನತ ಶಿರಸ್ಸುಮೃದು ಕೇಶಯುತಂ ||

ನೆಲವನ್ನು ಮುಟ್ಟುವ ಸೊಂಡಿಲು, ಉನ್ನತವಾದ ದಂತ, ಶಿರಸ್ಸು, ಹೊಂದಿದ ಆನೆ ಉತ್ತವೆಂದು ತಿಳಿಸುವ ಶಾಸ್ತ್ರಜ್ಞ

ಚರಣದಿ ಧನುರಾಕಾರಂ
ನೆರೆ ಹೃದಯದಲಗದ ಕುಂಭ ಲಂಭೋದರಕತೆ ||

ವರವಧು ಪಿಂಗಲ ನಯನದ
ಲಿರಲಿಕೆ ಗಜಭದ್ರ ಜಾತಿ ತಿಳಿವದು ಬಂಧರೂ ||

ಭದ್ರಜಾತಿ ಆನೆಯ ಚರಣ ಧನುರಾಕಾರದಿಂದ ಇದ್ದು ಶುಭಲಕ್ಷಣ ಉಳ್ಳ ಆನೆ ಧೈರ್ಯ, ಶೌರ್ಯ, ಪಟುತ್ವ, ವಿನೀತತ್ತ್ವ, ಸುಭಗತ್ವ, ವೀರತ್ವ ಗುಣವುಳ್ಳದ್ದನ್ನು ಭದ್ರಜಾತಿಯೆಂದು ಹೇಳಲಾಗಿದೆ. ಆನೆಯ ಉಪಯೋಗ ಕುರಿತಂತೆ

ನದಿಗಳ ದಾಂಟುವ ಸಮಯದಿ
ಇದಿರಾಗಿಹ ವೈರಿದುರ್ಗಕದಗಳನೊಡೆಯಲ್ ||
ಮದುವೆಗೆ ಪಟ್ಟಕೆ ದೀಕ್ಷೆಗೆ
ಮದಗಜ ಮೆರವಣಿಗೆಯಲ್ಲಿ ಯೋಗ್ಯವು ಗುರುವೆ ||

ನದಿಗಳನ್ನು ದಾಟುವಾಗ, ವೈರಿದುರ್ಗಗಳನ್ನು ಧ್ವಂಸ ಮಾಡುವಾಗ, ಮದುವೆ-ಪಟ್ಟದಾ ಚರಣೆಯಲ್ಲಿ ಆನೆಯ ಉಪಯೋಗ ಹೆಚ್ಚು. ಇನ್ನು ಶುಭದಾಯಕವಾದ ಆನೆಯೆಂದರೆ

ಆನೆಯೇ ಐಶ್ವರ್ಯದಾಯಕ
ಆನೆಯೇ ಚತುರಂಗದೊಳಗೆ ಅತಿಶಯವಹುದೂ ||
ಆನೆಯೇ ಅರಸಿಗೆ ಮುಖ್ಯವೂ
ಆನೆಯೇ ಅರಿಗಳಿಗೆ ಭಯವ ನೀವದು ಗುರುವೇ || ಎನ್ನಲಾಗಿದೆ. ಲಕ್ಷಣಕ್ಕೆ ಸಂಬಂಧಿಸಿದಂತೆ

ನಾಲ್ಕು ಗಜ ಉದ್ದ ಉತ್ತಮವು
ಲೋಕದೊಳಗೆ ಗಜವು ಕಡಿಮೆ ಮಧ್ಯಮಮಕ್ಕುಂ ||
ಯೇಕ ಗಜ ಕಡಿಮೆಯ ಧಮವು
ಯೀ ಕರಿಲಕ್ಷಣಕೆ ಕಡಿಮೆಯಧಮಾಧಮವು ||

ಈ ಮೇಲಿನ ಸದಾಶಿವ ರಾಜನ "ಗಜಾಶ್ವಲಕ್ಷಣ" ಮತ್ತು ಮಳೆಯ ಗುರುನಂದೀಶ್ವರನ "ಗಜಲಕ್ಷಣ" ಕೃತಿಗಳನ್ನು ಗಮನಿಸಿದರೆ ಗಜಗಳ ಲಕ್ಷಣ ಕುರಿತು ಮಾತ್ರ ಪ್ರಸ್ತಾಪಿಸಿದಂತೆ ತೋರುತ್ತದೆ. ಗಜಗಳ ರೋಗ, ಉಪಚಾರ ಕುರಿತು ಇಲ್ಲಿ ಯಾವುದೇ ಮಾಹಿತಿ ದೊರೆಯದು."[೬]

"ಗಜಶಾಸ್ತ್ರ ಸಾಹಿತ್ಯಿಕ ಆಕರಗಳಲ್ಲಿ ಗಜಶಾಸ್ತ್ರ ಶಬ್ದಕೋಶ ಪ್ರಮುಖ ಶಾಸ್ತ್ರಕೃತಿಯಾಗಿದೆ. ಇದಕ್ಕೆ ಸಂಬಂಧಪಟ್ಟಂತೆ ವೆಂಕಟಾಚಲಶಾಸ್ತ್ರಿಗಳು ಮೂಲತಃ ಭಾಷಾಶಾಸ್ತ್ರಜ್ಞರೆಂಬ ಗೌರವಕ್ಕೆ ಒಳಗಾದವರು. ಪ್ರಾಚೀನ ಶಾಸ್ತ್ರಕೃತಿಗಳ ಅಧ್ಯಯನದ ಸಂದರ್ಭದಲ್ಲಿ ವಿಶೇಷವಾಗಿ ಗಜಗಳ ಕುರಿತು ಅಧ್ಯಯನ ಮಾಡಲು ಅಲ್ಲಿ ಬರುವ ಪುರ ಪರ್ವತ ಯುದ್ಧ ಮೊದಲಾದ ವರ್ಣನೆಗಳ ಭಾಗವಾಗಿ ಬರುವ ಆನೆಗಳ ದೇಹಾಕೃತಿ ಶೀಲಸ್ವಭಾವ, ಗತಿಚೇಷ್ಟಾದಿಗಳ ಕಥನಗಳು ಮನವರಿಕೆಗೆ, ವಿವರಣೆಗೆ ಅಲ್ಲಿ ತೊಡಕುಗಳನ್ನು ಒಡ್ಡುತ್ತಿದ್ದವು. ಈ ತೊಡಕುಗಳು ಸಾಮಾನ್ಯವಾಗಿ ಅತೃಪ್ತಿಕರ ಕವಿಪಾಠಗಳಿಗೆ, ಅರ್ಥಕ್ಲೇಷಗಳಿಗೂ ಸಂಬಂಧಿಸಿರುತ್ತಿದ್ದವು. ಮುದ್ರಿತ ಪಠ್ಯಗಳೂ, ಪರಿಷ್ಕರಣಗಳೂ, ಅರ್ಥಕೋಶಗಳೂ, ವಿಮರ್ಶೆ ವ್ಯಾಖ್ಯಾನಗಳೂ ಈ ತೊಡಕುಗಳ ನಿವಾರಣೆಗೆ ಒದಗುತ್ತಿರಲಿಲ್ಲ. ವಿವಿಧ ಭಾರತೀಯ ನಿಘಂಟುಗಳಾದರೂ ಅಷ್ಟೆ. ಇಂತಹ ಸ್ಥಿತಿಯಲ್ಲಿ ಗಜಶಾಸ್ತ್ರದ ಮೂಲಗ್ರಂಥಗಳನ್ನು ನೋಡುವುದು ಅನಿವಾರ್ಯವಾಯಿತು. ಆದರೆ ಅವು ಬೇಕೆಂದಾಗ ನೋಡಲು ಸುಲಭವಾಗಿರಲಿಲ್ಲ. ಭಾರತೀಯ ಭಾಷೆಗಳಲ್ಲಿ ಪ್ರತ್ಯೇಕವಾಗಿಯೇ ರಚಿತವಾದ ಗಜಶಾಸ್ತ್ರದ ಪಾರಿಭಾಷಿಕ ಪದಕೋಶ ಯಾವುದಾದರೂ ಇರುವಂತೆ ನನಗೆ ತಿಳಿಯದು.

ಹೀಗೆ ಈ ಸನ್ನಿವೇಶ ಒದಗಿಸಿದ ಒತ್ತಡದಿಂದ, ಈ ಹಿಂದೆ ನಾನು ಗಮನಿಸಿದ್ದ ಶ್ರೀ ಇ.ಡಿ. ಕುಲಕರ್ಣಿ ಎಂಬುವವರ ಲೇಖನವೊಂದು( ) ನೀಡಿದ ಸ್ಫೂರ್ತಿಯಿಂದ ಈ ಗಜಶಾಸ್ತ್ರ ಶಬ್ದಕೋಶದ ರಚನೆಗೆ ನಾನು ಕೈ ಹಾಕಿದೆ( ) ಎಂದು ಕೃತಿ ರಚನಾಕಾರರೇ ಹೇಳಿಕೊಂಡಿದ್ದಾರೆ.

ಈ ಗಜಶಾಸ್ತ್ರ ಶಬ್ದಕೋಶ ರಚನೆಗೆ ಹೀಗೆ ಕಾರಣಗಳನ್ನು ಹೇಳಿದ ಲೇಖಕರು ಗಜಶಾಸ್ತ್ರದ ಬಹುತೇಕ ಮುಖ್ಯ ಕೃತಿಗಳನ್ನು ಅವಲೋಕಿಸಿ ಅವುಗಳಲ್ಲಿ ಎದುರಾದ ಶಬ್ದಗಳಿಗೆ ಅರ್ಥವನ್ನು ನೀಡಿ ಉಪಕರಿಸಿದ್ದಾರೆ.

ಕನ್ನಡ ಓದುಗರಿಗೆ ಗಜಶಾಸ್ತ್ರ ಕೃತಿಗಳು ಸಂಸ್ಕತದಲ್ಲಿ ಅಥವಾ ಸಂಸ್ಕೃತ ಭೂಯಿಷ್ಟ ಪದಗಳಿಂದ ಕೂಡಿರುವುದರಿಂದ ಆ ಶಾಸ್ತ್ರಕ್ಕೆ ಸಂಬಂಧಿಸಿದ ಪದಗಳನ್ನು ಅರ್ಥ ಮಾಡಿ ಕೊಳ್ಳುವುದು ಅಷ್ಟು ಸುಲಭದ ವಿಚಾರವಲ್ಲ. ಅದನ್ನು ಈ ಗಜಶಾಸ್ತ್ರ ಶಬ್ದಕೋಶ ಸುಲಭ ಮಾಡಿಕೊಟ್ಟಿದೆಯೆಂದರೆ ಆಶ್ಚರ್ಯವಲ್ಲ.

ಪುಸ್ತಕದ ಪ್ರಾರಂಭದಲ್ಲಿಯೇ ತಾವು ಅವಲೋಕಿಸಿದ ಶಾಸ್ತ್ರ ಹಾಗೂ ಕಾವ್ಯಗ್ರಂಥಗಳಿಗೆ ಸಂಬಂಧಿಸಿದ ಸಂಕೇತ ಸೂಚಿಯನ್ನು ನೀಡಿದ್ದಾರೆ. ಉದಾಹರಣೆಗೆ ಅಜಿಪು > ಅಜಿತನಾಥ ಪುರಾಣ, ಅನಂಪು > ಅನಂತನಾಥ ಪುರಾಣ, ಅಭಿದಾ> ಅಭಿದಾನ ರತ್ನಮಾಲ ಹೀಗೆ

ಸಂಕೇತಸೂಚಿ ಕಂಡುಬರುತ್ತದೆ. ಆರು ಪುಟದಷ್ಟು ಸಂಕೇತಸೂಚಿ ವಿವರಗಳೇ ಇವೆ. ಈ ಸಂಕೇತಸೂಚಿಯಲ್ಲಿ ವಿವರಿಸಿದ ಗ್ರಂಥಗಳನ್ನು ನೋಡಿದರೆ ಲೇಖಕರ ಪರಿಶ್ರಮ ಎಂತಹದ್ದು ಎಂದು ಅರ್ಥವಾಗುತ್ತದೆ.

'ಅ' ಕಾರದಿಂದ ಪ್ರಾರಂಭವಾಗಿ 'ಹ' ಕಾರದವರೆಗೆ ಅಕಾರಾದಿಯಲ್ಲಿ ಶಬ್ದ ವಿವರಗಳಿವೆ. ಬಹುತೇಕ ಈ ಶಬ್ದಗಳೆಲ್ಲಾ ಸಂಸ್ಕೃತ ಭಾಷೆಯಿಂದ ಕೂಡಿದ ಪದಗಳಾಗಿವೆ.

ಆನೆಯ ಹೆಗಲಿನಿಂದ ಪಾದದವರೆಗಿನ ಅಂಗಬಾಗಕ್ಕೆ ಅಂಸ ಎಂದು ಕರೆಯಲಾಗುತ್ತದೆ ಎಂದು ಶಬ್ದಕೋಶಕಾರರು ತಿಳಿಸುತ್ತಾರೆ. ಅದೇ ರೀತಿಯಾಗಿ ಅಂಗುಲಿ ಎಂಬ ಪದವನ್ನು ನೋಡಿ ಆನೆಯ ಸೊಂಡಿಲಿನ ತುದಿಯಲ್ಲಿ ಬೆರಳಿನಂತಿರುವ ಭಾಗವನ್ನು ಅಂಗುಲಿ ಎಂದು ಕರೆಯಲಾಗುವುದಾಗಿ ಸೂಚಿಸುತ್ತಾರೆ. ಗಜಶಾಸ್ತ್ರಕ್ಕೆ ಸಂಬಂಧಿಸಿದ ಎಲ್ಲಾ ಪದಗಳಿಗೂ ಈ ಶಬ್ದಕೋಶದಲ್ಲಿ ಅರ್ಥವಿವರಣೆ ಇಲ್ಲವೆಂದೇ ಹೇಳಬಹುದು. ಉದಾಹರಣೆಗೆ ಆನೆಯ ಅಂಗಗಳು, ಆನೆಗೆ ಬರುವ ರೋಗಗಳು, ಆನೆಯ ಆಹಾರ ಮುಂತಾದವುಗಳಿಗೆ ಪ್ರಾದೇಶಿಕವಾಗಿ ಭಿನ್ನ ಭಿನ್ನವಾದ ಹೆಸರುಗಳಿಂದ ಕರೆಯುತ್ತಾರೆ. ಉದಾಹರಣೆಗೆ ಕರ್ನಾಟಕದಲ್ಲಿ ಆನೆಯನ್ನು ಪಳಗಿಸುವವರಲ್ಲಿ ಮತ್ತು ಆನೆಯ ಮಾವುತರಾಗುವವರಲ್ಲಿ ಹೆಚ್ಚಿನ ಜನ ಸೋಲಿಗ, ಕಾಡುಕುರುಬ, ಜೇನುಕುರುಬ, ಸ್ವಲ್ಪಮಟ್ಟಿಗೆ ಇಸ್ಲಾಂ ಧರ್ಮವನ್ನು ಅನುಸರಿಸುವವರಿದ್ದಾರೆ. ಇವರಲ್ಲಿ ಆನೆಯ ಅಂಗಗಳಿಗೆ ಒಂದು ಸಮುದಾಯದ ಜನ ಕರೆಯುವ ಪದವನ್ನು ಇನ್ನೊಂದು ಸಮುದಾಯದವರು ಕರೆಯುವುದಿಲ್ಲ. ಅವರು ತಮ್ಮದೇ ಭಾಷೆಯ ಪದಗಳನ್ನು ಬಳಸುವುದೇ ಹೆಚ್ಚು. ಈ ದೃಷ್ಟಿಯಿಂದ ಈ ಶಬ್ದಕೋಶ ಅಪರಿಪೂರ್ಣವೆಂದೇ ಹೇಳಬಹುದು.

ಆದರೆ ಇಲ್ಲಿ ಪದಕೋಶಕಾರರು ಕೇವಲ ಸಂಸ್ಕೃತ ಹಾಗೂ ಸಂಸ್ಕೃತ ಭೂಯಿಷ್ಟವಾದ ಹಳಗನ್ನಡ ಸಾಹಿತ್ಯದಲ್ಲಿ ಬರುವ ಆನೆಗಳಿಗೆ ಸಂಬಂಧಿಸಿದ ಪದಗಳನ್ನಷ್ಟೇ ಈ ಶಬ್ದಕೋಶ ತಯಾರಿಕೆಗೆ ಬಳಸಿಕೊಂಡ ಮೂಲ ಆಕರಗಳಾಗಿವೆ. ಈ ದೃಷ್ಟಿಯಿಂದ ಈ ಶಬ್ದಕೋಶದ ಮಿತಿಯೂ ಇದಾಗಿದೆ.

ವಿಶೇಷವಾಗಿ ಗಜಶಾಸ್ತ್ರ ಶಬ್ದಕೋಶದಲ್ಲಿ ಆನೆಗಳ ಬದುಕಿನ ಘಟ್ಟಗಳು, ಅವುಗಳ ಜಾತಿ, ಹುಟ್ಟು, ಮದಗುಣಗಳು, ಆನೆ ಪಳಗಿಸುವುದು, ದೇಹ ಲಕ್ಷಣ, ಅಲಂಕಾರ, ಆಹಾರ ಮುಂತಾದವುಗಳ ಕುರಿತು ಗಜಶಾಸ್ತ್ರ, ಕಾವ್ಯಗ್ರಂಥಗಳಲ್ಲಿ ಉದ್ಧೃತವಾದರೆ ಪದಗಳಿಗೆ ಕನ್ನಡದ ಅರ್ಥಗಳನ್ನು ನೀಡಲಾಗಿದೆ.

ಆನೆಯ ಬದುಕಿನ ಘಟ್ಟಕ್ಕೆ ಸಂಬಂಧಿಸಿದಂತೆ ಗಜಶಾಸ್ತ್ರದಲ್ಲಿ ಕಲ್ಯಾಣ ಎಂಬ ಪದ ಬಳಕೆಗೊಳ್ಳುತ್ತದೆ. ಕನ್ನಡದಲ್ಲಿ ಕಲ್ಯಾಣ ಎಂಬುದಕ್ಕೆ ವಿವಾಹ, ಮದುವೆ, ಶುಭಕಾರ್ಯ ಮುಂತಾದ ಅರ್ಥಗಳಿವೆ. ಈ ಕಲ್ಯಾಣ ಶಬ್ದವು ಗಜಶಾಸ್ತ್ರದಲ್ಲಿ ವಿಶೇಷ ಅರ್ಥವನ್ನು ಹೊಂದಿದೆ. ಬದುಕಿನ ನಾಲ್ಕನೇ ಘಟ್ಟದಲ್ಲಿರುವ ವಯಸ್ಕ ಆನೆಗೆ ಕಲ್ಯಾಣ ಎಂದು ಕರೆಯಲಾಗುತ್ತದೆಂಬುದು ಗಜಶಾಸ್ತ್ರ ಶಬ್ದಕೋಶದಿಂದ ತಿಳಿಯುತ್ತದೆ. ಹಾಗೆಯೇ ಜವನ ಎಂಬ ಪದಕ್ಕೆ ಕನ್ನಡದಲ್ಲಿ ಯೌವನ ಎಂಬ ಪದಕ್ಕೆ ಸಮಾನಾಂತರವಾಗಿ ಆಡು ಭಾಷೆಯಲ್ಲಿ ಬಳಸಲಾಗುತ್ತದೆ. ಗಜಶಾಸ್ತ್ರದ ಪ್ರಕಾರ ಆನೆಯ ಮೂರನೇ ಘಟ್ಟವನ್ನು ಈ ಪದ ಸೂಚಿಸುತ್ತೆಂಬುದು ಶಬ್ದಕೋಶದ ಮೂಲಕ ತಿಳಿಯುತ್ತದೆ. ದಂತಾರುಣ ಎಂಬುದು ಒಂಬತ್ತನೇ ವಯಸ್ಸಿನ ಆನೆಗೆ ಕರೆಯುತ್ತಾರೆ. ಪೋತ ಎಂಬುದು ಆನೆಯ ಎರಡನೇ ಘಟ್ಟದಲ್ಲಿರುವುದನ್ನು ಗುರುತಿಸಲು ಬಳಸುವ ಪದ. ಒಂದು ವರ್ಷದ ವಯಸ್ಸುಳ ಆನೆಗೆ ಬಾಲ ಎಂದು ಕರೆಯುತ್ತಾರೆ. ಮಜ್ಜನ ಎಂದರೆ ಎರಡನೇ ವಯಸ್ಸಿನ ಆನೆ, ಯೌಧ ಎಂಬುದು ಐದನೇ ಘಟ್ಟದಲ್ಲಿರುವ ಆನೆ. ಹೀಗೆ ಆನೆಯ ವಿವಿಧ ವಯೋಮಾನವನ್ನು ಸೂಚಿಸಲು ಗಜಶಾಸ್ತ್ರ ಪ್ರಕಾರ ವಿಶೇಷವಾದ ಪದಗಳ ಬಳಕೆಯಾಗಿರುವುದನ್ನು ಅವುಗಳ ಕನ್ನಡ ಅರ್ಥದೊಂದಿಗೆ ಲೇಖಕರು ವಿವರಿಸಿದ್ದಾರೆ.

ಗಜ ಜಾತಿಗಳ ಕುರಿತಾಗಿಯೂ ಈ ಶಬ್ದಕೋಶದಲ್ಲಿ ವಿವರಗಳು ದೊರೆಯುತ್ತವೆ. ಭದ್ರ, ಮಂದ, ಮೃಗ, ವೈಶ್ಯ, ವ್ಯಾಳ, ಅನುಭದ್ರ, ಅಷ್ಟದಿಗ್ಗಜ ಮುಂತಾದ ಪದಗಳು ಸಾಮಾನ್ಯ ಓದುಗನಿಗೆ ಅರ್ಥವಾಗುವುದು ಕಷ್ಟ ಅದನ್ನು ಪರಿಹರಿಸುವ ಕಾರ್ಯವನ್ನು ಈ ಶಬ್ದಕೋಶದಲ್ಲಿ ಅರ್ಥಸಹಿತ ಸಂಪೂರ್ಣ ವಿವರಣೆಯನ್ನು ನೀಡುತ್ತದೆ.

ಭದ್ರ ಎಂಬುದು ಶುಭ ಲಕ್ಷಣದ ಆನೆ., ಮೃಗ ಎಂದರೆ ಆನೆಗಳಲ್ಲಿಯೇ ಕನಿಷ್ಠ ಗುಣವನ್ನುಳ ಆನೆ., ವ್ಯಾಳ ತುಂಟ ಆನೆ., ಅಷ್ಟದಿಗ್ಗಜವೆಂದರೆ ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ ಎಂಬ ಆನೆಯ ಜಾತಿಗಳಿಗೆ ಅಷ್ಟದಿಗ್ಗಜ ಎಂದು ಕರೆಯುವುದಾಗಿ ಶಬ್ದಕೋಶಕಾರರು ತಿಳಿಸುತ್ತಾರೆ. ಭಾರತೀಯ ಪುರಾತನವಾದಿಗಳಲ್ಲಿ ಭೂಮಿ ಚಪ್ಪಟೆಯಾಗಿದೆ. ಚಪ್ಪಟೆಯಾದ ಭೂಮಿಯ ಭಾಗವನ್ನು ಹೊರಲು ಎಂಟು ದಿಕ್ಕಿಗೆ ಎಂಟು ಆನೆಗಳನ್ನು ಸೃಷ್ಟಿಸಿ ಬಿಡಲಾಗಿದೆ. ಈ ರೀತಿ ಭಾರವನ್ನು ಹೊತ್ತಿರುವ ಆನೆಗಳ ಹೆಸರೇ ಇವು ಎಂದು ಹೇಳಲಾಗುತ್ತದೆ. ಭೂಮಿಯನ್ನು ಹೊತ್ತ ಆನೆಗಳಿಗಿರುವ ಹೆಸರನ್ನು ಅವು ಸೂಚಿಸುವುದಾಗಿ ತಿಳಿದುಬರುತ್ತದೆ.

ಆನೆಯ ಹುಟ್ಟಿಗೆ ಸಂಬಂಧಿಸಿದಂತೆ ಮಾನವನಲ್ಲಿ ಊಹಾಪೋಹಗಳೇ ಹೆಚ್ಚು. ಅದು ದೀರ್ಘ ಗರ್ಬದ ಪ್ರಾಣಿ. ಈ ಪ್ರಾಣಿಯು ಮರಿ ಹಾಕಿದ ನಂತರ ಒಂದು ತಿಂಗಳ

ಮಗುವಿಗೆ ಶಿಶು, ಎರಡನೇ ತಿಂಗಳ ಮಗು ಹಂಸ, ಮೂರನೇ ತಿಂಗಳ ಮಗು ಯುಧನಿಷ್ಪ್ರಾಯ, ವಿಕ್ಕ ಎಂಬುದು ಮೊಲೆ ಕುಡಿಯುವ ಮರಿ ಹೀಗೆ ಆಯಾ ವಯೋಮಾನಕ್ಕೆ ತಕ್ಕಂತೆ ಬೆರೆ ಬೇರೆ ಹೆಸರುಗಳಿರುವುದನ್ನು ಶಬ್ದಕೋಶ ತಿಳಿಸುತ್ತದೆ.

ಆನೆಯ ಮದಗುಣಗಳ ಕುರಿತಾಗಿ ಶೀಫ್ರತಾ, ಹ್ರಾಸನ, ಅನಿಬಂಧ, ಅತಿಕ್ರಾಂತ, ಅತಿವರ್ತಿನಿ ಮುಂತಾಗಿ ವಿಭಾಗಗಳು ಗಜಶಾಸ್ತ್ರದಲ್ಲಿವೆ. ಶೀಫ್ರತಾ ಎಂಬುದು ಮದಾವಸ್ಥೆಯ ಆನೆಯ ಎರಡನೇ ಘಟ್ಟ. ಹ್ರಾಸನ ಕೊನೆಯ ಘಟ. ಅನಿಬಂಧ ಮೂರನೆಯ ಮದಾವಸ್ಥೆಯ ಗಟ್ಟ, ಅತಿವರ್ತಿನಿ ಆನೆಯ ಆರನೇ ಮದಾವಸ್ಥೆಯ ಘಟ್ಟ ಎಂಬುದು ಶಬ್ದಕೋಶದ ಮೂಲಕ ತಿಳಿಯುತ್ತದೆ. ಸಾಮಾನ್ಯವಾಗಿ ಮದಾವಸ್ಥೆಯಲ್ಲಾ ಒಂದು ರೀತಿಯದ್ದಾಗಿರುತ್ತದೆ ಎಂಬ ಸಾಮಾನ್ಯನ ನಿಲುವನ್ನು ಈ ಶಬ್ದಕೋಶ ಬದಲಿಸುತ್ತದೆ.

ವಿಶೇಷವಾಗಿ ಕಾಡಾನೆಯನ್ನು ಹಿಡಿದು ಪಳಗಿಸುವುದು. ಆನೆಗಳನ್ನು ಮಾನವನು ತನ್ನ ಬಳಕೆಗಾಗಿ ಹಿಡಿದು ಪಳಗಿಸಿ ಉಪಯೋಗಿಸಿಕೊಳ್ಳುವುದು ಪ್ರಾಚೀನ ಕಾಲದಿಂದಲೂ ಇದೆ. ಆನೆಯನ್ನು ವಿವಿಧ ಕ್ರಮಗಳಲ್ಲಿ ಹಿಡಿದು ಪಳಗಿಸಲಾಗುತ್ತದೆ. ಈ ರೀತಿಯ ವಿವಿಧ ಕ್ರಮಗಳಿಗೆ ಗಜಶಾಸ್ತ್ರದಲ್ಲಿರುವ ಪದಗಳಿಗೆ ಅರ್ಥಗಳನ್ನು ನೀಡುವ ಕೆಲಸವನ್ನು ಈ ಶಬ್ದಕೋಶ ನೀಡಿದೆ.

ಅನುಗತಗ್ರಹ > ಆನೆಯನ್ನು ಅಟ್ಟಿ ಹಿಡಿಯುವ ಕ್ರಮ, ಅನುಗತಬಂಧ ಹೆಣ್ಣಾನೆಯನ್ನು ಮುಂದೆ ಬಿಟ್ಟು ಅದರ ಮೋಹಕ್ಕೊಳಗಾಗುವ ಗಂಡಾನೆಯನ್ನು ಹಿಡಿಯಲು ಬಳಸುವ ಕ್ರಮ – ಹೀಗೆ ವಿವಿಧ ರೀತಿಯಲ್ಲಿ ಆನೆಗಳನ್ನು ಸೆರೆಯಾಗಿಸುವ ವಿಚಾರ ತಿಳಿಯುತ್ತದೆ.

ಆನೆಯನ್ನು ಬಂಧಿಸಲು ಬಳಸುವ ಸರಪಳಿಗೆ ಅಂದುಕವೆಂದೂ, ಆನೆಗೆ ಸೂಚನೆ ನೀಡುವ ಆಯುಧವನ್ನು ಅಂಕುಶವೆಂದೂ ಹೇಳಲಾಗುವ ವಿಚಾರ ಈ ಶಬ್ದಕೋಶದ ಮೂಲಕ ತಿಳಿಯುತ್ತದೆ.

ಆನೆಯ ದೇಹದ ಭಾಗಗಳಿಗೆ ಗಜಶಾಸ್ತ್ರದಲ್ಲಿ ವಿಶೇಷವಾದ ಪದಗಳನ್ನು ಬಳಸಲಾಗಿದೆ. ಪ್ರಾಯಶಃ ಅವು ಸಂಸ್ಕೃತ ಮೂಲ ಪದಗಳು. ಅವುಗಳಿಗೆ ಕನ್ನಡ ಪದದ ಅರ್ಥ ಶಬ್ದಕೋಶದಿಂದ ದೊರೆಯುತ್ತದೆ. ಅವಗ್ರಹ>ಹಣೆ, ಅಗ್ರಪಲ್ಲಟ>ಆನೆಯ ಬಾಲದ ತುದಿಭಾಗ, ಅಂತರಕರ್ಣ>ಆನೆಯ ಬಾಯಿಯ ಒಳಭಾಗ, ಅಜುಷಕುಕ್ಷ> ತೆಳ್ಳನೆಯ ದೇಹ ಹೊಂದಿದ ಆನೆ, ಅಪರ> ಆನೆಯ ಹಿಂಭಾಗ ಹೀಗೆ ನಾನಾ ಅರ್ಥಗಳು ಕೊಡಲಾಗಿದ್ದು ಗಜಶಾಸ್ತ್ರ ಅಧ್ಯಯನಕಾರರಿಗೆ ಉತ್ತಮವಾದ ಮಾರ್ಗಸೂಚಿ ಗ್ರಂಥವಾಗಿ ಈ ಶಬ್ದಕೋಶ ಕಂಡುಬರುತ್ತದೆ.

ಆನೆಯನ್ನು ಪಳಗಿಸುವಾಗ ಮಾವುತನಾದವನು ವಿವಿಧ ಭಾಗಗಳಲ್ಲಿ ಅಂಕುಶದಿಂದ ಮೆಲ್ಲಗೆ ಚುಚ್ಚಿ ಆಜ್ಞೆ ಮಾಡುತ್ತಾನೆ. ಹೀಗೆ ಯಾವ ಭಾಗಕ್ಕೆ ಚುಚ್ಚಿದರೆ ಏನೆಂಬುದಾಗಿ ಕರೆಯಲಾಗುತ್ತದೆಂಬುದನ್ನೂ ಸಹ ಈ ಶಬ್ದಕೋಶದಲ್ಲಿ ವಿವರಗಳಿವೆ.

ಒಟ್ಟಾರೆಯಾಗಿ ಹಲವು ಮಿತಿಗಳ ಮಧ್ಯದಲ್ಲಿಯೂ ಈ ಗಜಶಾಸ್ತ್ರ ಶಬ್ದಕೋಶವು ಗಜಶಾಸ್ತ್ರ ಸಾಹಿತ್ಯಿಕ ಆಕರಗಳಲ್ಲಿ ಗಜಶಾಸ್ತ್ರಕ್ಕೆ ಸಂಬಂಧಿಸಿದಂತೆ ಪೂರ್ಣವಾದ ಅರ್ಥ, ಸಂದರ್ಭಗಳನ್ನು ತಿಳಿಸುವ ಕೃತಿಯಾಗಿದ್ದು, ಆನೆಯ ಗುಣ-ಸ್ವಭಾವಗಳನ್ನು ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಿರುವುದು ಕಾಣಬಹುದಾಗಿದೆ.

ಟಿ. ಗಣಪತಿ ಶಾಸ್ತ್ರಿ ಅವರು ಸಂಪಾದಿಸಿರುವ ಮಾತಂಗಲೀಲಾ ಎನ್ನುವ ಸಂಸ್ಕೃತ ಕೃತಿ ಒಟ್ಟು ೧೨ ಅಧ್ಯಾಯಗಳಿಂದ ಕೂಡಿದೆ. ಇದರಲ್ಲಿ ಹಸ್ತಿ ಆಯುರ್ವೇದಕ್ಕೆ ಸಂಬಂಧಿಸಿದ ಮಹತ್ವದ ಮಾಹಿತಿಗಳಿವೆ. ಮೊದಲ ಅಧ್ಯಾಯದಲ್ಲಿ ಮಹಾರಾಜ ಪಾಲಕಾಪ್ಯ ಮುನಿಯ ಕುರಿತಾದ ವಿವರಗಳಿವೆ. ಎರಡನೇ ಅಧ್ಯಾಯದಲ್ಲಿ ಆನೆಗಳು ಆರೋಗ್ಯದಿಂದರಲು ನೀಡಬೇಕಾದ ಆಹಾರಕ್ರಮದ ಕುರಿತ ವಿವರಗಳಿವೆ. ಹೀಗೆ ಮುಂದುವರಿದು ಮುಂದಿನ ಅಧ್ಯಾಯಗಳಲ್ಲಿ ಆನೆಗಳಿಗೆ ಬರುವ ವಿವಿಧ ರೋಗಗಳು, ಅದರಲ್ಲಿ ವಿವಿಧ ಸ್ವರೂಪದ ಜ್ವರ, ಮೂತ್ರ ಸಂಬಂಧಿ ಕಾಯಿಲೆಗಳು, ತಲೆ ಹೊಟ್ಟೆ ಸಂಬಂಧಿ ರೋಗಗಳು, ಕಾಲಿಗೆ ಉಂಟಾಗುವ ಸೋಂಕುಗಳು, ನೇತ್ರ ಸಂಬಂಧಿ ಭಾದೆಗಳು ಅವುಗಳಿಗೆ ಹೇಗೆ ಔಷಧೋಪಚಾರ ಮಾಡಬೇಕು. ಔಷಧ ತಯಾರಿಸಿಕೊಳ್ಳುವ ವಿಧಾನ, ಪತ್ಯ ಇತ್ಯಾದಿ ಆನೆಗಳಿಗೆ ಸಂಬಂಧಿಸಿದ ವಿಶೇಷವಾಗಿ ಆನೆಗಳ ಔಷಧೋಪಚಾರವನ್ನು ಕುರಿತು ತಿಳಿಸುವ ಮಹತ್ವದ ಕೃತಿಯಾಗಿದೆ.

'ಕ್ಷುದ್ರೋಗಾಸ್ತನಮ್' ಮತ್ತೊಂದು ಮಹತ್ವದ ಸಂಸ್ಕೃತ ಗ್ರಂಥ. ಇದು ೭೨ ಅಧ್ಯಾಯಗಳನ್ನೊಳಗೊಂಡ ಬೃಹತ್ ಗ್ರಂಥ. ಇದರೊಳಗೆ ರಕ್ತಸಂಬಂಧಿ ರೋಗಗಳು, ವಿಷಯುಕ್ತ ಆಹಾರ ಸೇವಿಸುವುದರಿಂದ ಉಂಟಾಗುವ ತೊಂದರೆ, ಅಜೀರ್ಣ ದೋಷ, ವಿಷಯುಕ್ತ ಬಾಣ(ಅಂಬು) ಚುಚ್ಚುವುದರಿಂದ ಉಂಟಾಗುವ ಪರಿಣಾಮಗಳು ಹಾಗೂ ಪರಿಹಾರಗಳು, ಹೃದಯಸಂಬಂಧಿ ಸೋಂಕುಗಳು, ಹೊಟ್ಟೆಯೊಳಗೆ ಉಂಟಾಗುವ ಹುಳದ ಭಾದೆ, ಆಯುಧಗಳಿಂದ ಉಂಟಾಗುವ ಗಾಯಗಳು, ಅತಿಯಾದ ಭಾರದ ಕೆಲಸದಿಂದ ಚರ್ಮದ ಮೇಲ್ಭಾಗದಲ್ಲಾಗುವ ಗಾಯಗಳು, ವಿವಿಧ ಹಂತದಲ್ಲಿ ಮದಗೊಂಡು ಹುಚ್ಚುಚ್ಚಾಗಿ ನಡವಳಿಕೆ ತೋರಿಸುವ ಆನೆಗಳ ಸ್ವಭಾವ ಮತ್ತು ಅದಕ್ಕೆ ಔಷದೋಪಚಾರ, ನೇತ್ರಸಂಬಂಧಿ ಕಾಯಿಲೆಗಳು, ಹೃದಯಸಂಬಂಧಿ ಕಾಯಿಲೆಗಳು, ಕುತ್ತಿಗೆ, ಕಾಲುಗಳ ಕೀಲಿನ ತೊಂದರೆ, ಗರ್ಭ ಇತ್ಯಾದಿಗಳೊಂದಿಗೆ ಪಳಗಿಸಲೆಂದು ಹೊಸದಾಗಿ ಹಿಡಿದ ಕಾಡು ಆನೆಗಳ ಸ್ವಭಾವ

ಹಾಗೂ ಅವುಗಳಿಗೆ ನೀಡಬೇಕಾದ ಆಹಾರದ ಕ್ರಮ ಮುಂತಾದ ಹಲವು ವಿಚಾರವನ್ನು ಈ ಕೃತಿ ತಿಳಿಸಿಕೊಡುತ್ತದೆ.

### ೩.೧.೨. ಪ್ರಾಸಂಗಿಕ ಶಾಸ್ತ್ರಕೃತಿಗಳು

ಕನ್ನಡದಲ್ಲಿ ಪ್ರಾಸಂಗಿಕವಾಗಿ ಗಜಶಾಸ್ತ್ರ ಉಲ್ಲೇಖಿತ ಕನ್ನಡ ಕೃತಿಗಳು ಲಭ್ಯವಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಚಾವುಂಡರಾಯನ ಲೋಕೋಪಕಾರ ಗ್ರಂಥವಾಗಿದೆ.

ಪ್ರಸ್ತುತ ಕೃತಿಯಲ್ಲಿ ೨ ಪದ್ಯಗಳು ಗಜಶಾಸ್ತ್ರಕ್ಕೆ ಮೀಸಲಾಗಿವೆ. ಆತನ ಪ್ರಕಾರ ಆನೆ ಬಲಿಷ್ಠ ಪ್ರಾಣಿ. ಇದಕ್ಕೆ ಬರುವ ರೋಗ ನಿವಾರಣೆಗಾಗಿ ೨೦ಕ್ಕಿಂತ ಅಧಿಕ ಗಿಡಮೂಲಿಕೆಗಳನ್ನು ಔಷಧಿಯಾಗಿ ಬಳಸಲು ನಿರ್ದೇಶಿಸುತ್ತಾನೆ. ಆದರೆ ರೋಗಗ್ರಸ್ತ ಆನೆಗೆ ಎಷ್ಟು ದಿನದವರೆಗೆ ಯಾವ ಪ್ರಮಾಣದಲ್ಲಿ ಔಷಧಿ ಕೊಡಬೇಕೆಂಬುದರ ವಿವರಣೆ ಇಲ್ಲ.

"ಮೆಣಸು, ವಿಳುಗ, ಕಳವಿಗೆ, ಚಿತ್ರಮೂಲ, ನಿಲಾಂಜನ, ರಾಶ್ಮೆ, ಕೋಷ್ಠ, ಬಜೆ, ಓಮ, ಇಂಗು, ಅತಿಬಜೆ, ಪಂಚಲವನ, ಸಾಸಿವೆ, ಜೀರಿಗೆ, ಶುಂಠಿ, ತ್ರಿಪಲಾ, ನೇರಳೆ, ತೊಗಟೆ, ಮೆಣಸಿನ ಬಳ್ಳಿ, ಹಿಪ್ಪಲಿ ಮೂಲ, ಹಲಗಿಲಬೇರು, ಕಹಿಪಡುವಲದ ಸಮೂಲ, ಈ ಮೂಲಿಕೆಗಳಿಂದ ಕುಟ್ಟಿ ತೆಗೆದ ರಸವನ್ನು ಆನೆಗಳಿಗೆ ಕುಡಿಸುವುದರಿಂದ ಸರ್ವವ್ಯಾಧಿಗಳು ಹೋಗುತ್ತವೆ. ಈ ಮೂಲಿಕೆಗಳ ಚೂರ್ಣವನ್ನು ಅಂಬಿಲದಲ್ಲಿ ಕದಡಿ ಆನೆಗಳಿಗೆ ಕುಡಿಸಿದರೆ ಶೂಲೆ, ಗುಲ್ಮ, ಕಿಮಿ, ಕೆಮ್ಮು, ಜಡತೆ, ಅರುಂಚಿ ಮೊದಲಾದ ರೋಗಗಳು ನಿವಾರಣೆಯಾಗುತ್ತವೆಂದು ತಿಳಿಸುತ್ತಾನೆ."[೭]

ಲೋಕೋಪಕಾರವೆಂದರೆ ಲೋಕಕ್ಕೆ ಉಪಕಾರವನ್ನುಂಟುಮಾಡುವ ವಿಚಾರಗಳನ್ನೊಳಗೊಂಡ ಕೃತಿ ಎಂದು ಸ್ವತಃ ಕೃತಿಕಾರನೇ ಹೇಳಿಕೊಂಡಿದ್ದಾನೆ. ಲೋಕೋಪಕಾರದಲ್ಲಿ ಒಟ್ಟು ಹನ್ನೆರಡು ಅಶ್ವಾಸಗಳಿವೆ. ಇವು ಕ್ರಮವಾಗಿ ಪಂಚಾಂಗ ಫಲ, ನವಪಟಲ, ವಾಸ್ತು ವಿಚಾರ, ಉತ್ಪಾತ ಶಾಂತಿ, ಉದಕಾರ್ಘಳ, ವೃಕ್ಷಾಯುರ್ವೇದ, ಗಂಧಯುಕ್ತಿ ಕ್ರಮ, ಸೂಪಶಾಸ್ತ್ರ, ವೈದ್ಯ, ವಿಷ ತತ್ವ, ಸರ್ವಲಕ್ಷಣ, ಶಕುನ ವಿಚಾರಗಳು ಕ್ರಮವಾಗಿ ನಿರೂಪಿತಗೊಂಡಿವೆ. 'ಇಲ್ಲಿ ನಿರೂಪಿತವಾದ ಅನೇಕ ಸಂಗತಿಗಳು ಸಂಸ್ಕೃತ ಮೂಲವನ್ನು ಅನುಸರಿಸಿ ಹೇಳಿದವುಗಳಾಗಿವೆ'[೮] ಕನ್ನಡ ಸಾಹಿತ್ಯದಲ್ಲಿ ಇಬ್ಬರು ಚಾವುಂಡರಾಯರು ಗೋಚರಿಸುತ್ತಾರೆ. ಮೊದಲನೆಯವನು ಗಂಗರಾಚಮಲ್ಲನ ಮಂತ್ರಿಯಾಗಿದ್ದ ತ್ರಿಷಷ್ಠಿ ಪುರಾಣ ತಿಲಕದ ಕರ್ತೃವೂ ಶ್ರವಣಬೆಳಗೊಳದ ಗೊಮ್ಮಟೇಶ್ವರನ ನಿರ್ಮಾತೃವೂ ಹಾಗೂ ಜೈನ ಪರಂಪರೆಯನ್ನು ಅನುಸರಿಸಿದ್ದ ಚಾವುಂಡರಾಯನಾಗಿದ್ದಾನೆ. ಲೋಕೋಪಕಾರದ ಕರ್ತೃ

ಚಾವುಂಡರಾಯನು ಶೈವ ಮತಾನುಯಾಯಿ. ಈ ಇಬ್ಬರ ಕಾಲವೂ ಭಿನ್ನವಾಗಿದೆ. ಚಾಲುಕ್ಯ ದೊರೆಯ ಆಸ್ಥಾನದಲ್ಲಿ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದವನು ಇವನು. ಚಾವುಂಡರಾಯನು ತನ್ನ ಕಾಲ ವಿಚಾರವನ್ನು

'ಇದು ಮುನಿವೇದಾಂಕ ಶಕಾ
ಬ್ಧದ ಕ್ರೋಧನವತ್ಸರ ಮೃಗಶೀರ್ಷದಸಿತಪ
ಕ್ಷದ ಬಿದಗೆಯ ಗುರುಪುಷ್ಯದೊ
ಳುದಿಸಿ ಲೋಕೋಪಕಾರವೆಂಸೆದುದು ಜಗದೊಳ್' (೧೨-೬೬)

ಎಂದು ಲೋಕೋಪಕಾರದಲ್ಲಿಯೇ ಹೇಳಿಕೊಂಡಿದ್ದಾನೆ. ಅಂದರೆ ಶಕ ವರ್ಷ ೯೪೭ರಲ್ಲಿ ಇವನು ಇದ್ದುದಾಗಿ ತಿಳಿದುಬರುತ್ತದೆ. ಅಂದರೆ ಕ್ರಿ.ಶ. ೧೦೨೫ ಆಗುತ್ತದೆ. 'ಇವನು ಬನವಾಸಿಯಲ್ಲಿಯೂ ಹಾಗೂ ಬೆಳಗಾವಿಯಲ್ಲಿಯೂ ತಾತ್ಕಾಲಿಕವಾಗಿ ರಾಜ್ಯವಾಳಿ ಕೆರೆ ಬಾವಿಗಳನ್ನು ದೇಗುಲಗಳನ್ನು ನಿರ್ಮಿಸಿದನೆಂದು ಹೇಳಲಾಗುತ್ತದೆ'.[೯] ಈ ಗ್ರಂಥದಲ್ಲಿ ಜನಸಾಮಾನ್ಯರಿಗೆ ಅವಶ್ಯವಾದ ವೃಕ್ಷಾಯುರ್ವೇದ ಇತ್ಯಾದಿ ವಿಚಾರಗಳನ್ನು ಹೇಳಿರುವಂತೆ ರಾಜನಿಗೆ ಸಂಬಂಧಿಸಿದ ವಿಚಾರಗಳನ್ನೂ ಪ್ರಸ್ತಾಪಿಸಲಾಗಿದೆ. ಮುಖ್ಯವಾಗಿ ಅರಮನೆಯ ವಿನ್ಯಾಸದ ವಾಸ್ತು ವಿಚಾರ, ಸೈನ್ಯಕ್ಕೆ ಅವಶ್ಯವಾದ ಆನೆ, ಕುದುರೆಗಳ ಲಕ್ಷಣ, ಅವುಗಳಿಗೆ ಬರುವ ರೋಗಗಳು, ರೋಗ ನಿವಾರಣಾ ಕ್ರಮ, ರಾಜನಿಗೆ ಒದಗಬಹುದಾದ ವಿಪತ್ತುಗಳು, ಅಂತಹ ವಿಪತ್ತುಗಳಿಂದ ಪಾರಾಗಲು ರಾಜನಾದವನು ಅನುಸರಿಸಬೇಕಾದ ವಿಧಾನ.

ಶಸ್ತ್ರಾಸ್ತ್ರಗಳ ಲಕ್ಷಣ, ಶಕುನ ಮುಂತಾದ ಹಲವಾರು ವಿಚಾರಗಳೂ ಪ್ರಸ್ತಾಪಿಸಲ್ಪಟ್ಟಿವೆ. ಈ ಕೃತಿ ಕಂದ ವೃತ್ತಗಳಲ್ಲಿ ರಚಿತವಾಗಿದೆ. ಒಟ್ಟು ಹನ್ನೆರಡು ಆಶ್ವಾಸ(ಅಧಿಕಾರ)ಗಳಿಂದ ಕೂಡಿದ ಈ ಗ್ರಂಥವು ಒಟ್ಟು ೯೩೮ ಪದ್ಯಗಳನ್ನೊಳಗೊಂಡಿದೆ.

ಈ ಕೃತಿಯ **ಪ್ರಥಮ ಪ್ರಕರಣದಲ್ಲಿ** 'ಪಂಚಾಂಗ ಫಲ ವರ್ಣನ'ವಿದ್ದು ಇದರಲ್ಲಿ ತಿಥಿ, ವಾರ, ಗ್ರಹ ನಕ್ಷತ್ರಾದಿ ವಿಚಾರಗಳೊಂದಿಗೆ ನವಗ್ರಹಗಳ ರಾಶಿ ಸ್ಥಾನ ಫಲ ಇತ್ಯಾದಿ ವಿಚಾರಗಳನ್ನು ಹೇಳಲಾಗಿದೆ. **ಎರಡನೇ ಆಶ್ವಾಸದಲ್ಲಿ** 'ನವಪಟಲ ವಿಚಾರ'ವಿದ್ದು ವಿವಾಹಾದಿ ಶೋಡಷ ಕರ್ಮಗಳನ್ನು ನೆರವೇರಿಸಲು ಅವಶ್ಯಕವಾದ ತಿಥಿ ಲಗ್ನ ನಕ್ಷತ್ರ ವಿಚಾರ ಮುಂತಾದವುಗಳನ್ನು ಪ್ರಸ್ತುತ ಪಡಿಸಲಾಗಿದೆ. **ಮೂರನೇ ಆಶ್ವಾಸದಲ್ಲಿ** 'ವಾಸ್ತು ಪ್ರಕರಣ'ವಿದ್ದು ಮನೆ ನಿರ್ಮಾಣದ ರೀತಿ ನೀತಿಗಳು ಹಾಗೂ ವಿಧಿ ನಿಷೇಧಗಳ ಕುರಿತು ತಿಳಿಸುದರೊಂದಿಗೆ ಪಾಯ ತೋಡುವ ಕಾಲ, ಬಾಗಿಲಿರಬೇಕಾದ ದಿಕ್ಕು, ಆಯ, ಅಡುಗೆ ಮನೆ, ಬಚ್ಚಲು

ಗಳಿರಬೇಕಾದ ದಿಕ್ಕು, ಮನೆಗೆ ಬಳಸಬೇಕಾದ ಮರಮುಟ್ಟುಗಳ ವಿಚಾರವನ್ನು ಹೇಳುವುದ ರೊಂದಿಗೆ ಅರಮನೆ ಕಟ್ಟಬೇಕಾದ ವಿಧಾನದ ಕುರಿತೂ ತಿಳಿಸಲಾಗಿದೆ. **ನಾಲ್ಕನೇ ಆಶ್ವಾಸ**ದಲ್ಲಿ 'ಉತ್ಪಾತಾಧಿಕಾರ'ದಲ್ಲಿ ಪ್ರಾಣಿ ಸಂಕುಲಕ್ಕೆ ಕೇಡು ತರುವ ಉತ್ಪಾತಕಗಳ ಕುರಿತು ತಿಳಿಸುವುದರೊಂದಿಗೆ ಅವುಗಳ ಪರಿಹಾರಾರ್ಥವಾಗಿ ಕೈಗೊಳ್ಳಬೇಕಾದ ಶಾಂತಿ ಕಾರ್ಯಗಳ ವಿಚಾರವನ್ನೂ ತಿಳಿಸಲಾಗಿದೆ. ಪ್ರಕೃತಿ ಸಹಜವಾದ ವಿಕೋಪಗಳನ್ನು ದಿವ್ಯ, ಅಂಬರ, ಭೌಮ ಎಂದು ಕರೆದಿದ್ದಾನೆ. ಗ್ರಹ ನಕ್ಷತ್ರಾದಿಗಳಿಂದ ಉಂಟಾಗುವ ಪರಿಣಾಮಗಳನ್ನು ದಿವ್ಯವೆಂದೂ, ಬಿರುಗಾಳಿ, ಬರಸಿಡಿಲು ಮುಂತಾದ ವಿಕೋಪಗಳನ್ನು ಅಂಬರದಲ್ಲಿಯೂ ಸ್ಥಾವರ ಜಂಗಮ ವಸ್ತುಗಳಲ್ಲಿ ವಿಕಾರಗಳಿಗೆ ಭೌಮವೆಂದೂ ಕರೆಯಲಾಗಿದೆ. **ಐದನೇ ಆಶ್ವಾಸ**ದಲ್ಲಿ 'ಉದಕಾರ್ಗಳ ಪ್ರಕರಣ'ದಲ್ಲಿ ಭೂಮಿಯೊಳಗೆ ಅಂತರ್ಗತವಾದ ಜಲ ವಿಚಾರವನ್ನು ಹೇಳಲಾಗಿದೆ. ಕೆರೆ ಸರೋವರಗಳ ನಿರ್ಮಾಣ ಕ್ರಮ, ಸ್ಥಳಗಳ ಆಯ್ಕೆ, ವೃಕ್ಷ ಮೂಲದಿಂದ ಅಂತರ್ಜಲ ಶೋಧನಾ ಕ್ರಮ, ಬಾವಿ ತೋಡುವ ರೀತಿ, ಕಣ ಶಿಲೆಯ ಮೂಲಕ ನೀರಿನ ರುಚಿ ತಿಳಿಯುವ ಕ್ರಮ, ಕಲ್ಲನ್ನು ಸೀಳುವ ಉಳಿ ತಯಾರಿಕಾ ಕ್ರಮ ಮುಂತಾದ ವಿಚಾರಗಳನ್ನು ಇಲ್ಲಿ ತಿಳಿಸಲಾಗಿದೆ. **ಆರನೇ ಆಶ್ವಾಸ**ದಲ್ಲಿ 'ವೃಕ್ಷಾಯುರ್ವೇದ'ವಿದ್ದು ಇದರಲ್ಲಿ ಕೃಷಿಸಂಬಂಧಿ ವಿಚಾರಗಳನ್ನು ಪ್ರಸ್ತಾಪಿಸಲಾಗಿದೆ. ಬೀಜಗಳ ಆಯ್ಕೆ, ಬೀಜ ಪರಿಷ್ಕರಣೆ, ಕೃಷಿ ಯೋಗ್ಯ ನೆಲದ ಆಯ್ಕೆ, ಗಳೆ ಹೊಡೆಯುವ ಗೊಬ್ಬರ ಹಾಕುವ ಕ್ರಮ, ತೋಟಗಾರಿಕೆಯಲ್ಲಿ ಸಸಿ ನೆಡುವುದು, ನೀರನ್ನು ಹಾಕುವ ವಿಧಾನ, ಸಸ್ಯಗಳಿಗೆ ತಗಲುವ ರೋಗ ಬಾದೆಗಳು ಕ್ರಿಮಿ ನಾಶಪಡಿಸುವ ಕ್ರಮ, ಪುಷ್ಪ ಕೃಷಿ ವಿಧಾನ, ಕಸಿ ಕಟ್ಟುವ ಕ್ರಮ ಇತ್ಯಾದಿ ವಿಚಾರಗಳಿಂದ ಈ ಪ್ರಕರಣ ಕೂಡಿದೆ. **ಏಳನೇ ಆಶ್ವಾಸ**ದಲ್ಲಿ 'ಗಂಧಯುಕ್ತಿ' ಕ್ರಮವಿದ್ದು ಇದು ಮನುಷ್ಯನ ದೇಹದಿಂದ ಹೊರಸೂಸುವ ದುರ್ಗಂಧ ಹಾಗೂ ಅದನ್ನು ಹೋಗಲಾಡಿಸಲು ಮಾಡಬೇಕಾದ ದೂಪಾದಿಕ್ರಮಗಳ ವಿವರವಿದೆ. **ಎಂಟನೇ ಆಶ್ವಾಸ**ದಲ್ಲಿ 'ಸೂಪಶಾಸ್ತ್ರ' ವಿಚಾರವಿದ್ದು ಮಾನವನ ದೇಹಕ್ಕೆ ಅವಶ್ಯವಾದ ಪೌಷ್ಠಿಕ ಆಹಾರ ತಯಾರಿಕಾಕ್ರಮ, ಮಾಡಿದ ಅಡುಗೆ ಕೆಡದಂತಿರಲು ಅನುಸರಿಸಬೇಕಾದ ವಿಧಾನ ಹಾಗೂ ವಿವಿಧ ರುಚಿಭರಿತ ಸಿಹಿ ತಿನಿಸುಗಳ ತಯಾರಿಕಾ ಕ್ರಮದ ಕುರಿತ ವಿಚಾರ ತಿಳಿಸಲಾಗಿದೆ. **ಒಂಭತ್ತನೇ ಆಶ್ವಾಸ**ದಲ್ಲಿ 'ನಾರಾದಿ ವೈದ್ಯ' ಪ್ರಕರಣವಿದೆ. ವೈದ್ಯದಲ್ಲಿ ಸಾಮಾನ್ಯ ವೈದ್ಯ, ಪುರುಷ ವೈದ್ಯ, ಸ್ತ್ರೀ ವೈದ್ಯ, ಬಾಲ ವೈದ್ಯ, ಗೋವೈದ್ಯ, ಗಜವೈದ್ಯ, ಅಶ್ವವೈದ್ಯ ಮುಂತಾದ ಉಪಶಾಖೆಗಳನ್ನೊಳಗೊಂಡಿದೆ. ರೋಗಗಳಿಗೆ ಮೂಲ ಕಾರಣ ವಾತ, ಪಿತ್ತ, ಕಫಗಳು ಕಾರಣವೆಂದು ತಿಳಿಸುತ್ತ ಅವುಗಳಿಂದ ಉಂಟಾಗುವ ರೋಗಾದಿಗಳ ವಿವರ ನೀಡಲಾಗಿದೆ. ಕಾಮಾಲೆ, ಸಿಡುಬು, ಸೀತಾಳೆ

ಸಿಡುಬು, ಆನೆಕಾಲು ರೋಗ, ಕುಷ್ಠ, ಗುಲ್ಮ, ರಕ್ತಪಿತ್ತ, ಮೂಲವ್ಯಾಧಿ, ವಾಂತಿ ಭೇದಿ, ಜಲರೋಗ, ಅತಿಸಾರ, ಕೆಮ್ಮು ದಮ್ಮು, ತಲೆಶೂಲಿ, ಅರೆ ತಲೆಶೂಲಿ, ಅಜೀರ್ಣ, ಗಂಡಮಾಲೆ, ಜಂತುಗಳ ಉಪಟಳ ಮುಂತಾದ ವಿವರಗಳಿವೆ. ಹಾಗೆಯೇ ಸ್ತ್ರೀಯರ ವಿವಿಧ ರೋಗಗಳು, ಬಾಲ ಮಕ್ಕಳಿಗೆ ಕಾಡುವ ರೋಗಗಳು ಇತ್ಯಾದಿ ವಿವರಗಳಿವೆ.

ಅದೇ ರೀತಿಯಾಗಿ ಗೋವೈದ್ಯದಲ್ಲಿ ಪಶುಗಳು ವಿವಿಧ ರೋಗಗಳಿಂದ ಬಳಲುವುದು, ಹೊಟ್ಟೆಯಲ್ಲಿಯೇ ಕರು ಸಾಯುವ ವಿಚಾರ, ಸತ್ತ ಕರುವನ್ನು ಹೊರತೆಗೆಯುವುದು, ಕಸ ಬೀಳುವುದು, ಮುಖ ಬಾವು, ಕಣ್ಣಲ್ಲಿ ಹೂವು ಕೂಡುವುದು, ಕಾಲುಬಾಯಿ, ಬಾಯಿಗೆರಸು ಇತ್ಯಾದಿ ೯೬ ಬಗೆಯ ರೋಗಗಳ ಕುರಿತು ತಿಳಿಸುವುದರೊಂದಿಗೆ ಅವುಗಳಿಗೆ ನೀಡಬೇಕಾದ ಔಷದೋಪಚಾರದ ಕುರಿತೂ ತಿಳಿಸಲಾಗಿದೆ.

**ಹತ್ತನೇ ಆಶ್ವಾಸದಲ್ಲಿ** 'ವಿಷ ವೈದ್ಯ'ದ ವಿವರಗಳಿವೆ. ವಿವಿಧ ಜಾತಿಯ ಹಾವುಗಳು, ಅವುಗಳ ಗುಣ ಸ್ವಭಾವ, ವಿಷದ ಪ್ರಮಾಣ, ವಿಷ ಪರಿಹಾರಕ್ಕೆ ಪ್ರಥಮ ಚಿಕಿತ್ಸೆ ಕ್ರಮ, ಮಂತ್ರೋಚ್ಚಾರಣೆಯ ಫಲ ಇತ್ಯಾದಿಗಳನ್ನು ತಿಳಿಸುವುದರೊಂದಿಗೆ ಚೇಳು, ಇಲಿ, ಹಲ್ಲಿ, ಕರಡಿ, ಹುಚ್ಚು ನಾಯಿ ಮುಂತಾದ ಪ್ರಾಣಿ ಕ್ರಿಮಿಗಳ ಕಚ್ಚುವಿಕೆಯಿಂದ ಉಂಟಾಗುವ ಪರಿಣಾಮಗಳ ಕುರಿತು ತಿಳಿಸುತ್ತ ನಷ್ಯ, ಪಾನ, ಲೇಪನ, ಅಂಜನ ಮುಂತಾದ ರೀತಿಯಲ್ಲಿ ಬೇರೆ ಬೇರೆ ರೀತಿಯ ಔಷಧೋಪಚಾರದ ಕುರಿತು ತಿಳಿಸಲಾಗಿದೆ. ಹಾಗೆಯೇ ಆನೆಯ ಶಕ್ತಿ ವೃದ್ಧಿಗೆ, ಮದಗೊಂಡ ಆನೆಯ ಸ್ಥಂಭನಕ್ಕೆ ಕೊಡಬೇಕಾದ ಆಹಾರ ಔಷಧಿಯ ಕುರಿತೂ ಇದರಲ್ಲಿ ತಿಳಿಸಲಾಗಿದೆ. **ಹನ್ನೊಂದನೆಯ ಆಶ್ವಾಸದಲ್ಲಿ** 'ಸರ್ವಲಕ್ಷಣ ಪರಿಹಾರ'ದ ಪ್ರಕರಣದಲ್ಲಿ ಸ್ತ್ರೀ ಪುರುಷರ ಅವಯವ ಸಂಬಂಧದ ಲಕ್ಷಣಗಳ ಫಲಾಫಲಗಳ ವಿವರಗಳನ್ನು ನೀಡಲಾಗಿದೆ. ಹಾಗೆಯೇ ಮನುಷ್ಯನು ಸಾಕುವ ಸಾಕುಪ್ರಾಣಿಗಳಾದ ಆನೆ, ಕುದುರೆ, ದನ, ಆಡು, ಕುರಿ, ಕೋಳಿ ಮುಂತಾದ ಪ್ರಾಣಿ ಪಕ್ಷಿಗಳ ಶುಭ ಲಕ್ಷಣಗಳ ಕುರಿತ ವಿವರಗಳೂ ಇದರೊಳಗಿದೆ. ಪುರುಷನ ಕಣ್ಣು ಹಣೆ ದೇಹದ ವಿವಿಧ ಅಂಗಗಳ ಲಕ್ಷಣ ಫಲಗಳ ವಿವರಗಳಿವೆ. ಸ್ತ್ರೀ ಲಕ್ಷಣಗಳ ವಿವರಗಳು, ದೇಹದ ಅಂಗಾಂಗಳ ಮೇಲೆ ಅವರ ಜಾತಿ ನಿರ್ಣಯಗಳ ವಿವರಗಳಿವೆ. ಹಾಗೆಯೇ ಪ್ರಾಣಿಗಳಾದ ಆನೆ ಕುದುರೆ, ದನ, ಕುರಿ, ಕೋಳಿ ಆಡು ನಾಯಿ ಮುಂತಾದ ಪ್ರಾಣಿಗಳ ಲಕ್ಷಣ ಫಲವನ್ನೂ ಇದರೊಳಗೆ ತಿಳಿಸಲಾಗಿದೆ. **ಹನ್ನೆರಡನೆ ಆಶ್ವಾಸದಲ್ಲಿ** 'ಶಕುನಾದಿಗಳ ವಿಚಾರ'ದಲ್ಲಿ ಶುಭ ಶಕುನ ಹಾಗೂ ಅಪಶಕುನಗಳ ಕುರಿತು ತಿಳಿಸುವುದರೊಂದಿಗೆ ಆಯಾಯ ಶಕುನಗಳಿಂದ ಉಂಟಾಗುವ ಫಲ ವಿಚಾರಗಳನ್ನು ತಿಳಿಸಲಾಗಿದೆ.

ಒಟ್ಟಾರೆಯಾಗಿ ಮನುಷ್ಯನ ಜೀವನಕ್ಕೆ ಅವಶ್ಯಕವಾದ ಹಾಗೂ ಹತ್ತಿರವಾದ ಎಲ್ಲ ವಿಚಾರಗಳ ವಿವರಣೆ ಹಾಗೂ ಪರಿಹಾರಗಳನ್ನು ಲೋಕೋಪಕಾರ ಕೃತಿ ಒಳಗೊಂಡಿದೆ ಎಂದು ಹೇಳಬಹುದು.

ಇಂಥದೇ ಮತ್ತೊಂದು ಮಹತ್ವದ ಕೃತಿ ಮಾನಸೋಲ್ಲಾಸ ಇದರಲ್ಲಿಯೂ ಗಜಶಾಸ್ತ್ರದ ವಿಚಾರಗಳು ಬರುತ್ತವೆ.

ಸೋಮೇಶ್ವರನ ಮಾನಸೋಲ್ಲಾಸ ಕೃತಿಯು ಆನೆಗಳ ಜನನ-ಲಕ್ಷಣ ಹಾಗೂ ಅವುಗಳನ್ನು ಸಂಬೋಧಿಸುವ ಬಗೆಗೆ ಮಾಹಿತಿ ನೀಡುತ್ತದೆ. ಅಗ್ನಿವಾಯುಗಳ ಅಂಶದಿಂದ ಹುಟ್ಟಿದ ಆನೆಯ ಜಾತಿಯನ್ನು "ಅಗ್ನಿಮಾರು ತಾಂಶ ಸಂಜಾತ" ಎಂಬ ಹೆಸರಿನಿಂದ ಕರೆಯುತ್ತಿದ್ದರು. "ಕಪ್ಪು ಬಣ್ಣದ ಮೈಕಾಂತಿ, ಬೆಳ್ಳನೆಯ ಕಣ್ಣು ಕಿವಿಗಳು, ಸೊದರ್ಗುಡಿಯಂತಿರುವ ಉಗುರುಗಳು, ಪುಷ್ಪಮಾಂಸ-ದೇಹದಿಂದೊಡಗೂಡಿದ್ದು, ಕೆರಳುವ ಸ್ವಭಾವ, ಅಂಕುಶದ ತಿವಿತವನ್ನು ಲಕ್ಷಿಸದಿರುವುದು ಈ ಆನೆಯ ಲಕ್ಷಣ.[೧೨] ಹಾಗೆಯೇ "ಸರ್ಪ ಸತ್ತ್ವಜ" ಎಂಬ ಆನೆಯು ವಿಶ್ವಾಸ ಘಾತಕ, ಕ್ರೂರಿ, ಕುಟಿಲಗಾಮಿ, ನಿರಾಂಕಾರಿ, ಮದಿಸಿರುವುದು ಆಗಿದ್ದರೆ; "ಸುಪ್ರತೀಕಾನ್ವಯ" ಎಂಬುದು ಪ್ರಚಂಡವೂ, ನೈದಿಲೆ ಬಣ್ಣದಿಂದಿರುವುದೂ, ಕಪೋತವರ್ಣದ ಕಣ್ಣು, ಶಾಂತ ಸ್ವಭಾವದ ಮೇಧಾವಿಯಾದ ಆನೆಯಾಗಿದೆ."[೧೩]

ಆನೆಗಳೊಂದಿಗೆ ಸಂಬೋಧಿಸುವಾಗ ಅದರದೇ ಆದ ಪರಿಭಾಷೆಯನ್ನು ಸೋಮೇಶ್ವರ ತಿಳಿಸುತ್ತಾನೆ. "ಹೇ, ಹೈಯ" ಅಂದರೆ ತನ್ನ ಸೊಂಡಿಲಿನಿಂದ ಬಡಿಯುವಂತೆ ಸೂಚಿಸುವ ಧ್ವನಿಸಂಜ್ಞೆ. ಹಾಗೆಯೇ "ಹಿಜ್ಜ ಹಿಜ್ಜ" ಅಂದರೆ ಕಟ್ಟು ಕಂಬದೆಡೆಗೆ ಹೋಗುವಂತೆ ಆನೆಗೆ ಸೂಚನೆ ನೀಡುವುದು. ಹೀಗೆ ಅನೇಕ ಸಂಗತಿಗಳನ್ನು ಮಾನಸೋಲ್ಲಾಸ ತಿಳಿಸುತ್ತದೆ.

ವಿಶ್ವಕೋಶ ಮಾದರಿಯಲ್ಲಿ ವಿವಿಧ ವಿಚಾರಗಳನ್ನು ಮಾನಸೋಲ್ಲಾಸವು ಪ್ರಸ್ತುತಪಡಿಸುತ್ತದೆ. ಡಾ. ಎಂ.ಎಂ. ಕಲಬುರ್ಗಿ ಅವರ ಸಂಪಾದನೆ ಮಾಡಿರುವ ಈ ಕೃತಿಯು ಗಜಗಳಿಗೆ ಸಂಬಂಧಿಸಿದಂತೆ ಹಲವು ಮಹತ್ವದ ಸಂಗತಿಗಳನ್ನು ತಿಳಿಸುತ್ತದೆ. 'ಮಾನಸೋಲ್ಲಾಸ ಗ್ರಂಥವನ್ನು ಕಲ್ಯಾಣ ಚಾಲುಕ್ಯರ ಅರಸು ವಿಕ್ರಮಾಂಕದೇವ ಚಂದಲಾದೇವಿಯರ ಮಗ ಮೂರನೆಯ ಸೋಮೇಶ್ವರ(ಕ್ರಿ.ಶ. ೧೧೨೭–೧೧೩೯) ರಚಿಸಿದ್ದಾನೆ. 'ಇವನ ತಂದೆಯ ೬೦ ವರ್ಷಗಳಷ್ಟು ಸುಧೀರ್ಘ ಆಳ್ವಿಕೆಯಲ್ಲಿ ಸಾಹಿತ್ಯ ಶಾಸ್ತ್ರ ವ್ಯಾಸಂಗದಲ್ಲಿ, ವಿದ್ಯಾವಿನೋದದಲ್ಲಿ ಕಳೆದನೆಂದು ತೋರುತ್ತದೆ'[೧೦] ಇವನ ನಿರಂತರ ಅಧ್ಯಯನದ ಫಲವಾಗಿ ಅಭಿಲಷಿತಾರ್ಥ ಚಿಂತಾಮಣಿ ಅಥವಾ ಮಾನಸೋಲ್ಲಾಸ ಕೃತಿ ಜನ್ಮ ತಾಳಿತು. ಮಾನಸೋಲ್ಲಾಸ ಕೃತಿಯ ಕರ್ತೃ ಕೆಲವೆಡೆ ತನ್ನ ಹೆಸರನ್ನು ಸೋಮೇಶ್ವರದೇವನೆಂದೂ, ಸೋಮೇಶ್ವರ ಕ್ಷಿತಿಪ, ಸೋಮಭೂಪಾಲ, ಸೋಮೇಶ್ವರ ಮುಂತಾಗಿ ಹೇಳಿಕೊಂಡಿದ್ದಾನೆ.

ಮಾನಸೋಲ್ಲಾಸವನ್ನು ಅಭಿಲಷಿತಾರ್ಥ ಚಿಂತಾಮಣಿ, ರಾಜ ಮಾನಸೋಲ್ಲಾಸ, ಮಾನಸೋಲ್ಲಾಸ ಎಂಬ ಮೂರು ಹೆಸರುಗಳಿಂದ ಗುರುತಿಸಲಾಗಿದೆ. ಜಗತ್ತಿಗೆ ಉಪಕಾರ ಮಾಡಲೆಂದೇ ಮಾನಸೋಲ್ಲಾಸ ಕೃತಿಯನ್ನು ರಚಿಸಿರುವುದಾಗಿ ಕೃತಿಕಾರ ಹೇಳಿಕೊಂಡಿದ್ದಾನೆ. ಶಾಲೀವಾಹನ ಶಕೆ ೧೦೫೧, ಸೌಮ್ಯ ಸಂವತ್ಸರ, ಚೈತ್ರ ಮಾಸ, ಶುಕ್ಲಪಕ್ಷ ಪ್ರತಿಪದೆಯ ಶುಕ್ರವಾರ ಈ ಕೃತಿಯನ್ನು ಬರೆಯಲು ಪ್ರಾರಂಭಿಸಲಾಯಿತು ಎಂದು ಹೇಳಿಕೊಳ್ಳಲಾಗಿದೆ. ಅಂದರೆ 'ಕ್ರಿ.ಶ. ೧೧೨೭ರಲ್ಲಿ ಪಟ್ಟಕ್ಕೆ ಬಂದ ಎರಡನೇ ವರ್ಷದಲ್ಲಿ ಕೃತಿ ರಚಿಸಿದ್ದಾನೆಂದು ತಿಳಿದುಬರುತ್ತದೆ'[೧೧]

ಮಾನಸೋಲ್ಲಾಸವನ್ನು ಐದು ವಿಶಂತಿಗಳಾಗಿ ವಿಭಾಗಿಸಲ್ಪಟ್ಟಿದೆ. ಪ್ರತಿಯೊಂದು ವಿಂಶತಿಯಲ್ಲಿ ೨೦ ಅಧ್ಯಾಯಗಳಿವೆ. ಒಟ್ಟು ೮೦೦೦ ಪದ್ಯಗಳನ್ನು ಈ ಕೃತಿ ಒಳಗೊಂಡಿದೆ. ಸಂಸ್ಕೃತ ಶಾಸ್ತ್ರ ಕೃತಿಗಳಿಂದ ಮಾಹಿತಿಯನ್ನು ಪಡೆದಿರಬಹುದೆಂಬ ಅಭಿಪ್ರಾಯವನ್ನು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ವಿವಿಧ ವಿಷಯಗಳನ್ನು ತಿಳಿಸುವ ಈ ಕೃತಿಯು ಶಾಸ್ತ್ರ ವಿನೋದ, ವಿವಿಧ ಬಗೆಯ ಸ್ತ್ರೀಯರು, ಮೃಗಾಯಾ ವಿನೋದ, ಪ್ರಾಣಿಗಳನ್ನು ಪಳಗಿಸುವ ಕ್ರಮ ಇತ್ಯಾದಿ ವಿಚಾರಗಳನ್ನು ತಿಳಿಸುತ್ತದೆ.

ಉದಾಹರಣೆಗೆ ಗಜ ವೈಹಾಳಿ ವಿನೋದ ಎಂಬ ಪ್ರಕರಣದಲ್ಲಿ ಆನೆಯಿಂದ ಅಟ್ಟಿಸಿಕೊಂಡು ಓಡುವ ಸ್ಪರ್ಧೆಯ ವಿವರಗಳಿವೆ. ರಾಷ್ಟ್ರಾಧ್ಯಾಯ ಪ್ರಕರಣದಲ್ಲಿ ಆನೆಗಳ ಭಾಷಾ ಸಂಜ್ಞೆಯ ತರಬೇತಿ ನೀಡುವ ಕ್ರಮವನ್ನು ತಿಳಿಸುತ್ತ ಕೂಡಲು, ನಿಲ್ಲಲು, ಸೊಂಡಿಲೆತ್ತಲು, ಇಳಿಸಲು ಆಜ್ಞೆ ಮಾಡುವಾಗ ಮಾವುತನು ಯಾವ ಭಾಷಾ ಸಂಜ್ಞೆಯನ್ನು ಬಳಸುತ್ತಾನೆಂಬ ವಿವರಗಳಿವೆ. ಈ ಕೃತಿಯ ಕೊನೆಯಲ್ಲಿ ಜನಸಾಮಾನ್ಯರು ಕೃತಿ ಓದುವುದರಿಂದ ಹಾಗೂ ಕೇಳುವುದರಿಂದ ನಾನಾ ನಮೂನೆಯ ಲಾಭಗಳನ್ನು ಪಡೆಯಬಹುದು ಎಂದು ಸ್ವತಃ ಕವಿಕಾರನೇ ಹೇಳಿದ್ದಾನೆ.

**ಕೆಳದಿ ನೃಪಾಲ ಬಸವರಾಜನ** 'ಶಿವತತ್ವ ರತ್ನಾಕರ'ವು ಈ ರೀತಿಯ ಶಾಸ್ತ್ರೀಯ ಗ್ರಂಥಗಳಲ್ಲಿ ಪ್ರಮುಖವಾದುದು. ಈ ಕೃತಿಯ ೧೧ನೇ ತರಂಗ ಗಜಶಾಸ್ತ್ರ ಸಂಕಲನವಾಗಿದೆ. ಒಟ್ಟು ೨೨೬ ಶ್ಲೋಕಗಳಿಂದ ಕೂಡಿದ ಅಧ್ಯಾಯದಲ್ಲಿ ಉತ್ತರ ಭಾರತದ ಅಸ್ಸಾಂ, ನರ್ಮದಾ ನದಿತೀರ, ಮಾಳವದೇಶ, ಕಳಿಂಗ ಇತ್ಯಾದಿ ಪ್ರದೇಶಗಳು ಆನೆಗಳ ಜನನ ಭೂಮಿಯೆಂದು ಹೇಳುತ್ತಾನೆ.

ಕಳಿಂಗದೇಶದ ಆನೆಗಳು ನವಿರಾದ ಕೂದಲು, ಮೃದುಚರ್ಮ, ಕೋಗಿಲೆ ಕಣ್ಣುಗಳಿಂದ; ಶೌರ್ಯದಿಂದ ಕೂಡಿದ ಮದಗಜ ಎತ್ತರವಾಗಿರುತ್ತದೆ. ಸೌರಾಷ್ಟ್ರದ ಆನೆಗಳು ಚರ್ಮ, ಪಾದ, ಉಗುರು, ಕಿವಿಗಳು ಒರಟಾಗಿರುತ್ತವೆ.

"ಭದ್ರ, ಮಂದ್ರ, ಮೃಗ ಎಂಬ ಮೂರು ಜಾತಿಯ ಆನೆಗಳನ್ನು ಉಲ್ಲೇಖಿಸುವ ಈತನು ೫ ಮೊಳ ಎತ್ತರ, ೭ ಮೊಳ ಉದ್ದ, ೮ ಮೊಳ ಸುತ್ತಳತೆಯ ಆನೆ ಮೃಗ ಜಾತಿಯೆಂತಲೂ, ಮೃಗಜಾತಿಯ ಆನೆಗಿಂತ ಒಂದು ಮೊಳ ಹೆಚ್ಚಾದರೆ ಭದ್ರಜಾತಿಯೆಂತಲೂ, ಮುಂದೆ ೨ ಮೊಳ ಹೆಚ್ಚಾದರೆ ಮಂದ್ರಜಾತಿ ಆನೆಯೆಂದು ಹೇಳುತ್ತಾನೆ. ಭದ್ರ ಬೆಟ್ಟದಲ್ಲಿ, ಮಂದ್ರ ಕೊಳದಲ್ಲಿ, ಮೃಗ ಕಾಡಿನಲ್ಲಿ ಸಂಚರಿಸುತ್ತವೆಂದು ವಿವರಿಸಲಾಗಿದೆ."[೪] ಈ ಮೂರು ಜಾತಿ ಆನೆಗಳಲ್ಲದೆ "ಪ್ರಜಾಪ್ರತ್ಯಂಶಕ" "ಇಂದ್ರಾಂಶ" "ಧನದಾಂಶ"ಗಳೆಂಬ ಆನೆಗಳನ್ನು ಕುರಿತು ಪ್ರಸ್ತಾಪಿಸುತ್ತಾನೆ. ಹೆಸರೇ ಸೂಚಿಸುವಂತೆ ಪ್ರಜಾಭಿವೃದ್ಧಿಕಾರಕವಾದ ಆನೆ ಪ್ರಜಾ ಪ್ರತ್ಯಂಶವಾದರೆ, ಯುದ್ಧ ವಿಜಯಿ-ಸಂಪತ್ತು ತಂದುಕೊಡುವುದು "ಇಂದ್ರಾಂಶ", ಧನ ಮತ್ತು ರತ್ನಗಳ ವೃದ್ಧಿಕಾರಕವಾದ ಆನೆ ಧನಾಂಶಕವೆಂದು ಹೇಳುವುದಲ್ಲದೆ, ೧೦ರಿಂದ ೧೪ ವರ್ಷದ ಆನೆಗಳು ಬಳಕೆಗೆ ಉತ್ತಮ ಆದರೆ ೭೦ರ ನಂತರದ ವಯಸ್ಸಿನ ಆನೆಗಳು ಕೆಲಸಕ್ಕೆ ಅಯೋಗ್ಯವಾದವುಗಳು.

ಆನೆಯ ದೇಹದ ಕ್ಷೇತ್ರಗಳ ಬಗ್ಗೆ ಇಲ್ಲಿ ವಿವರಣೆ ಬರುತ್ತದೆ. ಹಾಗೆಯೇ, ತ್ವಗ್ಜ, ದಶನಭಗ್ನಜ, ಕೇಶಜ, ಪಕ್ಷಜಾತಜ, ವಾಲಜ, ರೋಮಜ ಎಂಬ ಆರು ಸುಳಿಗಳು (ಆವರ್ತಗಳು) ಇರುತ್ತವೆ. ಇವುಗಳಲ್ಲಿ ಕೇಶಜ ಮತ್ತು ಭಗ್ನಜ ಸುಳಿ ಇರುವ ಆನೆ ಶುಭದಾಯಕ. ಇನ್ನು ದೇಹದ ಬೇರೆ ಬೇರೆ ಭಾಗಗಳಲ್ಲಿರುವ ಸುಳಿಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆ. ಪ್ರವಾಹಗಳನ್ನು ತಡೆಯಲು, ಆರು ಸಾವಿರ ಕುದುರೆಗಳನ್ನು ಒಂದೇ ಆನೆ ಗೆಲ್ಲುತ್ತದೆಂಬ, ಗೋಡೆ-ಗೋಪುರ, ಹೆಬ್ಬಾಗಿಲುಗಳನ್ನು ತೆಗೆಯುವ ಇಲ್ಲವೇ ಭಗ್ನ ಗೊಳಿಸುವುದು ಆನೆಗಳಿಗೆ ದೊಡ್ಡದೇನಲ್ಲ. ಹೀಗಾಗಿ ಇವು ಸಂಪತ್ತಿನ ಬಹುಮುಖ್ಯ ಭಾಗವೆನಿಸಿವೆ.

ಕೆಳದಿಯ ಅರಸನಾದ ಬಸವರಾಜನನ್ನು ರಾಣಿ ಚೆನ್ನಮ್ಮನು ಕ್ರಿ.ಶ. ೧೬೭೫ರಲ್ಲಿ ದತ್ತು ತೆಗೆದುಕೊಂಡಳೆಂಬುದು ಚರಿತ್ರೆಯ ಮೂಲಕ ತಿಳಿದುಬರುತ್ತದೆ. ಬಸವರಾಜನು ಶಿವತತ್ವರತ್ನಾಕರ ಕೃತಿಯನ್ನು ಬರೆಯಲು ಯಾವ ಯಾವ ಗ್ರಂಥಗಳಿಂದ ವಿಷಯ ಸಂಗ್ರಹಿಸಿದೆನೆಂದು ಕೃತಜ್ಞತೆಯಿಂದ ಕೃತಿಕಾರರು ಹಾಗೂ ಆ ಕೃತಿಗಳ ಕುರಿತು ನೆನೆಯುತ್ತಾನೆ. ಇಲ್ಲಿ ಉಲ್ಲೇಖಿತಗೊಂಡ ಕೃತಿಗಳಲ್ಲಿ ಕೆಲವು ಉಪಲಬ್ಧವಿಲ್ಲ. ತಾನು ಮಾನಸೋಲ್ಲಾಸಕ್ಕೆ ತುಂಬಾ ಋಣಿಯಾಗಿರುವುದಾಗಿ ಬಸವರಾಜನು ನೆನೆಯುತ್ತಾನೆ. ಶಿವತತ್ವ ರತ್ನಾಕರವನ್ನು ಬಸವರಾಜೀಯ ಎಂಬ ಮತ್ತೊಂದು ಹೆಸರಿನಿಂದಲೂ ಕರೆಯಲಾಗುತ್ತದೆ. ಶಿವತತ್ವ ರತ್ನಾಕರ ಕೃತಿಯನ್ನು ಎರಡು ಬಾರಿ ಮುದ್ರಿಸಿದ್ದರೆಂದು ಶಿವತತ್ವ ರತ್ನಾಕರರ ಸಂಪಾದಕರಾದ

ಮಲ್ಲೇಪುರಂ ಜಿ. ವೆಂಕಟೇಶ ಅಭಿಪ್ರಾಯಪಡುತ್ತಾರೆ. ೧೯೨೭ರಲ್ಲಿ ಬೆನಗಲ್ ರಾಮರಾವ್ ಮತ್ತು ಪಾನ್ಯಂ ಸುಂದರಶಾಸ್ತ್ರಿಗಳು ಸಂಪಾದಿಸಿದ ಶಿವತತ್ವ ರತ್ನಾಕರ ಕೃತಿಯನ್ನು ಮದ್ರಾಸಿನಲ್ಲಿ ಮುದ್ರಿಸಲಾಗಿದೆ. ತರುವಾಯ ಇದೇ ಕೃತಿಯನ್ನು ಮೈಸೂರಿನ ಪ್ರಾಚ್ಯ ವಿದ್ಯಾ ಸಂಸ್ಥೆಯವರು(೧೯೬೪) ಮುದ್ರಿಸಿದ್ದಾರೆ. ತರುವಾಯ ೧೯೮೫ರಲ್ಲಿ ಪಿ. ಮರಿಬಸವಾರಾಧ್ಯ ಇವರು ಪರಿಷ್ಕರಿಸಿ ಸಂಪಾದಿಸಿದ್ದಾರೆ. ಸಂಪಾದಕ ಮಲ್ಲೇಪುರಂ ಜಿ. ವೆಂಕಟೇಶ ಅವರು ಇದೇ ಕೃತಿಯನ್ನು ಪರಿಷ್ಕರಿಸಿ ೧೯೯೯ರಲ್ಲಿ ಕನ್ನಡ ವಿಶ್ವವಿದ್ಯಾಲಯ ಹಂಪಿ ಪ್ರಸಾರಾಂಗದಿಂದ ಪ್ರಕಟಿಸಿದ್ದಾರೆ. ಹೀಗೆ ಅನೇಕ ಜನ ಸಂಪಾದಕರ ಪರಿಷ್ಕರಣೆಗೆ ಒಳಪಟ್ಟು ಹೊರಬಂದಿರುವ ಶಿವತತ್ವರತ್ನಾಕರ ಕೃತಿಯು ಹಲವು ಕಾರಣಗಳಿಗಾಗಿ ಮಹತ್ವದ ಶಾಸ್ತ್ರೀಯ ಗ್ರಂಥವಾಗಿದೆ. ಈ ಕೃತಿಯು ಹಲವು ಶಾಸ್ತ್ರಗಳನ್ನು ತಿಳಿಸುವ ವಿಶ್ವಕೋಶದಂತಿದೆ. ಇದರೊಳಗಿನ ಒಂದೊಂದು ಶಾಸ್ತ್ರಕ್ಕೆ ಸಂಬಂಧಿಸಿದ ವಿಚಾರಗಳನ್ನೂ ಬೇರೆ ಬೇರೆ ಗ್ರಂಥಗಳಿಂದ ಆಯ್ದುಕೊಳ್ಳಲಾಗಿದೆಯಂದು ಸ್ವತಃ ಕೃತಿಕಾರನೇ ಹೇಳಿದ್ದಾನೆ. ಔಷಧಿ, ಯುದ್ಧಕಲೆ, ಗಜಶಾಸ್ತ್ರ, ಅಶ್ವಶಾಸ್ತ್ರ ಮುಂತಾದ ಹಲವು ವಿಷಯಗಳಿಂದ ಈ ಕೃತಿ ಇಡಿಕಿರಿದಿದೆ.

ಕ್ರಿ.ಶ. ೧೧೨೫ರಲ್ಲಿದ್ದ ಚಂದ್ರರಾಜನು **ಮದನತಿಲಕ** ಎಂಬ ಕೃತಿಯನ್ನು ರಚಿಸಿದ್ದಾನೆ. ಈ ಕೃತಿಯನ್ನು ಆರ್.ಎಸ್. ಪಂಚಮುಖಿ ಸಂಪಾದಿಸಿದ್ದು ಈ ಕೃತಿಯಲ್ಲಿ,

'ಸಕಲ ವ್ಯಾಕರಣಾರ್ಥಶಾಸ್ತ್ರ ಗಣಿತಾಲಂಕಾರ ಸತ್ಕಾವ್ಯ ನಾ
ಟಕ ವಾತ್ಸ್ಯಾಯನ ನೃತ್ಯ ಗೀತ ಹಯಶಾಸ್ತ್ರ ದ್ವೈತಗಂಧರ್ವಾತಾ
ರ್ಕಕವಿಂದ್ರಾಗಮ ವೈದ್ಯ ವಾದ್ಯ ಶಕುನೋದ್ಯದ್ವದ್ಯ ವಿದ್ಯಾಕದಂ
ಬಕಮಂ ಚಂದ್ರ ಕವೀಂದ್ರನೋರ್ವನೆ ವಲಂ ಬಲ್ಲಂ ಪೆರರ್ ಬಲ್ಲರೇ'[೨೫] (೧–೫೧)

ಎಂದು ತಿಳಿಸುತ್ತಾನೆ. ಇದ್ದರಿಂದ ವ್ಯಾಕರಣಶಾಸ್ತ್ರ, ಅರ್ಥಶಾಸ್ತ್ರ, ಗಣಿತಶಾಸ್ತ್ರ, ನಾಟಕ, ವಾತ್ಸ್ಯಾಯನ, ನೃತ್ಯಗೀತಾ, ಪಯಶಾಸ್ತ್ರ, ವೈದ್ಯಶಾಸ್ತ್ರ, ವಾದ್ಯಶಾಸ್ತ್ರ ಇತ್ಯಾದಿ ಶಾಸ್ತ್ರಗಳ ತಿಳುವಳಿಕೆ ತನಗಿತೆಂದು ಚಂದ್ರರಾಜ ಹೇಳಿಕೊಂಡಿದ್ದಾನೆ. ಹೀಗೆ ವಿವಿಧ ವಿಷಯಗಳನ್ನೊಳ ಗೊಂಡ ವಿಶ್ವಕೋಶದಂತೆ ಈ ಕೃತಿ ಗೋಚರಿಸುತ್ತದೆ. ಈ ಕೃತಿಯು ೧೮ ಅಧಿಕರಣಗಳನ್ನು ಒಳಗೊಂಡಿದ್ದು ೫೦೦ ಗದ್ಯಪದ್ಯಗಳಿಂದ ಕೂಡಿದೆ ಎಂದು ಸ್ವತಃ ಕವಿಯೇ ಒಂದು ಕಡೆ ಪ್ರಸ್ತಾಪಿಸಿದ್ದಾನೆ.

**ಕೃಷ್ಣರಾಜ ಒಡೆಯರಿಂದ** ರಚಿಸಲ್ಪಟ್ಟ **ಸೌಗಂಧಿಕಾ ಪರಿಣಯ** ಈ ಕೃತಿಯಲ್ಲಿ ೧೪ನೆಯ ಆಶ್ವಾಸ ಗಜಪಣಕ್ಕೆ ಮೀಸಲಾಗಿದೆ. ಚಿತ್ರಸಮೇತ ೫೬ ಆನೆಗಳನ್ನು ಉಲ್ಲೇಖಿಸುವ ಈ

ಕೃತಿ ಭದ್ರ, ಮಂದ್ರ, ಮೃಗ ಎಂತಲೂ ಈ ಮೂರು ಜಾತಿಯಲ್ಲಿ ಯಾವುದಾದರೂ ೨ ಇಲ್ಲವೇ ೩ ಜಾತಿಗಳ ಸಮಿಶ್ರಣ "ಮಿಶ್ರ ಜಾತಿ" ಎಂತಲೂ ಹೇಳುತ್ತಾನೆ. ಬೆಳವಣಿಗೆಯನ್ನು ಗುರುತಿಸುವಾಗ ೧೦, ೨೦, ೩೦ ಹಾಗೂ ೬೦ ವರ್ಷ ಆನೆಯೆಂದು ಹೇಳುವುದುಂಟು, ವೈವಿಧ್ಯತೆಯಿಂದ ಪಟ್ಟದಾನೆ, ಬಿಳಿಯಾನೆ, ಒಂಟಿದಂತ ದಾನೆ, ಕರ್ನಾಟಕ ದೇಶದ ಆನೆ, ಮಲಯಾಳ ದೇಶದ ಆನೆ, ನೇಪಾಳ ದೇಶದ ಆನೆ ಇತ್ಯಾದಿ ತಿಳಿಸುತ್ತಾನೆ.

"ಕೃಶವಾದ, ದೀರ್ಘವಾದ, ಜೋಲುವ ಕತ್ತು, ಬಗ್ಗಿದ ಹೆಗಲು, ನಡೆಯುವಾಗ ಕಾಲು ಮಸೆಯುವ, ಕಿವಿ-ಬಾಲ-ಶಿಶ್ನ ಉದ್ದವಾದ, ಸೊಂಡಿಲು ಸಣ್ಣದಾದ ಆನೆ ಪಟ್ಟಕ್ಕೆ ಅಯೋಗ್ಯವಾದದ್ದು. ಕೃಶವಲ್ಲದ, ತಾಳಪತ್ರದಂತಹ ನಗಾರೆಯಂತೆ ಇರುವ ಕಿವಿಗಳು, ಧನಸ್ಸಿನಂತೆ ಬಗ್ಗಿರುವ ಬೆನ್ನು ಮೂಳೆ, ವಿಸ್ತಾರವಾದ ಎದೆ, ಸಣ್ಣ ಹೊಟ್ಟೆಯಿಂದ ಕೂಡಿದ ಆನೆ ಪಟ್ಟಕ್ಕೆ ಯೋಗ್ಯವಾದದ್ದು."[೧೬]

ಆನೆಗಳ ದೈಹಿಕವಾದ ಕೆಲವು ವಿಶೇಷಗಳಲ್ಲಿ ಚರ್ಮ, ಮುರಿದ ದಂತಗಳ ಕೊನೆ, ಮಸ್ತಕದ ಕೂದಲುಗಳಲ್ಲಿ, ಬಿಂದುಗಳಲ್ಲಿ, ಬಾಲದಲ್ಲಿ ಸುಳಿಗಳು ಇರುತ್ತವೆ. ಶುಭದಾಯಕ ಸುಳಿಗಳೆಂದರೆ ಮಸ್ತಕದ ಕೂದಲು, ದಂತಗಳ ಕೊನೆಯ ರೋಮಗಳಲ್ಲಿ ಇರುವಂಥವು. ಅಶುಭದಾಯಕ ಸುಳಿಗಳೆಂದರೆ ಚರ್ಮದ ಬಿಂದು, ಬಾಲದಲ್ಲಿರುವುವು. ಇನ್ನೂ ಅನೇಕ ಶುಭಾಶುಭಗಳ ಬಗ್ಗೆ ಈ ಕೃತಿಯಲ್ಲಿ ಚರ್ಚಿಸಲಾಗಿದೆ.

ಕೆಳದಿ ಬಸವರಾಜನ "ಶಿವತತ್ತ್ವ ರತ್ನಾಕರ"ದ ವಿಚಾರವನ್ನೇ ಹೆಚ್ಚು ಹೋಲುವ ಮುಮ್ಮಡಿಯವರ "ಸೌಗಂಧಿಕಾ ಪರಿಣಯ" ಪ್ರಾಯಶಃ ಶಿವತತ್ತ್ವ ರತ್ನಾಕರವನ್ನು ಆಧಾರವಾಗಿಟ್ಟುಕೊಂಡು ರಚನೆಯಾದಂತಿದೆ. ಅಲ್ಲಿಯ ೨೨೬ ಶ್ಲೋಕಗಳನ್ನು ಬಿಟ್ಟು ಅವುಗಳ ವಿವರಣೆಯನ್ನು ಮಾತ್ರ ಬಳಸಿಕೊಂಡಂತಿದೆ.

ಈ ಗದ್ಯ ಕೃತಿಯು ಸುಗಂಧರಾಜ ಹಾಗೂ ಸೌಗಂಧಿಕಾ ದೇವಿಯರ ಪರಿಣಯದ ಕಥೆಯನ್ನು ವಿವರಿಸುವ ಕೃತಿ. ಈ ಕೃತಿಯೊಳಗೆ ಸೌಗಂಧಿಕಾ ದೇವಿಯು ಗಜಗೌರಿ ವ್ರತವನ್ನು ಕೈಗೊಂಡು ವ್ರತಕ್ಕೆ ಅವಶ್ಯವಾದ ಕೆಲವು ಬೇಡಿಕೆಗಳನ್ನು ಸುಗಂಧರಾಜನ ಮುಂದಿರಿಸುತ್ತಾಳೆ. ಇವಳ ಮಾತನ್ನು ಪೂರೈಸಲು 'ವಿದ್ಯಾಗುರುವಾದ ವಿದ್ಯಾಸಾಗರನಂ ಕರೆಸಿ ಗಜಗೌರಿ ವ್ರತಕ್ಕೆ ಒಂದು ಸುಲಕ್ಷಣವಾದ ಆನೆಯ ಅವಶ್ಯಕತೆ ಇದೆ, ಆದಕಾರಣ ಮದಗಜವನ್ನು ತಂದುಕೊಡಬೇಕು. 'ಉತ್ತಮ ಗಜವೆಂತಿರುವುದು, ಪೂಜಾಯೋಗ್ಯವಾವುದು, ಪಟ್ಟಕ್ಕೆ ಯೋಗ್ಯಂಗಳಾವುದು ಅದರ ಲಕ್ಷಣವನ್ನು ಸುಲಕ್ಷಣವಾಗಿ ಪೇಳಬೇಕೆನಲು'[೧೭] ವಿದ್ಯಾಸಾಗರನು ಉತ್ತಮ ಗಜ ಲಕ್ಷಣಗಳ ವಿವರ ಮುಂತಾದವುಗಳನ್ನು ಹೇಳಿದಂತೆ ಕಥೆ

ಸಾಗುತ್ತದೆ. ಸೌಗಂಧಿಕಾ ಪರಿಣಯದಲ್ಲಿ ಆನೆಯು ಜನಿಸುವ ಸ್ಥಳಗಳು, ಆಹಾರ, ಉತ್ತಮ, ಅಧಮ ಹಾಗೂ ಮಿಶ್ರ ಜಾತಿಯ ಆನೆಗಳಾವುವು, ಆನೆಯ ಆರೋಗ್ಯ, ಔಷಧೋಪಚಾರ ಇತ್ಯಾದಿ ವಿವರಗಳು ಇವೆ. ಒಂದು ದೃಷ್ಟಿಯಿಂದ ಸುಗಂಧರಾಜ, ಸೌಗಂಧಿಕಾ ದೇವಿಯರ ಪ್ರಣಯ ಕಥೆಯನ್ನೊಳಗೊಂಡ ಕೃತಿಯಂತೆ ಮೇಲ್ನೋಟಕ್ಕೆ ಕಂಡುಬಂದರೂ ಶಾಸ್ತ್ರೀಯವಾದ ವಿಚಾರಗಳನ್ನು ಒಳಗೊಂಡ ಶಾಸ್ತ್ರೀಯ ಗ್ರಂಥ ಇದಾಗಿದೆ ಎಂಬುದು ತಿಳಿದುಬರುತ್ತದೆ. ಇದುವರೆಗಿನ ಪ್ರಾಚೀನ ಸಾಹಿತ್ಯದಲ್ಲಿ ಉಲ್ಲೇಖಿತಗೊಂಡ ಆನೆಗಳ ಮಾಹಿತಿಗಳು ಶಾಸ್ತ್ರ ಮರ್ಯಾದೆಯನ್ನು ಪಡೆದುಕೊಂಡಿವೆ ಯೆಂಬುದು ಅನುಲಕ್ಷಿಸಬೇಕಾದ ಸಂಗತಿ. ಆನೆಗಳ ಕುರಿತಾದ ಪ್ರಾಚೀನ ಕವ್ಯಗಳು ಅಲ್ಲಲ್ಲಿ ಆನೆಗಳ ಚಲನವಲನಗಳನ್ನು ತಿಳಿಸುವ ಮಹತ್ವದ ಮಾಹಿತಿಯನ್ನು ನೀಡುತ್ತದೆ. ಅವುಗಳನ್ನಿಲ್ಲಿ ಸಮೀಕ್ಷಿಸಬಹುದು.

### ೩.೧.೩. ಕನ್ನಡ ಕಾವ್ಯಗಳು

ಇದುವರೆಗಿನ ಗಜಶಾಸ್ತ್ರ ಕುರಿತಂತೆ ಪ್ರಧಾನಶಾಸ್ತ್ರ ಕೃತಿಗಳು ಪ್ರಾಸಂಗಿಕಶಾಸ್ತ್ರ ಕೃತಿಗಳು ಪ್ರಾಚೀನ ಸಾಹಿತ್ಯದಲ್ಲಿ ಉಲ್ಲೇಖಿತಗೊಂಡ ಆನೆಗಳ ಮಾಹಿತಿಗಳು ಶಾಸ್ತ್ರಮರ್ಯಾದೆಯನ್ನು ಪಡೆದುಕೊಂಡಿವೆಯೆಂಬುದು ಅನುಲಕ್ಷಿಸಬೇಕಾದ ಸಂಗತಿ.

ಋಗ್ವೇದದಲ್ಲಿ ಆನೆಯ ಉಲ್ಲೇಖವಿದೆ. ಮೃಗ, ಹಸ್ತಿನ್, ಇಭ, ವಾರಣ ಪದಗಳನ್ನು ಆನೆಗೆ ಪರ್ಯಾಯವಾಗಿ ಬಳಸಲಾಗಿದೆ. ಎರಡು ಆನೆಗಳು ತಲೆತಗ್ಗಿಸಿ ಶತ್ರುವಿನ ವಿರುದ್ಧ ಆಕ್ರಮಣ ಮಾಡುವ ವಿವರಗಳು ವೇದದಲ್ಲಿದೆ.[೧೮]

ಅಥರ್ವ ವೇದದಲ್ಲಿ ಆನೆಯ ಬಗೆಗೆ ಮಾಹಿತಿಗಳಿವೆ. ಕ್ರಿ.ಶ. ೯೦೦ರ ವೇಳೆಗೆ ರಚನೆಯಾದ ಅಗ್ನಿಪುರಾಣದಲ್ಲಿ ಆನೆಯ ಮೇಲೆ ಆರು ಜನ ಇರುವ ಉಲ್ಲೇಖ ದೊರೆಯುತ್ತದೆ.

ಭಾರತೀಯರ ಪುರಾಣ ಗ್ರಂಥಗಳಾದ ರಾಮಾಯಣ ಮತ್ತು ಮಹಾಭಾರತಗಳಲ್ಲಿ ಆನೆಗಳ ಉಲ್ಲೇಖ ದೊರೆಯುತ್ತದೆ. 'ಆ ಕಾಲದಲ್ಲಿ ಆನೆಗಳನ್ನು ರಕ್ಷಿಸಿ ಬೆಳೆಸಲು ಮತ್ತು ಅವುಗಳ ಸಂಖ್ಯೆಯನ್ನು ವೃದ್ಧಿಪಡಿಸಲು ನಾಗವನ(ನಾಗ=ಗಜ) ಎಂಬ ರಕ್ಷಣಾಧಾಮಗಳನ್ನು ಹೊಂದಿದ್ದರು. ದಂಡಕಾರಣ್ಯದಲ್ಲಿ ರಾಮನನ್ನು ಕರೆತರಲು ಭರತನು ಹೋದಾಗ ಚಿತ್ರಕೂಟ ಆಶ್ರಮದಲ್ಲಿ ಭೇಟಿಯಾದ ಭರತನಿಗೆ ರಾಮನು ನಾಗವನ್ನು ಸರಿಯಾಗಿ ನೋಡಿಕೊಳ್ಳ ಲಾಗುತ್ತದೆಯೆ ಎಂದು ವಿಚಾರಿಸಿದನಂತೆ. ರಾಮ ರಾವಣರ ಯುದ್ಧದಲ್ಲಿ ರಾವಣನ ಸೈನ್ಯವು ಸಾವಿರಾರು ಆನೆಗಳನ್ನು ಹೊಂದಿತ್ತು ಎಂದು ಉಲ್ಲೇಖಿಸಲಾಗಿದೆ'.[೧೯]

ಸಂಸ್ಕೃತದ ಮಹಾನ್ ಕವಿ ಕಾಳಿದಾಸನ ಕಾವ್ಯಗಳಲ್ಲಿ ಆನೆಗಳ ಕುರಿತಾಗಿ ಪ್ರಾಸಂಗಿಕವಾಗಿ ವರ್ಣನೆಗಳಿವೆ. ಇವನ ಶಾಕುಂತಲಾ ನಾಟಕದಲ್ಲಿ ದುಷ್ಯಂತನು ಶಾಕುಂತಲೆಗೆ ಮಳೆಗಾಲದ ಸನ್ನಿವೇಶವೊಂದರ ಕುರಿತು ಹೇಳುವ ಮಾತುಗಳು ಹೀಗಿವೆ. 'ಮೋಡಗಳು ಚಲಿಸುತ್ತಿವೆ, ನದಿಗಳು ಜುಳು ಜುಳು ನಾದ ಮಾಡುತ್ತ ಹರಿಯುತ್ತಿವೆ. ಮದ್ದಾನೆಗಳು ಮೊಳಗುತ್ತಿವೆ. ಅರಣ್ಯಗಳು ಕಾಂತಿಯಿಂದ ಕೂಡಿವೆ. ನವಿಲುಗಳು ನರ್ತಿಸುತ್ತಿವೆ. ಕಪಿಗಳು ಮರದ ಆಸರೆಗೆ ಹೋಗಿವೆ. ಹಾಗೆಯೇ ಪ್ರೇಮಿಗಳ ಹೃದಯಗಳು ಒಂದುಗೂಡುತ್ತಿವೆ'[೨೦] ಎಂದು ಹೇಳುತ್ತಾನೆ. ಮೇಘದೂತದಲ್ಲಿ ಮದಗಜದ ಕುರಿತು ಹೀಗೆ ಹೇಳಲಾಗಿದೆ. 'ನಳಗಿರಿ ಮದಗಜವು ಹುಚ್ಚೆದ್ದು ಕಟ್ಟಿದ ಕಂಬವನ್ನೇ ಕಿತ್ತುಹಾಕಿದೆ. ಈಗ ಆನೆ ಲಾಯದೊಳಗೆ ರಾಜಾರೋಷವಾಗಿ ತಿರುಗಾಡುತ್ತಿದೆ ಎಂದು ಹೇಳಲಾಗಿದೆ. ಮತ್ತೊಂದು ಕಡೆ ಯುವತಿಗೆ ಹೇಳುವ ಮಾತುಗಳು ಹೀಗಿವೆ. 'ದಾರಿಯಿಂದ ನೀನು ಬೇಗನೆ ದೂರವಾಗು, ನಿನ್ನ ಉಬ್ಬಿದ ಕುಚಗಳನ್ನು ನೋಡಿ ಎದುರಿಗೆ ಬರುತ್ತಿರುವ ಆನೆಯು ತನ್ನ ಪ್ರತಿಸ್ಪರ್ಧಿ ಕೋರಾನೆಯ ಕುಂಭಗಳೆಂದು ತಿಳಿದು ನಿನ್ನ ಮೇಲೆ ನುಗ್ಗಲು ಯತ್ನಿಸಬಹುದು'[೨೧] ಎಂದು ಹೇಳುತ್ತಾನೆ.

ವಾಲ್ಮೀಕಿಯ ರಾಮಾಯಣದಲ್ಲಿ 'ಸಂಕಟದಿಂದ ಕೂಡಿದ ಮಹಿಳೆಯರನ್ನು ಹಿಂಡಿನಿಂದ ಬೇರ್ಪಟ್ಟ ಹೆಣ್ಣಾನೆಗಳಿಗೆ ಹೋಲಿಸಿದ್ದಾನೆ. ಹಾಗೆಯೇ ಯುವತಿಯರ ತೊಡೆಯನ್ನು ಸುಂದರವಾದ ಆನೆಯ ಸೊಂಡಿಲಿಗೆ ಹೋಲಿಕೆ ಮಾಡಲಾಗಿದೆ.

ಹಳೆಗನ್ನಡ ಹಾಗೂ ನಡುಗನ್ನಡ ಸಾಹಿತ್ಯದಲ್ಲಿ ಲೌಕಿಕ ಹಾಗೂ ಧಾರ್ಮಿಕ ಕಾವ್ಯಗಳು ಹುಟ್ಟಿವೆ. ಆದಿಪುರಾಣ, ಅನಂತನಾಥ ಪುರಾಣ, ಪಂಪಭಾರತ, ಅಜಿತತೀರ್ಥಕರ ಚರಿತೆ, ಧರ್ಮಾಮೃತ, ಗಿರಿಜಾಕಲ್ಯಾಣ, ಯಶೋಧರ ಚರಿತೆ, ಕುಮಾರವ್ಯಾಸ ಭಾರತ ಮುಂತಾದ ಸುಮಾರು ೪೦ ಕೃತಿಗಳಲ್ಲಿ ಆನೆಗಳ ಪ್ರಸ್ತಾಪ ಬಂದಿದೆ. ಆದರೆ ಬಹುತೇಕ ಕೃತಿಗಳು ಯುದ್ಧ, ಪಟ್ಟಾಧಿಕಾರ ಈ ಸಂದರ್ಭದಲ್ಲಿ ಆನೆಯ ಬಳಕೆಯ ಉಲ್ಲೇಖಗಳಿವೆ. ಗಜವೈದ್ಯ ಪ್ರಸ್ತಾಪ ಅಷ್ಟಾಗಿ ಕಂಡುಬರುವುದಿಲ್ಲ. ಆನೆಯ ಮೇಲ್ವಿಚಾರಕನಿಗೆ 'ಹಸ್ತ್ಯಧ್ಯಕ್ಷ' ಎಂತಲೂ, ಅದನ್ನು ಸಾಕುವ ವ್ಯಕ್ತಿಗಳಿಗೆ 'ಹಸ್ತಿಪ'ರೆಂತಲೂ ಕರೆಯುತ್ತಾರೆ. ಅರ್ಥಶಾಸ್ತ್ರದಲ್ಲಿ ಕೌಟಿಲ್ಯನು ಆನೆಯನ್ನು ಹಿಡಿಯುವ, ಸ್ನಾನ ಮಾಡಿಸುವ, ಸೇವಕರ ಸಂಬಳ, ಸಾರಿಗೆ ಇತ್ಯಾದಿ ವಿಷಯ ಕುರಿತು ಚರ್ಚಿಸುತ್ತಾನೆ. ಜೊತೆಗೆ ಗ್ರೀಷ್ಮ ಕಾಲದಲ್ಲಿ ೨೦ ವರ್ಷದ ಆನೆಯನ್ನು ಹಿಡಿಯಬೇಕೆಂಬುದು ಕೌಟಿಲ್ಯನ ಅಭಿಪ್ರಾಯ.

ಪ್ರಾಚೀನ ಕಾಲದಲ್ಲಿ ಎಲ್ಲ ಶಿಕ್ಷಣಗಳಂತೆ "ಗಜಶಿಕ್ಷಣವು" ಚಾಲ್ತಿಯಲ್ಲಿತ್ತು. "ವಾರಣ ಶಿಕ್ಷೆಯಂ ತುರಗಶಿಕ್ಷೆಯನೊಪ್ಪುವ ಚಾಪವಿದ್ಯೆಯಂ ಈತನಲ್ಲದಿಳೆಯೊಳ್ ಮಿಗೆಬಲ್ಲ ವರಾರ್" ಎಂಬ ದಶಕುಮಾರ ಚರಿತೆ(೧೧-೯೬)ಯ ಮಾತು ಆನೆಯನ್ನು ಪಳಗಿಸುವ ವಿದ್ಯೆಗೆ "ವಾರಣಶಿಕ್ಷಾ" ಎಂದು ಹೇಳುತ್ತಿದ್ದರು. ಈ ವಿದ್ಯೆಯನ್ನೇ "ಹಸ್ತಿ ತನ್ತ್ರ" ಎಂದೂ ಕರೆಯುತ್ತಿದ್ದರು. ಪ್ರತ್ಯೇಕವಾದ ಗಜಶಾಲೆಗಳು ಇರುತ್ತಿದ್ದವು. ಆನೆಗಳ ಪಡೆಯಿಂದ ಮಾಡುತ್ತಿದ್ದ ಯುದ್ಧವನ್ನು "ಗಜಕಾಳಗ"ವೆಂದು ಕರೆಯುತ್ತಿದ್ದರು. ಈ ಕಾಳಗದಲ್ಲಿ ಗಾಯಗೊಂಡ ಆನೆಯನ್ನು ಉಪಚರಿಸುವ ವೈದ್ಯವರ್ಗದವರು ಹಾಜರಿರುತ್ತಿದ್ದರು. ಮೈಯಲ್ಲಿ ಹೊಕ್ಕಿದ ಸಬಳವನ್ನು ಹೊರತೆಗೆದು ಮದ್ದು ನೀಡುತ್ತಿದ್ದ ಚಿತ್ರಣವನ್ನು ಕುಮಾರವ್ಯಾಸ ಭಾರತ ಹೀಗೆ ಬಣ್ಣಿಸಿದೆ.

ಒಡಲಿನೊಳು ಮುರಿದಿದ್ದ ಸಬಳವ
ನುಡಿಯಲೀಯದೆ ಕೀಳ್ವ ಮದ್ದನು
ಗಿಡವ ಜೀವಣಿಗೆಯೊಳು ಸುಪ್ರಾಣಿಸುವ ದುರ್ವ್ರಣವ |
ತೊಡೆದು ಕಟ್ಟುವ ಹಸ್ತಿ ವೈದ್ಯರ
ಗಡಣವುಭಯ ದೊಳೆಸೆವಂತ್ಯದ
ಕಡಲರಭಸಕೆ ತೊಡಕನಕ್ಕಿತು ಬಹಳ ಬಲಜಲಧಿ |

ಎನ್ನುವಲ್ಲಿ "ಹಸ್ತಿವೈದ್ಯರ" ಕಾರ್ಯವನ್ನು ತಿಳಿಸುತ್ತಾನೆ. "ಜೈಯಿ" ಎಂಬ 'ಗಜವೈದ್ಯ'ನ ಪ್ರಸ್ತಾಪ ಶಾಸನವೊಂದರಲ್ಲಿ ಬರುತ್ತದೆ.

ಯುದ್ಧದ ಆನೆಗಳಿಗೆ ರಕ್ಷಾಕವಚ ಹೊದಿಸಿ, ದಂತಗಳಿಗೆ ಚೂಪಾದ ಅಸ್ತ್ರಗಳನ್ನು ಸಿಕ್ಕಿಸುವುದನ್ನು ಹ್ಯೂಯೆನ್‌ತ್ಸಾಂಗ್ ತಿಳಿಸುತ್ತಾನೆ. ಆನೆಗೆ ತೊಡಿಸುವ ರಕ್ಷಾಕವಚವನ್ನು 'ಪಕ್ಕರಿಕೆ', 'ಹಕ್ಕರಿಕೆ' ಎಂತಲೂ, 'ಆನೆಯ ಜೂಲ' ಎಂತಲೂ ಕರೆದಿದ್ದಾರೆ. 'ಕೊಂಬುಗತ್ತಿ' 'ಕಿರುಗತ್ತಿ' 'ಸೂನಗೆ' ಮುಂತಾದ ಕಾವ್ಯೋಕ್ತ ಹೇಳಿಕೆಗಳು ಆನೆಯ ಸೊಂಡಿಲು, ದಂತಗಳಿಗೆ ಅಳವಡಿಸುತ್ತಿದ್ದ ಆಯುಧಗಳಾಗಿವೆ. ವಿಜಯಯಾತ್ರೆಗೆ ಸಿದ್ಧವಾದ ಆನೆಯ ವರ್ಣನೆ ಶಾಂತಿಪುರಾಣದಲ್ಲಿ ಬರುತ್ತದೆ. "ಕಮಲದಂತೆ ಹರವಾದ ಉದ್ದವಿಲ್ಲದ ಕತ್ತು, ವಿಶಾಲ ಎದೆ, ದೊಡ್ಡ ಅಂತರ್ಮಣಿ, ವಿಸ್ತರವಾದ ಹೆಗಲು, ಪ್ರಶಸ್ತವಾದ ಪೀಠ, ಬಿಲ್ಲಿನಂತೆ ಬಾಗಿದ ಬೆನ್ನು, ಸಮನಾದ ಪಕ್ಕೆ, ತೆಳುವಾದ ಹೊಟ್ಟೆ, ವಿಸ್ತೀರ್ಣವಾದ ಬಾಹು, ಹೊರಗೆ ಕಾಣದಿರುವ ಸೊಂಡಿಲತುದಿ" ಎಂದು ವರ್ಣಿಸುತ್ತಾನೆ.

ಕೃಷ್ಣದೇವರಾಯನ ದಿನಚರಿಯಲ್ಲಿ "ಆನೆ ೧ಕ್ಕೆ ಸಾವಿರ ವರಹದ ಮೇರೆಯಲ್ಲಿ ಆನೆ ಘಟ್ಟಿ ಸಾವಿರದ ಇನ್ನೂರಕ್ಕೆ ಸ್ಥಿತಿ ಹನ್ನೆರಡು ಲಕ್ಷ... ಆನೆಗಳಿಗೆ ತುಳುವ ಕೈಸಂಬಳ...

ಆನೆ ದವಸ ಧಾನ್ಯ ಹುಲ್ಲು ಸೊಪ್ಪುಗಳಿಗೂ... ಗಜವೈದ್ಯರಿಗೂ ಕಡಿಮೆಯಿಲ್ಲದೆ ನಡೆಸುವ ಹಾಗೆ"[೮] ಎಂದು ಆ ಕಾಲದ ಆರ್ಥಿಕ ಸ್ಥಿತಿಗತಿಯನ್ನು ರಾಜ್ಯಭಂಡಾರದ ಖರ್ಚು ವೆಚ್ಚಗಳನ್ನು ಹೇಳುವ ಸಂದರ್ಭದಲ್ಲಿ ಆನೆಗಳಿಗೆ ಇದ್ದ ಬೆಲೆ, ಖರ್ಚು ಮಾಡುತ್ತಿದ್ದ ದವಸ ಧಾನ್ಯ ಮುಂತಾದ ಸಂಗತಿಗಳು ಗಮನಾರ್ಹವಾಗಿವೆ.

ಹೀಗೆ ಆನೆಗಳ ಜಾತಿ, ವಯಸ್ಸು, ಲಕ್ಷಣ, ಅವುಗಳ ಸುಳಿ, ಉಪಯೋಗ, ಮಹತ್ವ ಕುರಿತು ಹೆಚ್ಚು ಪ್ರಸ್ತಾಪಿಸಿರುವ ಶಾಸ್ತ್ರಕೃತಿಗಳು "ಗಜವೈದ್ಯ" ಕುರಿತು ವ್ಯಾಪಕ ಮಾಹಿತಿ ನೀಡುವುದಿಲ್ಲ. ಆದರೂ ಪ್ರಾಚೀನ ಕರ್ನಾಟಕದ ಸಾರಿಗೆ ವ್ಯವಸ್ಥೆಯಲ್ಲಿ, ಯುದ್ಧ ಸಂದರ್ಭದಲ್ಲಿ, ಶುಭ ಮುಹೂರ್ತದಲ್ಲಿ 'ಆನೆಗೆ' ಪ್ರಥಮ ಪ್ರಾಶಸ್ತ್ಯ. ಹೀಗಾಗಿ ಅದರ ಯೋಗಕ್ಷೇಮವನ್ನು ಕುಟುಂಬದ ಸದಸ್ಯರಂತೆ ಗೌರವ ಸ್ಥಾನದಲ್ಲಿರಿಸಿ ನೋಡಿಕೊಳ್ಳುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಈ ಹೊತ್ತು ಶಾಸ್ತ್ರಕೃತಿಗಳು ಹೇಳುವ "ಆನೆಯ ಜಾತಿ" ಆಂತರ್ಯಗಳನ್ನು ಪ್ರಾಣಿಶಾಸ್ತ್ರಜ್ಞರು ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಅಗತ್ಯವಿದ್ದು "ಗಜಶಾಸ್ತ್ರ" ತಿಳಿಸುವ ಕೃತಿಗಳು ಅಂತಹ ಅಂತರ್‌ಶಿಸ್ತ್ರೀಯ ಅಧ್ಯಯನಕ್ಕೆ ಪೂರ್ಣ ಪ್ರಮಾಣದ ಆಕರಗಳಾಗಿವೆ.

ವಿಶೇಷವಾಗಿ ಪಂಪನಾದಿಯಾಗಿ ಬಂದ ಹಳಗನ್ನಡ ಕವಿಗಳು ಒಂದು ಲೌಕಿಕ ಮತ್ತೊಂದು ಧಾರ್ಮಿಕ ಕೃತಿಗಳನ್ನು ರಚಿಸಿದ್ದಾರೆ. ಲೌಕಿಕ ಹಾಗೂ ಧಾರ್ಮಿಕ ಕೃತಿಗಳೆರಡರಲ್ಲಿಯೂ ಸಾಂದರ್ಭಿಕವಾಗಿ ಯುದ್ಧದಲ್ಲಿ ಬಳಕೆಗೊಳ್ಳುತ್ತಿದ್ದ ಆನೆ ಕುದುರೆಗಳ ಪ್ರಸ್ತಾಪ ಬಂದಿವೆ. ಪಂಪನ ವಿಕ್ರಮಾರ್ಜುನ ವಿಜಯ ಕಾವ್ಯವನ್ನು ತನ್ನ ಆಶ್ರಯದಾತ ಅರಸನಾದ ಅರಿಕೇಸರಿಗಾಗಿ ಬರೆದ ಕೃತಿ. ಈ ಕೃತಿಯಲ್ಲಿ ಅರಿಕೇಸರಿಯನ್ನು ಮಧ್ಯಮಪಾಂಡವ ಅರ್ಜುನನಿಗೆ ಹೋಲಿಕೆ ಮಾಡಿ ಬರೆದ ಕೃತಿ ಇದಾಗಿದೆ. ಜೈನ ಧರ್ಮೀಯನಾದ ಪಂಪನು ಲೌಕಿಕ ಹಾಗೂ ಧಾರ್ಮಿಕ ಕೃತಿಗಳೆರಡನ್ನೂ ಬರೆದಿದ್ದಾನೆ. ಲೌಕಿಕ ಕಾವ್ಯ ವಿರ್ಕಮಾರ್ಜುನ ವಿಜಯವಾದರೆ ಧಾರ್ಮಿಕ ಕಾವ್ಯ ಆದಿಪುರಾಣವಾಗಿದೆ. ಜೈನಧರ್ಮದಲ್ಲಿ ಮೊದಲ ತೀರ್ಥಂಕರನೆಂದು ಗುರುತಿಸಲಾಗುವ ಆದಿನಾಥನ ಕುರಿತ ಕಾವ್ಯ ಇದಾಗಿದೆ. ಈ ಎರಡೂ ಕಾವ್ಯಗಳೂ ಯುದ್ಧದ ವಿವರಗಳನ್ನೊಳಗೊಂಡಿವೆ. ಹತ್ತನೇ ಶತಮಾನವನ್ನು ಕ್ಷಾತ್ರೀಯ ಕಾಲ ಎಂದು ಗುರುತಿಸಲಾಗುತ್ತದೆ. ಅಂತಹ ಕಾಲದಲ್ಲಿ ಇದ್ದವನು ಪಂಪ. ಹೀಗಾಗಿ ಇವನ ಕಾವ್ಯಗಳು ಸಹಜವಾಗಿಯೇ ಆ ಕಾಲದಲ್ಲಿ ಬಳಕೆಯಲ್ಲಿದ್ದ ಯುದ್ಧದ ರೀತಿ ನೀತಿಯ ವಿವರಗಳನ್ನೊಳಗೊಂಡಿವೆ. ಪಂಪನು ಒಂದು ಕಡೆ ವಿರ್ಕಮಾರ್ಜುನ ವಿಜಯ ಕಾವ್ಯದಲ್ಲಿ ಹೀಗೆ ಹೇಳಿದ್ದಾನೆ.

'ಮದಮಂ ಮಕ್ಕಳಿಸಿರ್ದಿಭಂಗಗಳನುದಗ್ರಾಶ್ವಂಗಳಂ ತಕ್ಕಿನ
ಗ್ಗದ ಬಾಡಂಗಳನಾಯ್ದು ಕೊಟ್ಟ ತಣಿದೆಂ ಪೋ ಸಾಲ್ಗುವೆಂಬನ್ನಮಂ"

ಮದವನ್ನು ಹೊರಚೆಲ್ಲುವ ಆನೆಗಳಿಂದ, ಉತ್ತಮ ಜಾತಿಯ ಕುದುರೆಗಳಿಂದ ಯೋಗ್ಯ ಹಾಗೂ ಶ್ರೇಷ್ಠ ಗ್ರಾಮಗಳಿಂದ ನಾನು ತೃಪ್ತನಾದೆನು ಎಂದು ಅರ್ಜುನನ ಬಾಯಿಂದ ಕವಿ ಹೇಳಿಸುತ್ತಾನೆ.

ವಿರಾಟಪರ್ವದ ಒಂದು ಕಡೆ ಪಾಂಡವರ ಇರುವಿಕೆಯ ಕುರಿತು ಅನುಮಾನಗೊಂಡ ಕೌರವರು ವಿರಾಟ ರಾಜ್ಯದ ಮೇಲೆ ದಂಡೆತ್ತಿ ಬರುವ ಪ್ರಸಂಗ ನಡೆಯುತ್ತದೆ. ಆ ಸಂದರ್ಭದಲ್ಲಿ ಉತ್ತರ ಕುಮಾರ ತನಗಾರೂ ಉತ್ತಮ ಸಾರಥಿಗಳಿಲ್ಲ ಎಂದು ಪೇಚಾಡಿದಾಗ ಬೃಹನ್ನಳೆ ತಾನೇ ಸಾರಥಿಯಾಗಿ ಬರುವುದಾಗಿ ತಿಳಿಸುತ್ತಾನೆ. ಆ ಸಂದರ್ಭದಲ್ಲಿ ಯುದ್ಧಕ್ಕೆ ನಡೆದ ಸಿದ್ಧತೆಯ ಕುರಿತು ಕವಿ ಹೀಗೆ ಹೇಳುತ್ತಾನೆ. ಜೀನನ್ನು ಧರಿಸಿದ ಕುದುರೆಗಳು ಬಂದವು. ಆನೆಗಳು ಸಮೂಹಯುದ್ಧಕ್ಕೆ ಸನ್ನದ್ಧವಾದವು. ಆಯುಧವನ್ನು ಹೊತ್ತ ರಥಗಳು ಸಿದ್ಧವಾಗಿ ಸಾಲು ಸಾಲಾಗಿ ನಿಂತವು. ಕಾಲಾಳು ಸೈನ್ಯದ ಪಂಕ್ತಿಗಳು ಹುಲಿಯ ಹಿಂಡಿನ ಹಾಗೆ ಕೈಮೀರಿ ಮುಂದೆ ಬಂದಿತು. ಯುದ್ಧವಾದ್ಯವು ವಿಜೃಂಭಿಸಿತು ಎಂದು ತಿಳಿಸುತ್ತಾನೆ. ಮತ್ತೊಂದು ಕಡೆ ಹೀಗೆ ವಿವರಿಸಲಾಗಿದೆ.

'ಕರಿ ತುರಗ ರಥ ಪದಾತಿಯ
ಚರಣಾ ಸಂಘಾತ ಜಾತ ರಜಮಾಜಸ್ತಂ,
ನೆರೆದಂಬರಕೊಗೆಯಲ್ ಬಳ ಭರದಿಂ
ಧರೆಯಿಳ್ದಿ ಪಾರೆವಂತಾಯ್ತಾಗಳ್'[೨೩]

ಆನೆ ಕುದುರೆ ಕಾಲಾಳುಗಳ ದಟ್ಟನೆಯಿಂದ ಉಂಟಾದ ಧೂಳು ವಿಪರೀತವಾಗಿ ಆಕಾಶಕ್ಕೆ ಹಾರಲು ನಿಂತಂತಿರುವ ಸೈನ್ಯದ ಭಾರದಿಂದಾಗಿ ಭೂಮಿಯೇ ಆಕಾಶಕ್ಕೆ ಧೂಳಿನ ರೂಪದಲ್ಲಿ ಚಲಿಸುತ್ತದೆಯೇನೋ ಎನ್ನಿಸಿತು ಎಂದು ತಿಳಿಸುತ್ತಾನೆ.

ಮತ್ತೊಂದು ಕಡೆ ಮಹಾಭಾರತದ ಕುರುಕ್ಷೇತ್ರ ಯುದ್ಧದಲ್ಲಿ ನಡೆಯುವ ಮಹತ್ವದ ಪ್ರಸಂಗ ಹೀಗೆ ಕಾಣಬಹುದು, ಕೌರವರ ಕಡೆ ಭೀಷ್ಮ, ದ್ರೋಣ, ಕರ್ಣ, ಶಲ್ಯ, ಅಶ್ವತ್ಥಾಮ ಮುಂತಾದವರು ಇರುತ್ತಾರೆ. ಇತ್ತ ಕಡೆ ಪಾಂಡವರ ಪರವಾಗಿ ಕೃಷ್ಣ ಇದ್ದಾನೆ. ದ್ರೋಣ ಚಾರ್ಯರು ಅಸಾಮಾನ್ಯವಾಗಿ ಯುದ್ಧ ಮಾಡುತ್ತಿದ್ದಾರೆ. ಆ ಸಂದರ್ಭದಲ್ಲಿ ದ್ರೋಣರ ಮಾನಸಿಕ ಬಲವನ್ನು ಕುಂದಿಸಲು ಕೃಷ್ಣ ಉಪಾಯವೊಂದನ್ನು ಹೂಡುತ್ತಾನೆ. ದ್ರೋಣರ ಪ್ರೀತಿಯ ಮಗ ಅಶ್ವತ್ಥಾಮ. ಅವನೂ ಯುದ್ಧದಲ್ಲಿ ತೊಡಗಿದ್ದಾನೆ. ಅದೇ ಸಂದರ್ಭದಲ್ಲಿ ಅಶ್ವತ್ಥಾಮ ಹೆಸರಿನ ಆನೆಯೂ ಕೌರವರ ಪರವಾಗಿ ಯುದ್ಧಭೂಮಿಯಲ್ಲಿದೆ.

ಇದನ್ನರಿತ ಕೃಷ್ಣ 'ಅಶ್ವತ್ಥಾಮ ಹತಃಕುಂಜರ' ಎಂದು ಜೋರಾಗಿ ಸುದ್ದಿ ಹಬ್ಬಿಸುತ್ತಾನೆ. ನಿಜವಾಗಿಯೂ ಅಶ್ವತ್ಥಾಮ ಹೆಸರಿನ ಆನೆ ಸತ್ತಿದೆ ಎಂಬುದು ಇದರರ್ಥ. ಆದರೆ ದ್ರೋಣಾಚಾರ್ಯರು ತಮ್ಮ ಮಗ ಅಶ್ವತ್ಥಾಮನೇ ಯುದ್ಧಭೂಮಿಯೊಳಗೆ ಹತನಾಗಿದ್ದಾನೆಂದು ತಿಳಿದು ಕುಸಿದು ಹೋಗುತ್ತಾರೆ. ತುಂಬಾ ಶೌರ್ಯದಿಂದ ಯುದ್ಧ ಮಾಡುತ್ತಿದ್ದ ದ್ರೋಣರು ಯುದ್ಧಭೂಮಿಯಿಂದಲೇ ವಿಮುಖರಾಗುತ್ತಾರೆ. ಈ ಸಂದರ್ಭವನ್ನು ಬಳಸಿಕೊಂಡು ಕೃಷ್ಣ ಕೌರವರ ಸೈನ್ಯವನ್ನು ಹಿಮ್ಮೆಟ್ಟಿಸುತ್ತಾನೆ ಎಂಬ ಪ್ರಸಂಗವನ್ನು ಪಂಪನು ತುಂಬಾ ಮಾರ್ಮಿಕವಾಗಿ ತಿಳಿಸುತ್ತಾನೆ.

'ಕರಿಘಟೆ ನೀಳಮೇಘ ಘಟೆಯಂತೆ
ತುರಂಗದರಂ ಸಮುದ್ರದೊಳ್ ತರತರದಿಂದೆ ಏಳ್ವ
ತೆರೆಯಂತೆ ರಥಂ ಮಹಾಮಕರಂಗಳಂತೆ
ಅಗುರ್ವರಿ ವರಿಯುತ್ತುಮಿರ್ಪ ಅಣಿ ಬೃಹದ್ಬಡ'<sup>೨೪</sup>
ಬಾನಳದಂತೆ ತೋರೆ ಸುಯೋಧನ ಸೈನ್ಯ ಸಾಗರಂ ೮-೯೯(ಪಂಪ ಭಾರತ ಪು.೧೩೯)

ಕಾರ್ಮೋಡಗಳ ಸಮೂಹದಂತೆ ನಿಂತ ಆನೆಗಳು ಸಮುದ್ರದ ಅಲೆಗಳಂತೆ ಏರೇರಿ ಬರುವ ಕುದುರೆಗಳ ಸಮೂಹ, ಮಹಾ ತಿಮಿಂಗಿಲಿನಂತೆ(ಮೀನಿನಂತೆ) ದಟ್ಟೈಸಿಬರುವ ರಥಗಳು, ಭಯಂಕರವಾದ ಜ್ವಾಲೆಯ ಉರಿಯೇ ಬೆನ್ನಟ್ಟಿ ಬರುವಂತೆ ಸುಯೋಧನನ ಸೈನ್ಯವು ಉತ್ತರಕುಮಾರನ ಕಣ್ಣಿಗೆ ಕಂಡವು ಎಂದು ಕವಿ ವರ್ಣಿಸುತ್ತಾನೆ.

ಪಂಪನ ಮತ್ತೊಂದು ಮಹತ್ವದ ಕೃತಿ ಆದಿಪುರಾಣ. ಇದು ಧಾರ್ಮಿಕ ಕಾವ್ಯ. ಭರತ, ಬಾಹುಬಲಿ ಎಂಬ ಸಹೋದರರ ನಡುವೆ ನಡೆಯುವ ಯುದ್ಧದಲ್ಲಿ ಕೊನೆಗೆ ಬಾಹುಬಲಿ ಈ ಬದುಕಿನ ರೀತಿಗೆ ಅನಾಸಕ್ತಿ ಹೊಂದಿ ನಿರ್ವಾಣ ಹಂತ ತಲುಪುವ ಕಥೆಯನ್ನು ಇದು ಒಳಗೊಂಡಿದೆ.

ಪಂಪನ ಆದಿಪುರಾಣದಲ್ಲಿ ಯುದ್ಧದ ವಿಷಯವಾಗಿ ತನ್ನ ಸೇವಕ ಮಹತ್ತರನ ಕೈಯಲ್ಲಿ ಪತ್ರವೊಂದನ್ನು ಕಳಿಸುತ್ತಾನೆ. ಆ ಪ್ರಸಂಗವನ್ನು ಪಂಪನ ಭಾಷೆಯಲ್ಲಿಯೇ ನೋಡೋಣ.

ಅದರಿಂದಮಾತನಂ ಸಾ
ಮದಿಂದಮಳವಡಿಸಿ ನೋಡುವೆಂ ಸಾಮದೊಳಂ
ಪದವಡದೊಡೆ ಬಳಿಕಿರ್ದ
ಪ್ಪುದಲ್ತೆ ಪದವಡಿಸಲೆನ್ನ ಬಯಕೆಯಂ ದಂಡಂ (೧೪, ೪೩)

ವ: ಎಂದು ಮಂತ್ರಿವರ್ಗದೊಡನೆ ನಿರಾಕುಳಿತಕಾರ್ಯಪರ್ಯವಸಾವಾಗಿ ಬಾಹುಬಲಿಕುಮಾರಂಗೆ ಲೇಖನಮನುನ್ಮಯೂಖರತ್ನಾಭರಣಪ್ರಭೂತಸಮೇತಮನಟ್ಟುವಂತು ಮಹಾಸಂಧಿವಿಗ್ರಹಿಗೆ ಬೆಸಸಿದೊಡಾತಂ ಜನಪದ ಸಮಭಿಜಾತ ತನುಮನ್ವಯಾಗತನುಮಭಿರೂಪನುಂ ಪ್ರತ್ಯುತ್ಪನ್ನ ಪ್ರತಿಭನುಂ ವಕ್ರೋಕ್ತಿನಿಪುಣನುಮಾಧೇಯವಚನಮನುದ್ಧತವೇಷನುಂ ಪರಿಚಿತಾಶೇಷದೇಶ ಭಾಷನುಂ ವಯೋವೃದ್ಧನುಂ ಪ್ರಸಿದ್ಧನುಮಪ್ಪ ಮಹತ್ತರನ ಕೈಯೋಳ್ ಸನ್ಮಾನದಾನಪುರಸ್ಸರ ಮಾಗೆ ಕೊಟ್ಟು ವಿಜಯ ಕಾರ್ಯಸಿದ್ಧಿಯಕ್ಕೆಂದು ಪೋಗಲ್ವೇಳ್ವುದುಮಾತನುಂ ಕವಿಪಯ ಪ್ರಯಾಣಂಗಳಿಂದಂ ಪೌರುಪುರವಮನೆಯ್ದಿ ಪುರಶ್ರೀಯನರ್ಥಿವಟ್ಟು ನೋಡಿ ಮೆಚ್ಚುತುಂ ಬಂದು ಲೀಲೋತ್ತಾರಿತರಿಪುನೃಪಾಲ ಸಾಮಂತಸೀಮಂತಿನೀಸೀಮಂತರಪ್ಪ ಮಹಾ ಸಾಮಂತ ರಿಂದಮಧರಿತಾನೇಕರಿಪುನೃಪಾನೇಕರಂಗಳಪ್ಪ ವಾರುಣಂಗಳಿಂದಂ ಹೇಲೋಲ್ಲಂಘಿತ ಮಹಾವಾಹಿನೀಭೂರಿ ಭೈರವಾಜಿಗಳಪ್ಪ ವಾಜಿಗಳಿಂದಮಪಹೃತ ವಿಕ್ರಾಂತ ವಿದ್ವಿಷ್ಟ ವಿಕ್ರಮ ಸಂಪತ್ತಿಗಳಪ್ಪ ಪತ್ತಿಗಳಿಂದಂ ವಿರಾಜಮಾನಮಪ್ಪ ರಾಜಮಂದಿರಮನೆಯ್ದಿ ದೌವಾರಿಕ ನಿವೇದಿಕಾತ್ಮೀಯವೃತ್ತಾಂತನಾಸ್ಥಾನಮಂಡಪಮಂ ಪೊಕ್ಕು ಲಲಾಟತಟಸಂಘಟ್ಟಿತ ಸಭಾ ಕುಟ್ಟಿಮನಾಗಿ'[೨೫]

ಮಹಾಸಂಧಿವಿಗ್ರಹಪತಿ ಮಹತ್ತರನು ಬಾಹುಬಲಿಯ ಆಸ್ಥಾನಕ್ಕೆ ಹೋಗುವ ಪೂರ್ವದಲ್ಲಿ ಪೌದಪುರವನ್ನು ತಲುಪಿ ಅಲ್ಲಿಯ ಸಂಪತ್ತನ್ನು ಸಂತೃಪ್ತಿಯಿಂದ ನೋಡಿ-ಶತ್ರುರಾಜರ ಸಾಮಂತರ ಸೀಮಂತಿನ(ಹೆಂಡಿರು) ಸೀಮಂತಮಣಿ(ಮಾಂಗಲ್ಯ)ಯನ್ನು ಕಿತ್ತುಕೊಂಡ ಮಹಾಸಾಮಂತರಿಂದಲೂ ಅನೇಕ ಶತ್ರು ರಾಜರ ಗಜಸೈನ್ಯದ ಮದವಿಳಿಸುವ ಮದಿಸಿದಾನೆಗಳ ದಂಡಿನಿಂದಲೂ, ಭಯಂಕರ ಯುದ್ಧಗಳಲ್ಲಿ ಲೀಲಾಜಾಲವಾಗಿ ಏರಿಹೋಗಬಲ್ಲನಂಥ ಅಶ್ವದಳದಿಂದಲೂ, ಶತ್ರುರಾಜರ ಸೂರೆ ಹೊಡೆಯಬಲ್ಲ ಕಾಲಾಳು ಸೈನ್ಯದಿಂದಲೂ ವಿರಾಜಮಾನ ವಾಗಿದ್ದ ಬಾಹುಬಲಿಯ ಅರಮನೆಯ ಬಳಿ ಸಾರಿ ದ್ವಾರಪಾಲಕನಿಗೆ ತಾನು ಬಂದ ವೃತ್ತಾಂತವನ್ನು ನಿವೇದಿಸಿಕೊಳ್ಳುತ್ತಾನೆ.

ಭರತನ ಗಜದಳದ ವರ್ಣನೆಯನ್ನು ಪಂಪನು ಹೀಗೆ ಮಾಡಿದ್ದಾನೆ.

'ಬಳಸಂಪನ್ನಕ್ಷಿತೀಶಕ್ರಕರ ಕರಿಕುಳಗ್ರೀವಸಂಘಟ್ಟಭಂಗಂ
ಗಳನೆಂದುಂ ಕಾಣದೆತ್ತಂ ಬಳೆಯೆ ಕಳಿದ ವೇಳಾವನಸ್ಥೂಳಶಾಳಂ
ಗಳೊಳಾದಿಬ್ರಹ್ಮಪುತ್ರಂ ನಿಜವಿಜಯಗಜೇಂದ್ರಗಳಂ ಕಟ್ಟೆ ನೀಳಾ
ಚಳಿಸಂಘಾತಂಗಳಿಂ ಸುತ್ತಿರಿದವೊಲೆದತ್ತಾ ಸಮುದ್ರೋಪಕಂಠಂ'[೨೬](೧೪, ೫೩)

ತನ್ನ ಗಜದಳದ ಆನೆಗಳು ಕಪೋಲ ತಿಕ್ಕಿ ತಿಕ್ಕಿ ವೃಕ್ಷಗಳನ್ನು ಸವೆಸಿ ಶತ್ರುಗಳ ವನದುರ್ಗವನ್ನೆಲ್ಲ ನಿರ್ನಾಮ ಮಾಡುತ್ತ ಕೋಪಾವೇಶದಿಂದ ಆ ಆನೆಗಳು ಕುರುಡಾಗಿ ಎದುರಾನೆಗಳೆಂದು ತಿಳಿದು ಶತ್ರುಗಳ ಗಿರಿದುರ್ಗಗಳನ್ನು ಉರುಳಿಸುತ್ತ, ಒಳಗೊಳಗೆ ಧಗಿಧಗಿಸುವ ಕದನದ ಕಾವಿಗೆ ಬಿಸಿಯಾಗಿ ಬಾಯಾರಿ ಒಬ್ಬೊಬ್ಬರು ಒಂದೊಂದೇ ಬೊಗಸೆ ಕುಡಿದು ಶತ್ರುಗಳ ಜಲದುರ್ಗವನ್ನೆಲ್ಲ ಮೊಳಕಾಲುದ್ದ ಮಾಡುತ್ತ ಬಲಸಂಪನ್ನರಾದ ರಾಜರ ಸೈನ್ಯದ ಆನೆಗಳ ಕೊರಳ ಬಲವಾದ ದಬಾವಣೆಗೆ ಎಂದೂ ಸಿಲುಕದೆ ಸಮುದ್ರದ ತೀರದುದ್ದಕ್ಕೂ ಹುಲುಸಾಗಿ ಬೆಳೆದ ತಾಲ ವೃಕ್ಷಗಳಿಗೆ ಆದಿಬ್ರಹ್ಮನ ಪುತ್ರ ಭರತನು ತನ್ನ ವಿಜಯಗಜೇಂದ್ರಗಳನ್ನು ಕಟ್ಟಲು ನೀಲವರ್ಣದ ಬೆಟ್ಟಗಳಿಂದ ಸಾಲುಗಟ್ಟಿದಂತೆ ಕಂಡಿತು ಸಮುದ್ರದ ತೀರ ಎಂಬ ವರ್ಣನೆ ಇದೆ.

ಇದೇ ಕಾವ್ಯದ ಮತ್ತೊಂದು ಕಡೆ ಭರತನು ಯುದ್ಧಸನ್ನದ್ದನಾಗಿ ಹೊರಡುವ ವಿವರಣೆ ಇದೆ.

'ತುದಿಯೆಯ್ದಿತ್ತೆಮ್ಮ ವಿಶ್ವಕ್ಷಿತಿತಳಜಯಮಿಂತೆಮ್ಮ ದಾಯಾದನುಂ ಕೋ
ಪದಿನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮಾ
ಣ್ಬುದು ಸೂಳಲ್ತೆಸಾಪತ್ನನ ಭುಜಬಲಮಂ ನೋಳ್ಪಮೆಂದಾಗಳಾಸ್ಥಾ
ನದಿನೆರ್ದಂ ಚಕ್ರಿ ರಾಜನ್ಯಕಮಕುಟಮಣಿಪೋಜ್ಜಳದ್ವ್ಯೋಮಚಕ್ರಂ' (೧೪, ೮೫)

ವ: ಆಗಳ್ ದೂತಾಳಾಪವಿಳಯ ಸಮೀರಪ್ರೇರಿತ ಪ್ರಳಯಜಳನಿಧಿ ಪ್ರಧ್ವಾನಾನುಕಾರಿಯಾಗಿ
ಭುವನೇಶಕ್ಷತ್ರಪುತ್ರಾಗ್ರಣಿಯ ಭರತನಕ್ಷೋಹಿಣೀವೀರಕಂಠೀ
ರವಸಂದೋಹಕ್ಕೆ ರೋಮಾಂಚನಮೆ ಕವಚಮಂ ಮಾಡುತುಂ ವೀರಪತ್ನೀ
ನಿವಹಕ್ಕಾನಂದಬಾಷ್ಪಾವಳಿಯನೆ ಕುಚದೊಳ್ ಹಾರಮಂ ಮಾಡುತುಂ ಭೂ
ಭುವನಾಂತರ್ಭಾಗಮಂ ಪರ್ಬಿದುದು ಸಮರಸನ್ನಾಹಭೇರಿನಿನಾದಂ[೨] (೧೪-೮೬)

ಪುರಪರಮೇಶ್ವರನ ಕ್ಷಾತ್ರಪುತ್ರಾಗ್ರಣಿ ಭರತನ ಅಕ್ಷೋಹಿಣಿ ಸೈನ್ಯ ವೀರಸಿಂಹ ನಾದಕ್ಕೆ ಎದ್ದ ರೋಮಾಂಚನವನ್ನೇ ಕವಚ ಮಾಡಿಕೊಂಡು ವೀರಪತ್ನಿಯರ ಸಮೂಹಕ್ಕೆ ಆನಂದ ಭಾಷ್ಪವನ್ನೇ ಕುಚಗಳ ಮೇಲೆ ಹಾರ ಮಾಡುತ್ತ- ಭೂವ್ಯೋಮಾಂತರ್ಭಾಗವನ್ನೆಲ್ಲಾ ಹಬ್ಬಿತು ಯುದ್ಧ ಸಿದ್ಧತೆಯ ಭೇರಿ ನಿನಾದ ಈ ಯುದ್ಧ ಸಿದ್ಧತೆಯ ಭೇರಿ ನಿನಾದದ ನಂತರ ಭರತನು ವಿಜಯ ಪರ್ವತ ಗಜೇಂದ್ರನ ಬೆನ್ನಮೇಲೇರಿ ಪೌದಪುರಾಭಿಮುಖವಾಗಿ ನಡೆಯುವಲ್ಲಿ ಕಾಲ್ತುಳಿತದ ಧೂಳು- ಕ್ಷೋಭೆಯಿಂದ ದಿಗಂಗನೆಯರ ಮುಖವನ್ನು

ಕಪ್ಪುಗಟ್ಟಿಸಿ – ಅಷ್ಟಕ್ಕೆ ಸುಮ್ಮನಾಯಿತೆ? ಕೋಪೋದ್ರೇಕದಿಂದ ಆನೆ ಸೈನ್ಯದ ಗಂಡಸ್ಥಲದ ಕಾರ್ಮೋಡದ ನೀಲಚ್ಛಾಯೆಯಿಂದ ಅತ್ಯುಗ್ರವಾದ ಅಸ್ತ್ರ ಶಸ್ತ್ರಗಳ ನೀಲಕಾಂತಿಚ್ಛಾಯೆಗಳ ಸಂಘರ್ಷದಿಂದ ಅರ್ಧ ಶ್ಯಾಮಲ ಮಾಡಿತು ಆ ಭರತ ರಾಜನ ಸೈನ್ಯ.

"ಗಿರಿರಾಜೋದಗ್ರಸಿಂಧೂರಿತಕರಟಿಘಟಾಟೋಪಮಂ ಕುಂಕುಮಾಂಭಃ
ಸ್ಫುರಿತಾಂಗೋತ್ತುಂಗವಲ್ಗತ್ತುರಗಬಲಮದೋದ್ದಾಮಮಂ ಚಿತ್ತಾನೇತ್ರಾಂ
ಬರನಾನಾಹೇತಿಹಸ್ತೋದ್ಭಟಭಟಪೃತನಾಜಾಳಮಂ ಚಿತ್ತದೊಳ್ ವೀ
ರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ(೧೪–೮೭)

ವಃ ಅಂತು ನೋಡಿ ಪೌದುನಪುರಾಭಿಮುಖನಾಗಿ ನಡೆವಲ್ಲಿ ಧೂಳು–ದಿಕ್ಕುದಿಕ್ಕಿನ ಧೂಮವೂ ಕೂಡಿ ದಟ್ಟವಾಗಲು ಬಿರುಗಾಳಿಯಿಂದ ಧೂಳೆದ್ದ ಗಜಸೈನ್ಯದ ಕುಂಭಸ್ಥಳದ ಸಿಂಧೂರವೂ ದಿಕ್ಕುದಿಕ್ಕಿಂದ ಆವರಿಸಿ ಬಂದ ಕಾಡುಕಿಚ್ಚೂ ಕೂಡಿ ಭಯಂಕರವಾಗಲು, ಈ ಜಗತ್ತಿಗಿನ್ನೇನಾಗಿದೆಯೋ ಎಂದು ದೆಸೆ ಬರ್ಪಂತೆ ಭರತನ ಸೈನ್ಯ ಬಂದು ಒಡ್ಡಿ ನಿಂತಿತು.

ಪದಧೂಳೀಕ್ಷೋಭದಿಂ ದಿಗ್ಯುವತಿವದನಮಂ ಶ್ಯಾಮಳಂ ಮಾಡಿ ಮಾಣ್ದಿ
ರ್ದುದೆ ಕೋಪೋದ್ಭಿನ್ನಗಂಡಸ್ಥಳಕರಟಿಘಟಾವ್ಯೂಹನೀಲಾಂಬುದಾಟೋ
ಪದಿನತ್ಯುಗ್ರಾಸ್ತ್ರಶಸ್ತ್ರಪ್ರಕರಕಿರಣಸಂಘಾತತೀವ್ರಾತಪೋದ್ಯೋ
ತದಿನರ್ಧಶ್ಯಾಮಳಂ ಮಾಡಿದುದು ದಿನಮುಮಂ ಕೂಡೆ ರಾಜೇಂದ್ರಸೈನ್ಯಂ(೧೪–೮೮)

ಭರತನ ಆರ್ಭಟವನ್ನು ನೋಡಿ ಬಾಹುಬಲಿಯೂ ಇದಿರೇರಿ ನಡೆದನು. ಅವನ ಸೈನ್ಯದಲ್ಲಿ ಮಸೆಯುವ ಶಸ್ತ್ರಗಳು, ಸರಿಪಡಿಸುವ ಯುದ್ಧ ಸಲಕರಣೆ, ಪ್ರೀತಿ ಶ್ರದ್ಧೆಯಿಂದ ಪೂಜಿಸುವ ಆನೆ, ಕುದುರೆ, ರಥಗಳು, ಏರುವ ದರ್ಭೆ ಶೈಯ್ಯೆ, ಪೂಜಿಸುವ ಜಿನೇಂದ್ರ ಬಿಂಬ–ಮೊಳಗುವ ಭಯಂಕರ ಕದನ ಭೇರಿ ಘೋಷಗಳೆಲ್ಲವೂ ಇದ್ದವು. ಹೇಡಿಯಲ್ಲಿಯೂ ಯುದ್ಧೋತ್ಸಾಹವನ್ನು ಉಂಟುಮಾಡಿತು.

ರಜಮುಂ ದಿಗ್ಧೂಮಮುಂ ಸಂದಣಿಸೆ ಪರುಷವಾತಾಹತಿಪ್ರೋಚ್ಚಳತ್ಸಾ
ಮಜಸೇನಾಕುಂಭಸಿಂಧೂರಮುಮೊದವಿದ ದಿಗ್ದಾಹಮುಂ ಕೂಡೆ ಭೂರಿ
ಧ್ವಜಿನೀಸಂಕ್ಷೋಭಮಾಕಂಪಮುಮಶುಭಮಹೀಕಂಪಮುಂ ತನ್ನೊಳೊಂದಾ
ಗೆ ಜಗಕ್ಕೇನಿಲ್ಲಿ ಪೇಳಾದಪುದೆನೆ ದೆಸೆ ಬರ್ಪಂತೆ ಬಂದೊಡ್ಡಿ ನಿಂದಂ[೨೮] (೧೪, ೮೯)

ಎಂಟು ದಿಗ್ಗಜಗಳು ಒಟ್ಟಾಗಿ ಮೇಲೆ ನುಗ್ಗಿದರೂ, ಮಂದರ ಪರ್ವತದ ಜೊತೆ ಸೇರಿ ಏಳೂ ಕುಲಪರ್ವತಗಳು ಆನೆ ಸೈನ್ಯದ ರೂಪವಾಗಿ ಮೇಲೆ ನುಗ್ಗಿದರೂ

ಅವುಗಳನ್ನು ಎದುರಿಸಲು ನನ್ನ ವಿಜಯ ಗಜೇಂದ್ರವೆಂಬ ನನ್ನ ಆನೆಯೊಂದೇ ಸಾಕು–ಅಂದಮೇಲೆ ಈ ಮಾನವರು ಸಾಕಿದ ಆನೆಗಳ ದಂಡೇನು ದೊಡ್ಡದು ಎಂದು ಬಾಹುಬಲಿಯು ಉದ್ಘರಿಸುತ್ತಾನೆ.

'ಇರದೆಂಟುಂ ದಿಗ್ಗಜಂಗಳ್ ನೆರೆದಿದಿರಿದಿರೊಳ್ ತಾಗೆಯುಂ ಮಂದರಾಕ್ಷ್ಮಾ
ಧರದೊಳ್ ಕಯ್ಗೂಡಿ ಗೋತ್ರಾದಿಗಳೆ ಗಜಘಟಾರೂಪದಿಂ ತಾಗೆಯುಂ ಮ
ತ್ಕರಿ ತಾಂಗಲ್ ತಾನೆ ಸಾಲ್ಗುಂ ವನಜಗಜಘಟಾಬಂಧಮೇ ಬಂಧಮೆಂಬೊಂ
ದು ರಣೋತ್ಸಾಹಂ ಮನೆಕ್ಕುಬ್ಬರಿಸಿರೆ ಸಮರೋತ್ಸಾಹಸಂಪನ್ನನಾದಂ'

ಭರತನ ಸೈನ್ಯದೊಳಗಿನ ಕುದುರೆಗಳ ಕಡಿವಾಣ ಕಳಚಿಬೀಳುವಂಥ ಕೆನೆತದ ಸಂಘಟನವಿದ್ದ, ಆನೆಗಳ ನುಗ್ಗಾಟದಲ್ಲಿ ಅವುಗಳ ಕೊರಳ ಘಂಟೆಯ ಸ್ವಚ್ಛಂದ ಬೆರೆತಿದ್ದ ಯುದ್ಧಭೇರಿನಾದ ಉಚ್ಚೃಂಖಲವಾಗಿದ್ದ ಚಕ್ರವರ್ತಿಯ ಪ್ರಬಲ ಸೈನ್ಯ ಸಾಗರದ ಶಬ್ದವು ಬಾಹುಬಲಿಯ ಕಿವಿಯನ್ನು ತಲುಪಿತಂತೆ.

ಕದನಕ್ರೀಡಾರಸಪ್ರಸ್ಫುಟಮುದಿತಭಟಾವಿರ್ಭವತ್ಸಿಂಹನಾದೋ
ನ್ಮದಮುದ್ದಾಮಾಶ್ವಹೇಷಾವಿಗಳಿತನಿಗಳಂ ದಂತಿಸಂಘಟ್ಟಘಂಟಾ
ನದಿತಸ್ವಚ್ಛಂದಮಾಯೋಧನಪಟಹರವೋಜ್ಜೃಂಭಿತಂ ಶ್ರೋತ್ರಮಂ ಮು
ಟ್ಟಿದುದೆತ್ತಂ ರಾಜರಾಜಪ್ರಬಳಬಲಪಯೋರಾಶಿಗಂಭೀರನಾದಂ'[೨೯]

ಯುದ್ಧದಲ್ಲಿ ಮೊದಲು ಮುನ್ನುಗ್ಗುವವನು ಭರತನಾಗಿದ್ದಾನೆ. ಅಂತು ನೆಗೆದ ಧೂಳಿ ಪ್ರತಾನವು ಅನ್ಯೋನ್ಯ ಘಂಟೆಯ ಠಂಕಾರವನ್ನು ಕೇಳಿ ದ್ವಿಗುಣಗೊಂಡ ರಣ ರಭಸದಿಂದ ಕ್ಷೋಭೆಗೊಂಡ ಮದಿಸಿದಾನೆಗಳ ಕಪೋಲಸ್ಥಲದಗುಂಟ ಸುರಿದ ಮದೋದಕ ಪ್ರವಾಹ ಸಹಸ್ರಗಳಿಂದಲೂ, ಮತ್ತು ಇತರೇತರ ಕೆನೆತದ ಶಬ್ಧವನ್ನು ಕೇಳಿಸಿಕೊಂಡು ಕೋಪಗೊಂಡ ಅಶ್ವಗಳು ಹೂಂಕಾರ ಮಾಡಿ– ಹಲ್ಲಿನಿಂದ ಕಡಿದು ಖಣಿಖಣಿಲೆಂದು ಶಬ್ಧ ಮಾಡುವ ಕಡಿವಾಣದಗುಂಟ ಸುರಿವ ಬುರುಗುಸಹಿತವಾದ ಲಾಲಾರಸ ಪ್ರವಾಹದ ನೊರೆಯಿಂದಲೂ ರಣರಂಗದಲ್ಲೆದ್ದ ಧೂಳು ಕ್ರಮೇಣವಾಗಿ ಕ್ರಮವಾಗಿ ವಿರಳವಾಗತೊಡಗಿತಂತೆ.

ರಸೆ ಪತ್ತಿತ್ತೆತ್ತಮಾಕಾಶದೊಳನಲಪಥಂ ಧಾರಿಣಿಚಕ್ರದೊಳ್ ಕಾ
ಳಸಗೊಂಡತ್ತೆಂನಬಿನಂ ಮಂದಯಿಸಿ ನಿಜಪರಾಲೋಕನವ್ಯಗ್ರದೃಷ್ಟಿ
ಪ್ರಸರಕ್ಕೆಲ್ಲಿತ್ತೊ ಮಾರ್ಗಂ ಕುಲಿಶನಭಶಿಖಾಭೇದಿಬಾಣಂಗಳುಂ ಭೇ
ದಿಸವೆಂಬಂತಾಯ್ತತಿಕ್ಷೋಭದಿನುಯಬಲಕ್ಷೋಭಧೂಳೀಪ್ರತಾಪಂ[೩೦] (೧೪, ೯೫)

ಉಭಯ ಸೈನ್ಯಗಳು ಪರಸ್ಪರ ಹೇಗೆ ಕಾಣುತ್ತಿದ್ದವು ಎಂಬುದನ್ನು ಪಂಪನು ಆದಿಪುರಾಣದಲ್ಲಿ ಹೀಗೆ ವರ್ಣಿಸಿದ್ದಾನೆ. ಶಿಖರದ ರತ್ನಗಳಿಂದ ಉಜ್ವಲವಾದ ಗಿರಿಸಮೂಹ ಆಕಾಶದ ಅಂತರಾಳಕ್ಕೆ ತೂತು ಕೊರೆದಿವೆಯೇನೋ ಎಂಬಂತೆ, ಕಾರ್ಮೋಡಗಳು ವಿದ್ಯುದ್ವಲಯವನ್ನು ಒಳಗೊಂಡಂತೆ, ತಿಮಿಂಗಲದ ಚಲನೆಯಿಂದ ಕ್ಷೋಭೆಗೊಂಡ ಸಮುದ್ರವು ಗಗನವನ್ನು ಘಟ್ಟಿಸಿದಂತೆ, ಹೇರಿದ ಹರಿತವಾದ ಅಸ್ತ್ರಗಳ ಕಾಂತಿ ಸುತ್ತೆಲ್ಲ ವ್ಯಾಪಿಸಿ ಚಕ್ರವರ್ತಿಯ ಸೈನ್ಯದ ಆನೆಯ ದಳ ಭಯಂಕರ ಚಲುವಾಗಿ ಕಂಡಿತು.

ಬಲಧೂಳೀವ್ರಾತಮೇಘಪ್ರಕರತಿಮಿರದೊಳ್ ಶಸ್ತ್ರಜಾಳಾಂಶುವಿದ್ಯು
ತ್ಕುಳವಿದ್ಯೋತಂಗಳಿಂದಂ ಬಲನಿವಹರಜಸ್ಸಂತತಿಧ್ವಾಂತದೊಳ್ ಭೂ
ತಳನಾಥನೀಕವರ್ಮೋತ್ಕರಖಚಿತಮಣಿಶ್ರೇಣಿರತ್ನಪ್ರದೀಪಾ
ವಳಿದೀಪ್ತಿವ್ರಾತದಿಂದಂ ದಿಟಮುಭಯಬಲಂ ಕಂಡುದೊಂದಂದನಾಗಳ್"(೧೪, ೯೬)

ಅಂತು ಒಡ್ಡಿದ ಆನೆಯದಳದ ಆಟೋಟಪದ ನಡುವೆ ಮೇಘಮಾರ್ಗದಲ್ಲಿ ವಿಜೃಂಭಿಸುವ ಚೈತ್ರ ಧ್ವಜ ಧರಿಸಿದ ವಿಜಯ ಗಜದ ಮೇಲೆ ಕುಳಿತು ಉಗ್ರವಾದ ಶತ್ರುಗಳನ್ನು ಬೆದರಿಸುವ ರಣಭೇರಿಗಳ ಧ್ವನಿಯಿಂದ ದಿಕ್ಕು ದಿಕ್ಕೂ ಗಡಚಿಕ್ಕುವಂತೆ ಮಾಡಿ, ಉದ್ವಂಶದ ವಿಂಧ್ಯಪರ್ವತದ ಮೂರ್ಧಾಧಿರೂಢವಾದ ಆನೆಗಳ ಸದ್ದಿಗೆ ಸಿಂಹಗರ್ಜನೆಯುಂಟಾಗಿ ವೀರಕ್ಷತ್ರಚೂಡಾಮಣಿಯಾದ ಭರತ ನೃಪನು ಮುನ್ನುಗ್ಗಲು ಉದ್ಯುಕ್ತನಾದನು.

ಅಷ್ಟರಲ್ಲಿ ಇತ್ತ ಯುವರಾಜ ಬಾಹುಬಲಿಯು ಪಶ್ಚಾನ್ನಿಷಾದಿಯನ್ನೂ ತನ್ನ ವಿಜಯ ಗಜವನ್ನು ಬಲವಾಗಿ ಮುನ್ನೂಕಲು ಅವುಕಲೂ ಅಪ್ಪಣೆ ಮಾಡಿ ತನ್ನ ವಿಜಯಶ್ರೀ ವಿಲಾಸಿನಿಯ ಭ್ರೂಲತೆಯ ವಿಭ್ರಮವನ್ನು ಅನುಕರಿಸುವ ಬಿಲ್ಲನ್ನು ಮಧ್ಯಮನಿಷಾದಿಯ ಕೈಯಿಂದ ತೆಗೆದುಕೊಂಡನು.

ತನ್ನ ಬಾಣಗಳ ಪ್ರಯೋಗದಿಂದ ಭರತನ ಸೈನ್ಯದ ಸ್ಥೈರ್ಯವನ್ನು ತಗ್ಗಿಸುತ್ತಿದ್ದ ಬಾಹುಬಲಿಯು ಅವಿರತವಾಗಿ ಪ್ರಯೋಗಿಸುವ ತನ್ನ ಬಾಣಾವಳಿಯಿಂದ ಅವಿರಳವಾದ ಮದೋದಕವೆಂಬ ತೈಲಪಾಕದಿಂದ ದುರವಲೋಕವಾದ ಅವನ ಸೈನ್ಯದ ಆನೆಗಳ ಗಂಡಸ್ಥಲ ವೆಂಬ ಕಡಾಯಿಗಳನ್ನು ಅಗಲವಾಗಿ ತೂತು ಹೊಡೆಯಲು, ಕಿವಿಯವರೆಗೆ ಸೆಳೆದುಬಿಟ್ಟ ತನ್ನ ಬಾಣಗಳೆಂಬ ಚಾಣಗಳಿಂದ ಅವನ ಸೈನ್ಯದ ಆನೆಗಳ ತಲೆಯಂಬ ಬಂಡೆಗಳನ್ನು ಸೀಳಲು ತನ್ನ ವಿಜಯಗಜದ ಸೊಂಡಿಲಿಂದ ಫೂತ್ಕರಿಸಿದ ಶತ್ರುವೀರ ಯೋಧರ ರಕ್ತದ ತುಂತುರಿಂದ ಅವನ ಮಿತಿಮೀರಿದ ಕೋಪತಾಪವನ್ನು ಆರಿಸಲು ಅವಕಾಶ ಪಡೆಯದೆ ಈಷದ್ ವಿಷಣ್ಣಮುಖನಾಗಿದ್ದ ಬಾಹುಬಲಿ ಕುಮಾರನನ್ನು ಮಂತ್ರಿಪುಂಗವರು ಗಮನಿಸಿ

ಬಿಡು ದುರಾಗ್ರವನ್ನು, ಪ್ರಸನ್ನ ಗಂಭೀರ ಚಿತ್ತದಿಂದ ಅವಧಾರಿಸು ಎಂದು ಸಂಧಾನಕಾರರು ವಿನಂತಿಸಿಕೊಳ್ಳುತ್ತಾರೆ. ಹೀಗೆ ಭರತ ಬಾಹುಬಲಿ ಇಬ್ಬರ ನಡುವೆ ನಡೆಯುವ ಯುದ್ಧ ಪ್ರಸಂಗವನ್ನು ತಿಳಿಸುವಾಗ ಆನೆ-ಕುದುರೆಗಳನ್ನು ಯುದ್ಧದಲ್ಲಿ ಬಳಸಿಕೊಂಡ ಬಗೆಯನ್ನು ಪಂಪನು ವಿವರಿಸಿದ್ದಾನೆ. ಪಂಪನ ಕಾಲದ ಯುದ್ಧದ ರೀತಿಯೇ ಅವನ ಕಾವ್ಯಗಳಲ್ಲಿ ಚಿತ್ರಿತಗೊಂಡಿರಬೇಕು. ಪಂಪನೇ ಒಂದು ಕಡೆ ತಾನು ಕೇವಲ ಕವಿ ಮಾತ್ರನಲ್ಲ, ಕಲಿಯೂ ಆಗಿದ್ದೆನೆಂದು ಹೇಳಿಕೊಂಡಿದ್ದಾನೆ. ಇಲ್ಲಿಯ ಯುದ್ಧ ವರ್ಣನೆಗಳನ್ನು ವಿವರಿಸುವ ಉದ್ದೇಶವಿಷ್ಟೇ. ಆ ಕಾಲದಲ್ಲಿ ಆನೆಗಳ ಬಳಕೆ, ಪರಾಕ್ರಮಗಳನ್ನು ರೂಪಕಗಳಂತೆ ಬಳಸಿದ ಪರಿಯಿಂದ ಆನೆಗಳ ಉಪಯೋಗವನ್ನು ತಿಳಿಯಲು ಸಾಧ್ಯವಿದೆ.

ಪಂಪನ ನಂತರದ ಮತ್ತೊಬ್ಬ ಮಹತ್ವದ ಕವಿ ರನ್ನಮಯ್ಯ. ಬಳೆಗಾರ ಕುಲಕ್ಕೆ ಸೇರಿದ ರನ್ನನು ಬೆಳವಡಿ ನಾಡಿವನು. ಬಾಗಲಕೋಟೆ ಜಿಲ್ಲೆಯ ಮುಧೋಳದವನಾದ ರನ್ನನು ಹಳಗನ್ನಡ ಕಾವ್ಯಪರಂಪರೆಯಲ್ಲಿ ರತ್ನತ್ರಯರಲ್ಲಿ ಒಬ್ಬನೆಂದು ಗುರುತಿಸಲ್ಪಟ್ಟಿದ್ದಾನೆ. ಈತನು ತನ್ನ ಸಾಹಸಭೀಮ ವಿಜಯದಲ್ಲಿ ತನ್ನ ಆಶ್ರಯದಾತನಾದ ಸತ್ಯಾಶ್ರಯನಿಗೆ ಭೀಮನನ್ನು ಹೋಲಿಕೆ ಮಾಡಿ ಸಾಹಸಭೀಮ ವಿಜಯವನ್ನು ಬರೆದಿದ್ದಾನೆ. ಇವನ ಕಾವ್ಯದ ವಸ್ತು ಸಹ ಮಹಾಭಾರತವೆ. ಆದರೆ ಪಂಪನಲ್ಲಿ ಅರ್ಜುನನಿರುವಂತೆ ಇವನಲ್ಲಿ ಭೀಮ ಕಾವ್ಯದ ಕೇಂದ್ರಬಿಂದು. ಅವನ ಕಾವ್ಯದ ಮೊದಲ ಆಶ್ವಾಸದ ಹತ್ತನೆಯ ಪದ್ಯದಲ್ಲಿ ಗಣಪತಿಯನ್ನು ಸ್ಮರಿಸುವ ಪದ್ಯವೊಂದಿದೆ.

'ಮದಮಣವಿಲ್ಲ ದಾನಗುಣದಿಂ ನೆಗಳ್ದುಂ ನೃಪಸಿಂಹನಾಗಿಯುಂ
ವಿದಿತವಿಶುದ್ಧಭದ್ರಗುಣನಂತೆ ವಿರುದ್ಧಮಿದೆಂಬಿನಂ ನಿಜಾ
ಭ್ಯುದಯನಿವೇದದೀರ್ಘಕರಮೊಪ್ಪೆ ಜಗತ್ಪ್ರಿಯನಾದ ದೇವನಂ
ಕದ ಗಣನಾಯಕಂ ವರದನಕ್ಕೆಮಗಮ್ಮನ ಗಂಧವಾರಣಂ'[೨] (೧-೧೦)

ಇಲ್ಲಿ ಮದೋದಕವನ್ನು ಸುರಿಸುತ್ತಿದ್ದರೂ ಮದವೆಂಬುದು ಎಷ್ಟೂ ಇಲ್ಲ. ಜನರನ್ನು ಕಾಪಾಡುವ ಶ್ರೇಷ್ಠನಾದ ಇವನು ಭದ್ರ ಜಾತಿಯ ಆನೆಯ ಗುಣವುಳ್ಳವನು. ವಿರುದ್ಧ ವರ್ತನೆಗಳಿಂದ ಶೋಭಿಸುತ್ತ ತನ್ನ ಅತಿಶಯ ಅಭ್ಯುದಯವನ್ನು ಸೂಚಿಸುವ ದೀರ್ಘ ಸೊಂಡಿಲಿನಿಂದ ಚೆಲುವಾಗಿ ಜಗತ್ತಿಗೆಲ್ಲ ಪ್ರಿಯನಾದ ದೇವಗಣ ನಾಯಕನು ನಮಗೆ ವರವನ್ನು ನೀಡಲಿ ಎಂದು ಸ್ಮರಿಸುತ್ತಾನೆ.

ಆನೆಯ ಗುಣ ಸ್ವಭಾವವನ್ನು ತಿಳಿಸುವ ಮತ್ತೊಂದು ಪದ್ಯ ಈ ಕಾವ್ಯದಲ್ಲಿದೆ.

ನೆಟ್ಟನೆ ವಾಸವಂಗಮೃತವಾರಿಧಿಯೊಳ್ ಸುರಗಂಧವಾರಣಂ
ಪುಟ್ಟೆ ಸುರೇಂದ್ರರಾಜ್ಯಮುದಿತೋದಿತಮಾದುದುನ ದಾನದಿಂದೊಡಂ

ಬಟ್ಟರೆ ಭದ್ರಲಕ್ಷಣ ಗುಣಾನ್ವಿತನಮ್ಮನ ಗಂಧವಾರಣಂ
ಪುಟ್ಟೆ ನರೇಂದ್ರರಾಜ್ಯಮುದಿತೋದಿತಮಾಹವಮಲ್ಲದೇವನಾ'[೩೩] (೧-೧೧)

ಅಮೃತ ಸಮುದ್ರದಲ್ಲಿ ದೇವೇಂದ್ರನಿಗೆ ಐರಾವತ ಗಜವು ಹುಟ್ಟಿ ಬಂದೊಡನೆ ಇಂದ್ರನ ರಾಜ್ಯವು ಉತ್ತರೋತ್ತರವಾಗಿ ಅಭಿವೃದ್ಧಿ ಹೊಂದಿತು. ಆ ಆನೆಯ ಗುಣದಂತೆ ದಾನಗುಣದಿಂದ ಶೋಭಿಸುತ್ತ ಭದ್ರ ಎಂಬ ಆನೆಯ ಗುಣಲಕ್ಷಣಗಳನ್ನುಳ್ಳ ಅಮ್ಮನ ಗಂಧವಾರಣನೆನಿಸಿದ ಸತ್ಯಾಶ್ರಯನು ಹುಟ್ಟಿದ ತರುವಾಯ ಅಹಮಲ್ಲದೇವನ ರಾಜ್ಯವೂ ಸಹ ಉತ್ತರೋತ್ತರವಾಗಿ ಅಭಿವೃದ್ಧಿ ಹೊಂದಿತು ಎಂದು ತಿಳಿಸುತ್ತಾನೆ.

ನೆಗಳ್ದರಿಘೂರ್ಜರದ್ವಿಪಘಟಾಳಿಗೆ ತನ್ನಯ ಸೂಚಿಯಾನೆ ತೊ
ಟ್ಟಗೆ ಸಮರಾಗ್ರದೊಳ್ ಪರಿಯೆ ಪಿಂತಣೆ ಸಂದವು ರಾಜಪುತ್ರರಾ
ನೆಗಳೆನೆ ಮನ್ನಮೆಂಬ ಬಳಿಕೆಂಬ ಜನೋಕ್ತಿಯೊಳಾಯ್ತು ಸೂಚಿಶ
ಕ್ತಿಗೆ ನೃಪನಾನೆ ದಾರದ ಮೊದಲಾದುವು ರಾಜಕುಮಾರರಾನೆಗಳ್[೩೪](೧-೧೬)

ರನ್ನನ ಕಾವ್ಯದಲ್ಲಿ ಯುದ್ಧ ಪ್ರಸಂಗದ ನಾಟಕೀಯ ವಿವರಣೆ ನೋಡಿ

'ಕರಿಯಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್ ಮತ್ಸಹೋ
ದರರಂ ಕೋಪದೆ ತಿಂದುದರ್ಕೆರಡುಗೊಳ್ ದುಶ್ಶಾಸನೋರಃ ಸ್ಥಳ
ಕ್ಷರದಸ್ರಾಂಬುವನಾರ್ದು ಪೀರ್ದ ಮುಳಿಸಿಂಗಂ ಮೂರುಗೊಳ್ಳೆಂದು ಮ
ತ್ಸರದಿಂದೋವದೆ ಪೊಯ್ದನೆತ್ತಿ ಗದೆಯಂ ದುರ್ಯೋಧನಂ ಭೀಮನಂ'[೩೫]

ಎಂದು ದುರ್ಯೋಧನನು ಭೀಮನನ್ನು ಮೂದಲಿಸುತ್ತಾನೆ. ಆನೆ ಕಳಿಂಗ ಸರ್ಪಗಳನ್ನು ನುಂಗಿ ನೊಣೆದೆನೆಂಬ ದರ್ಪಕ್ಕೆ ಇದೋ ನನ್ನ ಉತ್ತರ ಎಂದು ಹೇಳುತ್ತಾ ಭೀಮನ ವಿರುದ್ಧ ದುರ್ಯೋಧನನು ಗಧಾಪ್ರಹಾರ ಮಾಡುತ್ತಾನೆ. ರನ್ನನು ದುರ್ಯೋಧನನನ್ನು ಒಂದು ಆನೆಗೆ ಹೋಲಿಸಿದ್ದಾನೆ. ರನ್ನನ ಗದಾಯುದ್ಧ ಕೃತಿಯಲ್ಲಿ ಭೀಮಸೇನನು 'ಕುದುರೆಗನೊಂದೆ ಪೊಯ್ಲಿಂ, ಮದಕರಿಗಳನೆರಡೆ ಪೊಯ್ಲಿಳಿರ್ಕಡಿ ಮಾಡ ಎಂದು ಹೇಳುತ್ತಾನೆ. ಸೊಕ್ಕಿನ ಆನೆಗಳನ್ನು ತನ್ನ ಗದೆಯ ಎರಡು ಏಟಿನಿಂದಲೂ ಕುದುರೆಗಳನ್ನು ಒಂದೇ ಏಟಿಗೂ ಸೀಳಿಬಿಡುವುದಾಗಿ ಭೀಮಸೇನ ಹೇಳುತ್ತಾನೆ. ಇದೇ ಕಾವ್ಯದಲ್ಲಿ ರಣರಂಗದ ಭೀಕರತೆಯನ್ನು ಹೇಳುವಾಗ

'ಕರಿ ತುರಗನರಕಳೇಬರ
ಕರಾಳರಣರಂಗದಲ್ಲಿ ಬರವರ ಕಂಡಂ' ಆನೆ, ಕುದುರೆ, ಮನುಷ್ಯರ ಮೃತದೇಹಗಳಿಂದ ರಣರಂಗ ತುಂಬಿಹೋಗಿರುವುದು ನೋಡುಗರಿಗೆ ಕಾಣುತ್ತಿತ್ತು ಎಂದು ರನ್ನನು ವರ್ಣಿಸುತ್ತಾನೆ. ಪಾಂಡವರ ಸೈನ್ಯವು ಕೌರವರೊಂದಿಗೆ ಯುದ್ಧ ಮಾಡುವಾಗ

'ತುರಗಕಬಂಧದೊಳ್ ನರಸರಂಗಳ ವೀರಮೆಹಾಕ ಬಂಧದೊಳ್
ಕರಿಶಿರಮಾಗ ಮಿಕ್ಕ ಕಟಬಂಧಮೊಳಾಭಟರ ತಗುಳ್ದಡಾ
ತುರಗ ಮುಖಂಬೊಲಾದುದು ವಿನಾಯಕನಂತೆ ವೊಲಾಯ್ತು...[೩೬]

ಕುದುರೆಗಳ ಕಾಲಡಿಯಲ್ಲಿ ಮನುಷ್ಯರ ರುಂಡಗಳು, ಮುಂಡಗಳಿಗೆ ಹೊಂದಿಕೊಂಡು ಆನೆಗಳ ರುಂಡಗಳು ಬಿದ್ದಿರುವುದನ್ನು ನೋಡಿದರೆ ಆನೆಯ ಮುಖವಿರುವ ವಿನಾಯಕನನ್ನೇ ನೋಡಿದಂತೆ ಕಾಣುತ್ತಿತ್ತು ಎಂದು ವರ್ಣಿಸಲಾಗಿದೆ.

ಗೂರ್ಜರ ಮೇಲೆ ಯುದ್ಧ ಸಾರಿದ ಸತ್ಯಾಶ್ರಯನು ತನ್ನ ಆನೆಯನ್ನು ನುಗ್ಗಿಸಿ ಅದರ ಸಹಾಯದಿಂದ ಶತ್ರುಪಡೆ ನಾಶ ಮಾಡಿ ಸೂಜಿಯ ಹಿಂದೆ ದಾರವೆಂಬ ಲೋಕೋಕ್ತಿಯಂತೆ ಅವರ ಆನೆಗಳನ್ನೆಲ್ಲಾ ತನ್ನ ಕೈವಶ ಮಾಡಿಕೊಂಡನು

"ರಣದೊಳರಾತಿವಾರಣಘಟಾಳಿಯನೊರ್ವನೆ ಗೆಲ್ವನೊಂದು ವಾ
ರಣದೊಳನೂನದಾನಗುಣದರ್ಪಿತ ಪೂರಣ ನಿಷ್ಟಾತುಷ್ಟದಾ
ರಣನವದಾತಕೀರ್ತಿಗೃಹತೋರಣನನ್ಯನರೇಂದ್ರಗಂಧವಾರಣಂ
ರಣಮದವಾರಣಂ ವಿಜಯಕಾರಣನಮ್ಮನ ಗಂಧವಾರಣಂ'[೩೭]

ಬೇಡುವವರ ಇಷ್ಟಗಳನ್ನು ತನ್ನ ದಾನಗುಣಗಳಿಂದ ಪೂರೈಸುವವನೂ, ಕೀರ್ತಿ ಮಂದಿರಕ್ಕಿರುವ ತೋರಣ ಸ್ವರೂಪನೂ, ಶತ್ರುರಾಜರೆಂಬ ಆನೆಗಳ ಸೊಕ್ಕನ್ನು ಅಡಗಿಸಿದವನೂ, ಯುದ್ಧ ಜಯಗಳಿಗೆ ಕಾರಣನಾದವನೂ, ಅಮ್ಮನ ಗಂಧವಾರಣನೂ ಆಗಿರುವ ಸತ್ಯಾಶ್ರಯ ದೇವನು ಯುದ್ಧದಲ್ಲಿ ತನ್ನೊಂದು ಆನೆಯಿಂದಲೇ ವೈರಿಗಳ ಗಜ ಸೈನ್ಯವನ್ನು ಗೆದ್ದನು.

ಗಿರಿದುರ್ಗಗಳನೇರಿಯನ್ಯಪುರದೊಳ್ ರತ್ನಾಳಿಕೇರಾಂಬುವಂ
ಮರವಾಯ್ದೊಡ್ಡಿರೆ ಕೊಂಡುಬಂದುದಪರಾಂಭೋರಾಶಿಯೊಳ್ ಪುಟ್ಟುಗ
ಪ್ಪುರದೊಳ್ ಬೂದಿಯನೊಟ್ಟಿಕೊಂಡುದದರಿಂ ಮತ್ತೇಭವಿಕ್ರೀಡಿತಂ
zÉgÉ ÉÆÃ ÀUÀzÀ ÁgÀ « ÄzÀ£ÀÀÀ ª ÀÁVzÀÆzÉÃ (೧–೩೦; ಸಾಹಸಭೀಮ ವಿಜಯಂ, ೨೦೧೧, ಪು. ೧೦)

ಗಂಧಗಜವು ಬೆಟ್ಟಗಳನ್ನೇರಿ ಮರಗಳನ್ನಾಯ್ದು ಒಡೆದ ತೆಂಗಿನ ಕಾಯಿಯ ನೀರನ್ನು ಹೀರಿ ನೀರಾಟವಾಡಿ ಮೈಮೇಲೆ ಧೂಳನ್ನು ಹೊಯ್ದುಕೊಳ್ಳುವಂತೆ ಸತ್ಯಾಶ್ರಯನು ವೈರಿಗಳ ಗಿರಿದುರ್ಗಗಳನ್ನು ಏರಿ ಪಶ್ಚಿಮ ಸಮುದ್ರದಲ್ಲಿ ಹೊಕ್ಕು ರತ್ನಸಮೂಹವನ್ನು ಎತ್ತಿಕೊಂಡು ಬಂದು ಹುಟ್ಟುಗಪ್ಪುರವನ್ನು ತೊಡೆದುಕೊಂಡನು. ಈತನಿಗೆ ಅಮ್ಮನ ಗಂಧವಾರಣನೆಂಬ ಬಿರುದು ಪೂರ್ಣವಾಗಿ ಅನ್ವರ್ಥವಾಗುತ್ತದೆ.

ಮುನಿದಿರ್ಪತ್ತೊಂದು ಸೂಳ್ ಕ್ಷತ್ರಿಯರನರಸಿ ಕೊಂದಿಕ್ಕಿದಾ ರಾಮನಿಂದಿ
ತ್ತ ನರೇಂದ್ರನ್ ಪೊಕ್ಕರಿಲ್ಲೊರ್ಬರುಮಿವನಧಿಕ್ಕಂ ಪೊಕ್ಕನೆಂದಾ ಪವಣ್ ಬ
ರ್ಪಿನಮಿರ್ಪತ್ತೊಂದನಿತ್ತಂ ಕರಿಗಳನಪರಾದಿತ್ಯನಂತೀಯದದಂದಾ
ತನಪಿರ್ಪತ್ತೊಂದು ವಂಶಂ ಕಿಡೆ ಮುಳಿದನೊ ಸತ್ಯಾಶ್ರಯಂ ಸಾರ್ವಭೌಮಂ'[೩೮]

ಕೋಪಾವೇಶದಿಂದ ಕ್ಷತ್ರಿಯರನ್ನು ಹುಡುಕಿ ಹುಡುಕಿ ಕೊಂದ ಪುರಾಣ ಕಾಲದ ಪರಶುರಾಮನು ಮಾತ್ರ ಸಮುದ್ರವನ್ನು ಹೊಕ್ಕು ಒತ್ತರಿಸಿದ್ದನು. ಆತನ ತರುವಾಯ ಯಾವೊಬ್ಬ ರಾಜನೂ ಆ ರೀತಿಯ ಕಾರ್ಯಕ್ಕೆ ಕೈಹಾಕಿರಲಿಲ್ಲ. ಸತ್ಯಾಶ್ರಯನು ಮರಳಿ ಸಮುದ್ರ ಹೊಕ್ಕು ಒತ್ತರಿಸಿದನು. ಹೀಗಾಗಿ ಇವನು ಮಿಗಿಲಾದವನೆಂದು ತಿಳಿದು ಅಪರಾದಿತ್ಯನು ಇಪ್ಪತ್ತೊಂದು ಆನೆಗಳನ್ನು ಕಪ್ಪವಾಗಿ ನೀಡಿದನು ಹಾಗೆ ನೀಡದೇ ಹೋಗಿದ್ದರೆ ಇಪ್ಪತ್ತೊಂದು ತಲೆಮಾರಿನವರೆಗೂ ಅಪರಾದಿತ್ಯನ ವಂಶ ನಾಶವಾಗುತ್ತಿರಲಿಲ್ಲವೆ ಎಂದು ರನ್ನನು ಕೇಳುತ್ತಾನೆ.

"ದೆಸೆ ದೆಸೆಗೋಡಿದನ್ಯಕರಿ ದಿಕ್ಕರಿಯಾದುದರಾತಿಭೂಭುಜ
ಪ್ರಸರಮೆ ದಿಕ್ಪತಿ ಪ್ರಸರಮಾದುದು ವೈರಿಬಲಂ ಕುಮಾರಿಯರ್
ಬೆಸೆಗೊಳೆ ದಿಕ್ಕುಮಾರಿಯರೆನೆಲ್ ದೊರೆಯಾದುದದರ್ಕೆ ಮೆಚ್ಚಿ ಬ
ಣ್ಣಿಸಲಭಿಯೋಗಮಾಯ್ತೆನಗೆ ಸಾಹಸಭೀಮನ ಸಾಹಸಂಗಳಂ'[೩೯]

ಯುದ್ಧ ಭೂಮಿಯಲ್ಲಿ ಸತ್ಯಾಶ್ರಯನನ್ನು ಎದುರಿಸಲಾಗದೆ ದಿಕ್ಕು ದಿಕ್ಕಿಗೆ ಓಡಿಹೋದ ಶತ್ರು ಗಜಗಳೆ ದಿಗ್ಗಜಗಳಾದವು. ಹಿಮ್ಮೆಟ್ಟಿ ಓಡಿಹೋದ ವೈರಿರಾಜರೆ ದಿಕ್ಪತಿಗಳಾದರು. ಶತ್ರುರಾಜರ ಕುಮಾರಿಯರೆ ದಿಕ್ಕುಮಾರಿಯರಾದರು. ಹೀಗೆ ಸಾಹಸಭೀಮನಾದ ಸತ್ಯಾಶ್ರಯನ ಸಾಹಸಗಳನ್ನು ಬಣ್ಣಿಸುವ ಆಸಕ್ತಿ ನನಗಾಯಿತು ಎಂದು ರನ್ನ ತಿಳಿಸುತ್ತಾನೆ.

"ಸಮದೇಭಕುಂಭಭೇದನ
ಸಮಯೋಗನಖಂಗೆ ಹರಿಗೆ ಮೃಗರಿಪುವೆಸರು
ತ್ತಮಿಕೆಯೆ ನಿನಗೆ ಜರಾಸಂ
ಧಮಥನ ಕುರುವೈರಿವೆಸರದೇನುನ್ನತಿಯೇ"[೪೦]

ಮದದಾನೆಯ ನೆತ್ತಿಯನ್ನು ತನ್ನ ಕ್ರೂರವಾದ ಉಗುರಿಂದ ಸೀಳಿ ಅದನ್ನು ಕೊಂದು ಹಾಕುವ ಜಿಂಕೆಗಳ ವೈರಿ ಎಂಬ ನಾಮವೇನು ಹೆಮ್ಮೆಯದೆ? ಜರಾಸಂಧನಂತಹ ಮಹಾ ಬಲಿಷ್ಠನನ್ನೇ ಸೀಳಿ ಒಗೆದ ನಿನಗೆ ಕುರುವೈರಿ ಎಂಬ ಹೆಸರು ಹಿರಿಯದೆ ಎಂದು ಪ್ರಶ್ನಿಸುತ್ತಾನೆ.

"ಶ್ರೀ ಮದಮೃತಾಂಶುವಂಶ
ವ್ಯೂಮಾಮೃತಕಿರಣನಮರವಂದಿತಚರಣಂ

ಭೀಮಭುಜದಳಿತರಿಪುನೃಪ
ಸಾಮಜನವದಾತಕೀರ್ತಿ ಸಾಹಸಭೀಮಂ' (ಸಾಹಸಭೀಮ ವಿಜಯಂ, ಅಶ್ವಾಸ–೩, ಪದ್ಯ–೧; ೨೦೧೧, ಪುಟ ೪೧)

ಘನತೆವೆತ್ತ ಸೋಮವಂಶವೆಂಬ ಆಕಾಶಕ್ಕೆ ಚಂದ್ರನಂತಿರುವವನೂ ಗೌರವಾನ್ವಿತನೂ ತನ್ನ ಪ್ರಚಂಡ ಭುಜಬಲದಿಂದ ಶತ್ರುರಾಜನೆಂಬ ಆನೆಗಳನ್ನು ಹುಡಿಗುಟ್ಟಿದವನೂ ಪರಾಕ್ರಮಿಯೂ ಆದ ಭೀಮಸೇನನು ನಿಷ್ಕಂಳಂಕಿತ ಕೀರ್ತಿಯವನು.

ಬೆಟ್ಟಗಳುಗ್ರಾಶನಿಸಂ
ಘಟ್ಟದೆ ಕೆಡುವಂತೆ ಭೀಮಭೀಮಗದಾಸಂ
ಘಟ್ಟದೆ ಕೆಡೆದೊಡನೆ ಪಡಲ್ವಟ್ಟವು ಕಾಳಿಂಗರಾಜಸಮರಗಜಂಗಳ್"[೪೧]

ಘೋರವಾದ ವಜ್ರಾಯುಧದ ಪೆಟ್ಟಿನಿಂದ ಬೆಟ್ಟಗಳು ಪುಡಿಗುಟ್ಟುವಂತೆ ಭೀಮನ ಗದೆಯ ಹೊಡೆತದಿಂದ ಯುದ್ಧಗಜಗಳು ಪಟಪಟನೆ ಉದುರಿ ಬಿದ್ದವು.

"ದೆಸೆದೆಸೆಗೀಡಾಡಿದ ಕರಿ
ದೆಸೆಯಾನೆಗಳಬ್ಧಿಯೊಳಗೆ ನೀರಾನೆಗಳಾ
ಗಸದೊಳಮವಭ್ರ ಗಜಮೆನೆ
ಪೊಸತಾಗಿರೆ ಭಿನ್ನ ಸೃಷ್ಟಿವಡೆದನೊ ಭೀಮಂ"[೪೨]

ದಿಕ್ಕು ದಿಕ್ಕಿಗೆ ಬೀಸಾಡಿದ ಆನೆಗಳೆ ದಿಗ್ಗಜಗಳು, ಕಡಲಲ್ಲಿ ಬೀಸಾಡಿದ ಆನೆಗಳೆ ನೀರಾನೆಗಳು, ಆಕಾಶಕ್ಕೆ ಚಿಮ್ಮಿ ಎಸೆದವುಗಳೇ ಸ್ವರ್ಗದಾನೆಗಳು ಎಂಬಂತೆ ಭೀಮಸೇನನು ಹೊಸ ಸೃಷ್ಟಿಯನ್ನೇ ಉಂಟುಮಾಡಿದನು.

"ತನಗೆ ಹತೋಶ್ವತ್ಥಾಮೋ
ಯೆನಲಕ್ಕುಮೆ ಯಮಪುರಕ್ಕೆ ಗುರುಪೆಡೆಯೊಳ್
ಘನಕುಂಜರ ಎಂದೆಂಗುಮೆ
ಆನರಂಜನೆಗರಿಯಲಾದುದಿಲ್ಲರಮಗನಂ"[೪೩]

ಅಶ್ವತ್ಥಾಮನ ವಧೆಯಾಯಿತು ಎಂದು ನುಡಿದು ದ್ರೋಣರು ಮಗನ ಜೀವವನ್ನು ಹುಡುಕುತ್ತ ಯಮಪುರಿಗೆ ತೆರಳುವಾಗ ಅಶ್ವತ್ಥಾಮನೆಂಬ ಮನುಷ್ಯನು ಹತನಾಗಲಿಲ್ಲ, ಆ ಹೆಸರಿನ ಆನೆ ಹತಗೊಂಡಿದ್ದು ಎಂದು ನುಡಿದುದು ಸರಿಯೆ.

"ವನಿತೆಯ ಕೇಶಮಂ ಸಭೆಯೊಳೆನ್ನನುಜನು ತೆಗೆವಲ್ಲಿ ಗಂಡನಾ
ಗನೆ ಭಗದತ್ತಾನೆ ಬರಿಯೆಲ್ವುಡಿವನ್ನೆಗಮೊತ್ತೆ ಗಂಡನಾ

ಗನೆ ಕೊಲಲೊಲ್ಲದಂಗಪತಿ ಬಿಲ್ಲೊಳೆ ಕೊಂಡೆರೆವಲ್ಲಿ ಗಂಡನಾ
ಗನೆ ಕುರುಬಾಲ ಸಂವಹರಣಮಾತ್ರದೆ ಮಾರುತಿ ಗಂಡನಾದನೇ"[೪೪]

ತನ್ನ ಹೆಂಡತಿಯ ತಲೆಗೂದಲನ್ನು ನನ್ನ ಸಹೋದರ ಹಿಡಿದೆಳೆವಾಗ ಇವನು ಶೂರನಾಗಲಿಲ್ಲ, ಪಕ್ಕೆಯ ಮೂಳೆ ಮುರಿಯುವಂತೆ ಭಗದತ್ತನೆಂಬ ಆನೆಯು ಬಂದು ಒತ್ತುತ್ತಿರುವಾಗ ಇವನು ಶೂರನಾಗಲಿಲ್ಲ, ಇವನನ್ನು ಕೊಲ್ಲಲೆಣಿಸದೆ ಕರ್ಣನು ಬಿಲ್ಲಿನ ಕೊನೆಯಿಂದ ಹಿಡಿದೆಳೆದಾಗ ಇವನು ಶೂರನಾಗಲಿಲ್ಲ, ಕೌರವ ಬಾಲಕರನ್ನು ಕೊಂದ ಮಾತ್ರದಿ ಇವನು(ಭೀಮಸೇನನು) ಶೂರನಾದನೆ?

"ಕುದುರೆಗಳನೊಂದೆ ಪೊಯ್ಲಿಂ
ಮದಕರಿಗಳನೆರಡೆ ಪೊಯ್ಲೊಳಿರ್ಕಡಿ ಮಾಡ
ಲ್ಕದೆ ಖಡ್ಗಧರರ ಭುಜಬಲ
ಮದೇಂ ನಿಮಿರ್ಚಿದುದೊ ರಣದೊಳದ್ಭುತ ರಸಮಂ"[೪೫]

ಕುದುರೆಗಳನ್ನು ಒಂದೇ ಏಟಿನಿಂದ, ಮದಗೊಂಡ ಆನೆಗಳನ್ನು ಎರಡೇ ಏಟಿನಿಂದಲೂ ಎರಡೆರಡು ಹೋಳಾಗಿ ಸೀಳುತ್ತಿದ್ದ ಖಡ್ಗವೀರರ ತೋಳ್ಬಲವು ರಣಾಂಗಣದಲ್ಲಿ ಅದ್ಭುತರಸವನ್ನು ಬಿತ್ತರಿಸಿತು.

"ತುಂಗರಿಪುದಂತಿದಂತಾ
ಲಿಂಗನಮುಂ ದಿವಿಜಸುಂದರೀತುಂಗಕುಚಾ
ಲಿಂಗನಮುಮೊಡನೆ ವೀರಭ
ಟಂಗಾದುದು ರಣದೊಳಣ್ಮಿದಂಗರಿದುಂಟೇ

ಶತ್ರುಗಳ ಆನೆಗಳನ್ನು ಎದುರಿಸಿ ಅವುಗಳ ತೀಕ್ಷ್ಣವಾದ ಕೋರೆಗಳ ಆಲಿಂಗನವು ದೇವಕನ್ನೆಯರ ತೋರಮೊಲೆಗಳ ಆಲಿಂಗನವೂ ವೀರಯೋಧನಿಗೆ ಏಕಕಾಲಕ್ಕೆ ಉಂಟಾದವು. ಯುದ್ಧದಲ್ಲಿ ಪರಾಕ್ರಮಿಯಾದವರಿಗೆ ಅಸಾಧ್ಯವಾದುದುಂಟೆ.

ಕರಿಗಳ ಸಂಘಟ್ಟದಿನೊಗೆ
ವುರಿಗಳ ಬಕ್ಕಡಗಳರಿಯ ಜೋ
ದರ ಬಾಣಮಗ್ನಿಬಾಣಂ
ಕರಚಕ್ರಮೋರಿಚಕ್ರಮೆನಿಸಿದುದೆನಸುಂ

ಆನೆಗಳ ಕೋರೆಗಳ ಘರ್ಷಣೆಯಿಂದ ಉದ್ಭವಿಸಿದ ಜ್ವಾಲೆಗಳ ಬಕ್ಕಡಗಳು ವೈರಿಗಳ ಬಕ್ಕಡಗಳೆನಿಸಿದವು, ಆನೆ ಸವಾರರು ಬಿಟ್ಟ ಬಾಣಗಳು ಅಗ್ನಿ ಬಾಣಗಳೆನಿಸಿದವು, ಕೈಯಿಂದ ಬೀಸಿದ ಚಕ್ರವು ಸೂರ್ಯಮಂಡಲವೆನಿಸಿತು.

ಇನಿಸಿನಿಸು ತಿಂಬೆಮೊರ್ಮೆಯೆ
ತಿನೆ ತವುಗುಮಿದೆಂದು ತಾಮುಮಾನೆಯ ಹೆಣನಂ
ತಿನಲಾರದೆ ಪೆರರ್ಗಿಕ್ಕದೆ
ಮನಮಂ ಪಸುತಿರ್ದುವಲ್ಲಿ ಲೋಭಿ ಮರುಳ್ಗಳ್"[೪೬]

ಒಮ್ಮೆಗೇ ತಿಂದುಬಿಟ್ಟರೆ ಮುಗಿದುಹೋಗುತ್ತದೆ, ಸ್ವಲ್ಪ ಸ್ವಲ್ಪವಾಗಿ ನಿಧಾನಕ್ಕೆವಾಗಿ ತಿನ್ನೋಣ ಎಂಬ ಆಸೆಯಿಂದ ಆನೆಯ ಹೆಣವನ್ನು ತಾವೂ ತಿನ್ನದೆ ಪರರಿಗೂ ಕೊಡದೆ ಲೋಭಿಗಳಾದ ಪಿಶಾಚಿಗಳು ಇಬ್ಬಗೆಯಿಂದ ಒದ್ದಾಡಿದವು.

"ಇದು ಭೀಮಮಂ ದೇವ ಕಾಳಿಂಗನ ಗಜಘಟೆಯಂ ಕೊಂಡ ತಾಣಂ ಭರಂಗೆ
ಯ್ದಿದು ಭೀಮಂ ದೇವ ಕೌರವ್ಯರನನಬರುಮಂ ತಿಂದು ತಾಣಂ ಮೊಗೆಂಬೊ
ಕ್ಕಿದು ಭೀಮಂ ದೇವ ದುಶ್ಯಾಸನರುಧಿರಮುಮಂ ತೀರ್ದು ತಾಣಂ ಛಲಂಬ
ಟ್ಟಿದು ಭೀಮಂ ದೇವ ಧಾತ್ರೀಸುತನಿಭದೊಳಿಭಂ ಪೋರ್ದುವೊಲ್ ಪೋರ್ದ ತಾಣಂ"[೪೭]

ಕಳಿಂಗರಾಜನ ಗಜಸೈನ್ಯವನ್ನು ಭೀಮನು ಕೊಂದ ಸ್ಥಳವಿದು, ರಭಸದಿಂದ ಕೌರವರೆಲ್ಲರನ್ನೂ ಭೀಮನು ನುಂಗಿದ ಸ್ಥಳವಿದು, ದೇವಾ, ದುಶ್ಯಾಸನನ ನೆತ್ತರನ್ನು ಭೀಮನು ಹೀರಿದ ಸ್ಥಳವಿದು, ದೇವಾ ಭಗದತ್ತನ ಆನೆಯೊಡನೆ ತಾನೂ ಒಂದು ಆನೆಯಂಬಂತೆ ಭೀಮನು ಹೋರಾಡಿದ ಸ್ಥಳವಿದು.

ರನ್ನನ ತರುವಾಯ ಗುರುತಿಸುವ ರತ್ನತ್ರಯರಲ್ಲಿ ಒಬ್ಬನಾದ ಪೊನ್ನನು ಶಾಂತಿ ಪುರಾಣ ಎಂಬ ಕೃತಿ ರಚಿಸಿದನು. ಇವನು ತನ್ನ ಕಾವ್ಯದಲ್ಲಿ ಒಂದು ಕಡೆ ಅಶ್ವಸೈನ್ಯ ನಾಶವಾದ ಬೆನ್ನಿಗೇ ಗಜಸೈನ್ಯದ ನಡುವೆ ಯುದ್ಧ ಆರಂಭವಾಗುತ್ತಿತ್ತು' ಎಂದು ಹೇಳಲಾಗಿದೆ.

ನೇಮಿನಾಥ ಪುರಾಣದಲ್ಲಿ 'ತುಳಿಯ ಪದಾತಿಯಂ ತವೆ ತುರಂಗದಳಂ–
ತುರಂಗಗಳಂರಥಂ
ತುಳಿಯೆ ರಥಂಗಳಂ ತುಳಿಯೆ ದಂತಿಗಳಿಂತರಿ ಸೇನೆಮಿಳ್ತುತೊ'[೪೮]

ದಿಗ್ಗಜದ ಸೊಕ್ಕಿಳಿದು ಹೋಗುವಂತೆ ತಾಳಹಸ್ತಿಯನೇರಿದ ಸಿಂಹವು ಗರ್ಜಿಸಿದೊಡನೆ ಕಾಲಾಳುಗಳನ್ನು ಕುದುರೆಗಳೂ, ಕುದುರೆಗಳನ್ನು ರಥಗಳೂ, ರಥಗಳನ್ನು ಆನೆಗಳೂ ತುಳಿದವೆಂಬ ವರ್ಣನೆ ನೇಮಿನಾಥ ಪುರಾಣದಲ್ಲಿದೆ.

ಪಂಪ ರನ್ನರಂತೆ ಕನ್ನಡದಲ್ಲಿ ಪ್ರಸಿದ್ಧವಾದ ಮಹಾಭಾರತ ಕಥೆಯನ್ನು ಕಾವ್ಯವಾಗಿಸಿದವನು ನಡುಗನ್ನಡ ಕಾಲದ ಕುಮಾರವ್ಯಾಸನು. ತನ್ನ ಕಾಲದ ಯುದ್ಧ ರೀತಿಯನ್ನೇ ಮಹಾಭಾರತದ ಯುದ್ಧದ ವರ್ಣನೆಯಲ್ಲಿ ಕವಿ ಅಭಿವ್ಯಕ್ತಿಸಿದ್ದಾನೆ.

ಶಿವಕೋಟ್ಯಾಚಾರ್ಯನ ವಡ್ಡಾರಾಧನೆಯಲ್ಲಿ ಸುಕೌಶಳಸ್ವಾಮಿಯ ಕಥೆ ಇದೆ. ಈ ಕಥೆಯಲ್ಲಿ ಕೌಶಲ ದೇಶದ ಅತಿಬಳನಿಗೂ ಕಳಿಂಗ ದೇಶದ ಕಳಿಂಗನಿಗೂ ಯುದ್ಧ ನಡೆದ ಪ್ರಸಂಗದ ವಿವರಣೆ ಬರುತ್ತದೆ. ಆ ಸಂದರ್ಭದಲ್ಲಿ ಗಂಧಭಾಜನ ರಾಜನು ಮತಿಶ್ರುತನೆಂಬ ತನ್ನ ಮಂತ್ರಿಯನ್ನು ಕಳುಹಿಸಿ ಯುದ್ಧ ಮಾಡುವ ಇಬ್ಬರು ಅರಸರಿಗೂ ಸಂಧಿಯನ್ನು ಮಾಡಿಸುತ್ತಾನೆ. ಇದರ ಫಲವಾಗಿ ಗಂಧಭಾಜನ ರಾಜನಿಗೆ ಕಳಿಂಗದ ಅರಸನು ಮಧುಸೂಧನನೆಂಬ ತನ್ನ ರಾಜ್ಯದ ಅಧಿಕಾರಿಯ ಸಂಗಡ ಗಂಧವಾರಣವೆಂಬ ಆನೆಯೊಂದನ್ನು ಕಾಣಿಕೆಯಾಗಿ ಕಳುಹಿಸುತ್ತಾನೆ.

'ಕಳಿಂಗನೆಂಬರಸಂ ಮಧುಸೂಧನನೆಂಬ ಪೆರ್ಗಡೆಯ ಕೈಯೊಳ್ ಮದಾಂಧ ಗಂಧಹಸ್ತಿಯ ಗಂಧಭಾಜನನೃಪತಿಗೆ ಪಾಗುಡಮಟ್ಟಿದೊಡಂ ಸೊರ್ಕಿನಿಂದಂ ಮಸಗಿದುದಂ ಗಂಧಹಸ್ತಿಯಂ ಸುಕೇಶಿನಿ ಕಂಡು ಜಾತಿಸ್ಮರೆಯಾಗಿ ಮೂರ್ಛೆವೋಗಿರ್ದುಳಂ ದಾದಿ ಮೊದಲಾಗಿ ಕೆಲದೊಳಿರ್ದೊರೆಲ್ಲಂ ಚಂದನದ ನೀರ್ಗಳಂ ತಳಿದು ಬೀಸೆ ನೀಡರೆಂದೆಳ್ಚತ್ತಳನ್ನೆ ಗಮರಸನುತ್ತವಳನಾಗಿ ಪರಿತಂದಿದೇನೀಕೆಗೇಕಿಂತಾಯ್ತೆಂದು ಬೆಸೆಗೊಳೆ ದಾದಿಯಂದಳ್ ಸೊರ್ಕಾನೆಯಂ ಕಂಡು ಮೂರ್ಛೆವೋದಳೆಂದು ಪೇಳ್ದೊಡಾ ಮಾತನರಸಂ ಕೇಳ್ದು ಮರುಸೂಳನಾನೆಯಂ ಕಂಡಂಜಡಂತಿರೆ...'[೪೯]

ಆ ಮದಿಸಿದ ಆನೆಯನ್ನು ಕಂಡು ಸುಕೇಶಿನಿಯು ಮೂರ್ಛೆ ಹೋಗುತ್ತಾಳೆ. ಇವಳು ಮೂರ್ಛೆ ಹೋದುದಕ್ಕೆ ಕಾರಣವೇನೆಂದು ಅರಸನು ಕೇಳಿದಾಗ ದಾದಿಯು ಮದಿಸಿದಾನೆಯನ್ನು ಕಂಡು ಮೂರ್ಛೆ ಹೊಂದಿದಳೆಂದು ತಿಳಿಸುತ್ತಾಳೆ. ಈ ಮಾತನ್ನು ಕೇಳಿದ ಅರಸನು 'ವ್ಯಾಳಂಗಳಪ್ಪಾನೆಗಳಂ ತನ್ನ ಚಿತ್ತಾರಿಗರಿಂದಂ ಬರೆಯಿಸಿದಂ'.[೫೦]

ಹೀಗೆ ಚಿತ್ರಕಾರರಿಂದ ಗೋಡೆಗೆಲ್ಲ ಆನೆಯ ಚಿತ್ರಗಳನ್ನು ಬರೆಯಿಸಿದನು. 'ಮತ್ತೊಂದು ದಿವಸಂ ಮುನ್ನಿನ ಗಂಧಹಸ್ತಿಯೊಡನೆ ಬಾರಿಯೊಳ್ ಮೂವತ್ತೆರಡು ಗಜಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿಯಾನೆಯಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿಯೇರೆಯಂಕುಸಮಂ'[೫೧]

ಹೀಗೆ ಆನೆಯೊಂದಿಗೆ ಮೂವತ್ತೆರಡು ಸಾರಿ ಗಜಕ್ರೀಡೆಗಳನ್ನು ಬಹಳ ಹೊತ್ತಿನವರೆಗೆ ನಡೆಸಿ ಆನೆಯನ್ನು ಬಳಲಿಸಿ ತನ್ನ ವಶಕ್ಕೆ ತಂದುಕೊಂಡನು. ಅದರ ಮೇಲೇರಿ ಅಂಕುಶವನ್ನು ಹೊಳೆಯಿಸುತ್ತ ರಾಣಿಯ ಬಳಿ ಬಂದು ತನ್ನ ಈ ಕ್ರಿಯೆಯಿಂದ ನಿನಗೆ ಮೆಚ್ಚುಗೆಯಾಯಿತೆ ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಪ್ರತಿಕ್ರಿಯೆಯಾಗಿ ಸುಕೇಶಿನಿಯೆಂದಳಿದೇ-ನೆಂಬಾನೆತಗರೊಳೋರಂತಪ್ಪುದು ಚಂದನಮಲಯಮೆಂಬಿ ಪಿರಿಯ ಪರ್ವತದೊಳ್ ಇಂದ್ರನೀಲಮಾಣಿಕದೊಳೋರಂತಪ್ಪ ಬಣ್ಣಮನೊಡೆಯದು ಮಲಯಸುಂದರನೆಂಬಾನೆಯುಂಟು ಹಸ್ತಿಯೂಥಕ್ಕೆರೆಯನಪ್ಪುದು.'[೫೨]

ಆನೆಗಳ ಹಿಂಡಿಗೆ ಒಡೆಯನಾಗಿರುವ ಎಲ್ಲಾ ಕಾಲದಲ್ಲೂ ಸೊಕ್ಕಿನಿಂದ ಕೂಡಿರುವ ಆನೆಯನ್ನು ನೀನು ಹಿಡಿದು ತಂದರೆ ಆನೆಯ ಸವಾರಿಯಲ್ಲಿ ನಿನಗಿರುವ ಪ್ರೌಢಿಮೆಯನ್ನೂ, ಪ್ರೀತಿಯನ್ನೂ ಅರಿಯಬಹುದು ಎಂದು ಸುಕೇಶಿನಿಯು ತಿಳಿಸುತ್ತಾಳೆ. ಆ ಆನೆಯನ್ನು ಹುಡುಕಿಕೊಂಡು ಚಂದನಮಲಯಕ್ಕೆ ಹೋದ ಅರಸನಿಗೆ ಹೆಣ್ಣಾನೆಗಳೊಂದಿಗೆ ಮಾಣಿಕ್ಯದಂತೆ ಹೊಳೆಯುವ ಐರಾವತದಂತಹ ಆನೆಯನ್ನು ಕಾಣುತ್ತಾನೆ. ಹೀಗೆ ಕಂಡ ಆನೆಯನ್ನು ಜೀವಂತವಾಗಿ ಹಿಡಿದು ತರಲಾಗದೆ ಅದರ ರುಂಡವನ್ನು ಹೊತ್ತುತರುತ್ತಾನೆ. ಇದನ್ನು ನೋಡಿ ಮಹಾರಾಣಿಯು ತನ್ನ ಪೂರ್ವಜನ್ಮದ ವೃತ್ತಾಂತವನ್ನು ನೆನಪಿಸಿಕೊಳ್ಳುತ್ತಾಳೆ. ಭವಾವಳಿಯಲ್ಲಿ ತಾನು ಯಾವ ಯಾವ ಜನ್ಮ ತಾಳಿದ್ದೆ, ತಾನೇಕೆ ಮನುಷ್ಯಳಾಗಿ ಹುಟ್ಟವಂತಾಯಿತು ಇತ್ಯಾದಿ ಕಥೆ ಮುಂದುವರಿಯುತ್ತದೆ.

ಕಾರ್ತಿಕ ಋಷಿಯ ಕಥೆಯಲ್ಲಿಯೂ ಪ್ರಾಸಂಗಿಕವಾಗಿ ಆನೆಯ ವಿಚಾರ ಪ್ರಸ್ತಾಪಿಸಲ್ಪಟ್ಟಿದೆ. ಲಾಳ ದೇಶದ ಕೃತ್ತಿಕಾಪುರವೆಂಬ ಪಟ್ಟಣವನ್ನು ಅಗ್ನಿರಾಜನು ಆಳುತ್ತಿರುತ್ತಾನೆ. ಅವನಿಗೆ ಆರು ಜನ ಹೆಣ್ಣುಮಕ್ಕಳು. ಕೊನೆಯವಳು ಕೃತ್ತಿಕೆ. ಈ ರಾಜನು ತನ್ನ ಮಗಳು ಕೃತ್ತಿಕೆಯ ಮೇಲೆಯೇ ಆಸೆಪಟ್ಟನು. ತನ್ನ ಆಪ್ತವಲಯವನ್ನೆಲ್ಲಾ ಸಂಪರ್ಕಿಸಿ ಈ ದೇಶದ ಅಮೂಲ್ಯವಾದ ವಸ್ತು ಯಾರಿಗೆ ಸೇರಬೇಕು ಎಂದು ಪ್ರಶ್ನಿಸಿದಾಗ ಅವರೆಲ್ಲರೂ 'ಆನೆಯುಂ, ಕುದುರೆಯುಂ ಮುತ್ತುಂ ಮಾಣಿಕಮಂ ಸ್ತ್ರೀರತ್ನಮಂ ಮೊದಲಾಗೊಳ್ಳಿಪ್ಪಗ್ಗಳ ವಸ್ತುವೆಲ್ಲಂ ಪೃಥ್ವಿಯ ನಾಳ್ವೊಂಗಕ್ಕುಮೆಂದು'[೫೩] ಹೇಳಿದರು. ಆದರೆ ಋಷಿಗಳು ಮಾತ್ರ ವಸ್ತು ಯಾವುದೆಂದು ತಿಳಿಯದೆ ಏನನ್ನೂ ಹೇಳಲು ಬರುವಂತಿಲ್ಲವೆಂದು ತಿಳಿಸಿದರು. ತನಗೆ ವಿರುದ್ಧವಾದ ಉತ್ತರ ದೊರೆಯಬಹುದೆಂದು ತಿಳಿದ ಅರಸನು ಋಷಿಗಳನ್ನು ಪಟ್ಟಣದಿಂದ ಓಡಿಸಲು ತಿಳಿಸುತ್ತಾನೆ. ಅದೇ ರೀತಿಯಾಗಿ ಗುರುದತ್ತ ಭಟಾರರ ಕಥೆಯಲ್ಲಿಯೂ ಆನೆಯು ಪ್ರಾಸಂಗಿಕವಾಗಿ ವಿವರಿಸಲ್ಪಟ್ಟಿದೆ. ಧಾತ್ರಿವಾಹನನೆಂಬ ಅರಸನೊಂದಿಗೆ ಗುರುದತ್ತ ಭಟಾರನು ಯುದ್ಧದಲ್ಲಿ ತೊಡಗಿರುತ್ತಾನೆ. ಅವನಲ್ಲಿ ಧಾತ್ರಿರಾಜನ ಮಗಳು ಅಭಯಮತಿಯು ಅನುರಕ್ತಳಾಗಿದ್ದಾಳೆ. ತಾನು ಮದುವೆಯಾಗುವುದಾದರೆ ಗುರುದತ್ತನನ್ನೇ ಮದುವೆಯಾಗುತ್ತೇನೆ. ಇಲ್ಲದಿದ್ದಲ್ಲಿ ಸನ್ಯಾಸಿನಿಯಾಗುತ್ತೇನೆಂದು ತನ್ನ ದಾಸಿಯೊಂದಿಗೆ ಹೇಳಿಕಳಿಸುತ್ತಾಳೆ. ದಾಸಿಯ ಮಾತನ್ನು ಕೇಳಿದ ಧಾತ್ರಿರಾಜನು ತನ್ನ ಮಗಳನ್ನು ಗುರುದತ್ತನಿಗೆ ಕೊಡಲು ಒಪ್ಪುತ್ತಾನೆ. ಈ ನಿರ್ಧಾರವನ್ನು ಕೇಳಿದ ಗುರುದತ್ತನು ಯುದ್ಧ ಮಾಡುವುದನ್ನು ನಿಲ್ಲಿಸುತ್ತಾನೆ. ಧಾತ್ರಿರಾಜನು ತನ್ನ ಮಗಳನ್ನು ಮದುವೆ ಮಾಡಿಕೊಟ್ಟು ಅವಳೊಂದಿಗೆ 'ಕರಿಕರಿಣಿ ತುರಗಾಶ್ವ ರಥ ಶಿಬಿಕಾದ್ಯನೇಕ ವಾಹನಗಳುಮಂ ಮುತ್ತಿನ ಮಾಣಿಕದ ಪೊನ್ನ ಮೂದೆರೆದ ಪಲವುಂ ನಾನಾ ಪ್ರಕಾರದ ಅನರ್ಘ್ಯಮಪ್ಪ ತುಡುಗೆಗಳುಂ'[೫೪] ಕೊಟ್ಟು ಕಳಿಸುತ್ತಾನೆ.

ಹನ್ನೆರಡು ಹದಿಮೂರನೇ ಶತಮಾನದ ಮಧ್ಯಭಾಗದಲ್ಲಿದ್ದ ಜನ್ನನು ಯಶೋಧರ ಚರಿತೆಯನ್ನು ಬರೆದಿದ್ದಾನೆ. ಈ ಕಾವ್ಯದ ಮೂಲ ಉದ್ದೇಶ ಜೈನ ಧರ್ಮದ ಹೆಗ್ಗಳಿಕೆಯನ್ನು ಪ್ರಚುರಪಡಿಸುವುದಾದರೂ ಇದರಲ್ಲಿ ಶೃಂಗಾರ ಲಾಲಿತ್ಯಗಳೆಲ್ಲಾ ಮೂಡಿಬಂದಿವೆ. ಚಕ್ರವರ್ತಿ ಯಶೋಧರನ ಪಟ್ಟದರಸಿ ಅಮೃತಮತಿಯು ಪಟ್ಟದಾನೆಯನ್ನು ನೋಡಿಕೊಳ್ಳುವ ಮಾವುತ ಅಷ್ಟಾವಂಕನಲ್ಲಿ ಪ್ರೇಮಾಂಕುರಗೊಂಡು ಅವನೊಂದಿಗೆ ಅನೈತಿಕ ಸಂಬಂಧವಿರಿಸಿಕೊಳ್ಳುತ್ತಾಳೆ. ಅಮೃತಮತಿ ಮಾವುತನೊಬ್ಬನಿಗೆ ಒಲಿಯುವ ಪರಿಯನ್ನು ಹೀಗೆ ತಿಳಿಸುತ್ತಾನೆ.

'ಹೃದಯಪ್ರಿಯಂತೊರಗಿದ
ಪದದೊಳ್ ಗರಟಿಗೆಯ ಜಾವದುಕ್ಕಡದುಲಿ ಮ
ಗ್ಗಿದ ಪೊತ್ತು ಸೂಳ್ಗೆ ಕರುಮಾ
ಡದ ಪಕ್ಕದೊಳಿರ್ದ ಪಟ್ಟದಾನೆಯ ಬದಗಂ'

(ಯಶೋಧರ ಚರಿತೆ, ಎರಡನೇ ಅವತಾರ, ಪದ್ಯ-೨೭, ೨೦೦೭, ಪು ೧೭)

ಜನ್ನನ ಅನಂತನಾಥ ಪುರಾಣದಲ್ಲಿ ಯುದ್ಧದ ಸನ್ನಿವೇಶವನ್ನು ಹೀಗೆ ವರ್ಣಿಸಲಾಗಿದೆ.

'ಮದಗಂಧಕ್ಕೆ ಪರಸ್ಪರಂ ಮಸಗಿ ಕೋಪಾಟೋಪದಿಂ ತಳ್ತು ತಾ
ಗಿದ ದಂತಗಳ ಕಿಚ್ಚು ಪತ್ತಿ ತಗುಳ್ವಂದಳ್ಳೆಂಬಿನಂ ಬೂದಿ ಪಾ
ರಿದ ಕೆಂಡಕ್ಕೆಣೆಯಾಗೆ ಮೇಗೆ ಕಡುಕೆಯ್ವಾರೋಹಕರ್ಬೇಗೆ ಪ
ತ್ತಿದ ಬೆಟ್ಟಂ ಪೂರ್ಣವಂತೆ ಪೋರ್ದುವು ಗಜವ್ಯೂಹಂ ಗಜವ್ಯೂಹದೊಳ್'

(ಅನಂತನಾಥ ಪುರಾಣ, ೧೪ನೇ ಅವತಾರ, ಪದ್ಯ-೩ ೩೧೦)

'ತುಳಿಲಾಳ್ವಾಜಿ ಗಜಂಗಳಕ್ಷಯುಗಳ ಸ್ಥೂಲಾಗ್ರದೊಳ್ನಟ್ಟು ಕೋ
ದೆಳಲುತ್ತಿರ್ಪಿನಂಬು ತೀರ್ದು ಗರೆಗಳ್ಗೇಣ್ಗಳೊಳ್ಕುತ್ತಿ ಕೈ
ದೊಳಸುತ್ತಿರ್ಪಿನಮೊರ್ಮೊದಲ್ಜವನ ಜಕ್ಕಂದೋಳದೊಡ್ಡೈದು ಮು
ಮ್ಮಳಿಯಪ್ಪಂತಿದಿರೇರೆ ತಳ್ತವು ರಥಾನೀಕಂ ರಥಾನೀಕದೊಳ್'(ಅನಂತನಾಥ ಪುರಾಣ, ೧೪ನೇ ಅವತಾರ, ಪದ್ಯ-೫ ೩೧೦)

ಪೊಡವಿ ಕಡಂಗಿ ತಿಂದುಗುಳ್ದುದೊಡ್ಡಿದ ಚಿತ್ರದ ಭಿತ್ತಿಯೋ ಸಿಡಿ
ಲ್ತೊಡೆದುದು ಸುಟ್ಟುರೆತ್ತಿ ಪಡೆಪೊಯ್ದುದು ನಂಜಿನ ಗಾಳಿಯಂಬಿನಂ
ಪಡಲಿಡೆ ಕೃಷ್ಣನೊಂದು ಗಜದಿಂ ನಿಜವಾಹಿನಿ ಕಂಡು ದಾನಮಂ
ಕಿಡಿಕಿಡಿವೋಗಿ ತಾಂ ಪೊರೆದ ನೆಚ್ಚಿನ ಮಚ್ಚಿನ ದೈತ್ಯರೆಲ್ಲರಂ(ಅನಂತನಾಥ ಪುರಾಣ, ೧೪ನೇ ಅವತಾರ, ಪದ್ಯ-೮ ೩೧೦)

ವ: ಅದ್ಭುತನುದ್ಭಟಂ ಕುಂಜರಕರ್ಣನಶ್ವಕಂಠನುಷ್ಟ್ರೋದರನೇಕ ಜಂಘನನೇಕ ಲೋಚನನು ದರವದನಂ ಖುರನಾಶಂ ಖರನಾ ನಷ್ಟಪತಾಕಂ...(ಅನಂತನಾಥ ಪುರಾಣ ೩೧೦)

'ಧರಣೀಭಾರಕ್ಕೆ ಯಶೋ
ಧರನನೊಡಂಬಡಿಸಿ ನೂರ್ವರರಸುಗಳೊಡನಾ
ದರದಿಂ ಕಂಬಂದಪ್ಪಿದ
ಕರಿಯಂತೆ ತಪೋವನಕ್ಕೆ ನಡೆದನಿಳೇಶಂ'(ಯಶೋಧರ ಚರಿತೆ, ೨ನೇ ಅವತಾರ, ಪದ್ಯ–೧೩, ೨೦೦೭, ಪು ೧೫)

ಹನ್ನೆರಡು ಹದಿಮೂರನೇ ಶತಮಾನದ ಮಧ್ಯಭಾಗದಲ್ಲಿದ್ದ ಜನ್ನನು ಯಶೋಧರ ಚರಿತೆಯನ್ನು ಬರೆದಿದ್ದಾನೆ. ಈ ಕಾವ್ಯದ ಮೂಲ ಉದ್ದೇಶ ಜೈನಧರ್ಮದ ಹೆಗ್ಗಳಿಕೆಯನ್ನು ಪ್ರಚುರಪಡಿಸುವುದಾದರೂ ಇದರಲ್ಲಿ ಶೃಂಗಾರ ಲಾಲಿತ್ಯಗಳೆಲ್ಲಾ ಮೂಡಿಬಂದಿವೆ. ಚಕ್ರವರ್ತಿ ಯಶೋಧರನ ಪಟ್ಟದರಸಿ ಅಮೃತಮತಿಯು ಪಟ್ಟದಾನೆಯನ್ನು ನೋಡಿಕೊಳ್ಳುವ ಮಾವುತ ಅಷ್ಟಾವಂಕನಲ್ಲಿ ಪ್ರೇಮಾಂಕುರಗೊಂಡು ಅವನೊಂದಿಗೆ ಅನೈತಿಕ ಸಂಬಂಧವಿರಿಸಿಕೊಳ್ಳುತ್ತಾಳೆ. ಅಮೃತಮತಿ ಮಾವುತನೊಬ್ಬನಿಗೆ ಒಲಿಯುವ ಪರಿಯನ್ನು ಹೀಗೆ ತಿಳಿಸುತ್ತಾನೆ.

'ಹೃದಯಪ್ರಿಯಂತೊರಗಿದ
ಪದದೊಳ್ ಗರಟಿಗೆಯ ಜಾವದುಕ್ಕಡದುಲಿ ಮ
ಗ್ಗಿದ ಪೊತ್ತು ಸೂಳ್ಗೆ ಕರುಮಾ
ಡದ ಪಕ್ಕದೊಳಿರ್ದ ಪಟ್ಟದಾನೆಯ ಬದಗಂ'(ಯಶೋಧರ ಚರಿತೆ, ೨ನೇ ಅವತಾರ, ಪದ್ಯ–೨೭, ೨೦೦೭, ಪು ೧೭)

'ಕಡುಮನದ ರಕ್ಕಸರು ಏರಿ
ರೊಡನೆ ಕರಿರಥ ತುರಗವನು ಪಿಡೆ'[೫೫]

ನಿರ್ದಾಕ್ಷಿಣ್ಯರಾದ ರಕ್ಕಸರು ಆನೆ, ರಥ, ಕುದುರೆಗಳನ್ನು ಏರಿ ಬೇಗನೆ ಮುನ್ನಡೆದರು ಎಂದು ಹೇಳಲಾಗಿದೆ. ಹಾಗೆಯೇ ಮುಂದುವರಿದು

'ಶರಧಿ ಬಿಟ್ಟದು ಬಳಸಿ ಸುತ್ತಲು
ಕರಿ ತುರಗ ರಥ ಪಾಯ್ದಳವು ಸಂದಣಿಸಿ ನಿಂದಿರಲು....'[೫೬]

ಆನೆ, ರಥ, ಕುದುರೆಗಳನ್ನೊಳಗೊಂಡ ರಾಕ್ಷಸ ಸೈನ್ಯವು ಸಮುದ್ರದೋಪಾದಿಯಲ್ಲಿ ಸುತ್ತುವರಿದು ನಿಂತಿತ್ತು ಎಂದು ತಿಳಿಸುತ್ತಾರೆ.

'ಪುರವ ಶೃಂಗರಿಸಲ್ಲಿ ಕರಿರಥ
ತುರಗ ಮೇಳೈಸಿರಲಿ ಮೋದದಲಿ'[೫೭]

ಇಡೀ ನಗರ ಶೃಂಗಾರಗೊಂಡು ನಿಂತಿದೆ. ಆನೆ ಕುದರೆ, ರಥಗಳು ಸಂಭ್ರಮದಿಂದ ಸೇರಿವೆ. ಇದೆಲ್ಲವನ್ನೂ ನೋಡಿದ ಪುರದ ತರುಣಿಯರು ಉಲ್ಲಸಿತಭರಿತರಾಗಿದ್ದಾರೆ ಎಂಬ ವರ್ಣನೆ ಇದೆ.

'ಕರುಣದಿಂದ ವಿಭೀಷಣನ ಪತಿ
ಕರಿಸಿ ಕರಿರಥ ತುರಗವಾಸ್ತ್ರ
ಭರಣವಿತ್ತುಪಚರಿಸಿ ಕಳುಹಿದನಾಗಳೆ ಸುರರನು'[೫೮]

ರಾಕ್ಷಸ ಸೈನ್ಯದೊಂದಿಗಿದ್ದ ವಿಭೀಷಣನನ್ನು ಕರುಣೆಯಿಂದ ಸತ್ಕರಿಸಿ ಆನೆ, ಕುದರೆ, ರಥ, ವಸ್ತ್ರ, ಆಭರಣಗಳನ್ನು ನೀಡಿ ಸತ್ಕರಿಸಿ ರಾಕ್ಷಸ ಸೈನ್ಯವನ್ನು ಕಳುಹಿಸಿದನು ರಾಮಚಂದ್ರನು.

ಕಬ್ಬಿಗರ ಕಾವದಲ್ಲಿ ಬರುವ ವರ್ಣನೆಯೊಂದು ಹೀಗಿದೆ
'ನಡೆತರ್ಪ ತೇಜಿಗಳ ನೋವಿದೆ ಭಂಡಣದಲ್ಲಿ ಸೀಳದಿ
ರ್ದೊಡೆ ಪೆಸರಾನೆಯಂ ಮುರಿಯದಿರ್ದಡೆ ನಚ್ಚಿನ ನಿನ್ನಲೆಂಕನೇ"....'[೫೯]

ಮೇಲೇರಿ ಬರುವ ಕುದುರೆಗಳನ್ನು ಸೀಳದಿದ್ದರೆ, ಹೆಸರಾದ ಆನೆಗಳನ್ನು ಮುರಿದೊಗೆಯದಿದ್ದರೆ ನಾನು ನಿನ್ನ ನಂಬಿಕೆಯ ಸೇವಕನೆ ಎಂದು ಪ್ರಶ್ನಿಸುತ್ತಾನೆ. ಪಾರ್ವತಿಯ ಇಷ್ಟಾರ್ಥಕ್ಕಾಗಿ ಮನ್ಮಥ ಶಿವನ ತಪ್ಪಸ್ಸನ್ನು ಕೆಡಿಸಲು ಮುಂದಾಗುತ್ತಾನೆ. ಈ ಸಂದರ್ಭದಲ್ಲಿ ಶಿವನ ವಿರುದ್ಧ ಯುದ್ಧ ಮಾಡುವ ಸಂದರ್ಭದಲ್ಲಿ ನುಡಿಯುವ ಮಾತುಗಳಿವು. ಇದೇ ಕಾವ್ಯದಲ್ಲಿ ಮತ್ತೊಂದು ಕಡೆ ಯುದ್ಧದ ಸ್ವರೂಪವನ್ನು ಕವಿ ಹೀಗೆ ತಿಳಿಸುತ್ತಾನೆ.

ಕನ್ನಡ ಸಾಹಿತ್ಯದಲ್ಲಿ ಹನ್ನೆರಡನೇ ಶತಮಾನಕ್ಕೆ ಮಹತ್ವದ ಸ್ಥಾನವಿದೆ. ಹಳಗನ್ನಡದ ಜಾಡನ್ನು ಸರಿಸಿ ಹೊಸ ಗಾಳಿಗೆ ಸಾಹಿತ್ಯ ಮೈಯೊಡ್ಡಿಕೊಂಡ ಕಾಲ ಅದಾಗಿದೆ. ಇದಕ್ಕೆ ಅಡಿಪಾಯವನ್ನು ಹಾಕಿದವರು ವಚನಕಾರರು. ಕೇವಲ ಆಸ್ಥಾನಕ್ಕೆ ಮಾತ್ರ ಸೀಮಿತವಾಗಿದ್ದ ಸಾಹಿತ್ಯವನ್ನು ಜನಸಾಮಾನ್ಯರ ಬಳಿಗೆ ತಂದ ಶ್ರೇಯಸ್ಸು ವಚನಕಾರರದಾಗಿದೆ. ಈ ನಿಟ್ಟಿನಲ್ಲಿ ವಚನಕಾರರ ಪ್ರಯತ್ನ ಅಮೋಘವಾದುದು. ವಚನಕಾರರ ಬಹುತೇಕ ವಚನಗಳಲ್ಲಿ ಆನೆಯ ಉಲ್ಲೇಖ ದೊರೆಯುತ್ತವೆ. ಇದಕ್ಕೆ ಉದಾಹರಣೆಗಾಗಿ ವಚನಕಾರರಲ್ಲಿಯೇ ಪ್ರಮುಖನೆಂದು ತಿಳಿಯಲಾದ ಬಸವಣ್ಣನ ವಚನವನ್ನು ನೋಡಬಹುದು.

'ಕರಿ ಘನವ, ಅಂಕುಶ ಕಿರಿದೆನ್ನಬಹುದೆ' ಎಂದು ಒಂದು ವಚನದಲ್ಲಿ ತಿಳಿಸುತ್ತಾರೆ. ಆನೆಯೇನೋ ಬೃಹದ್ದೇಹಿ. ಆದರೆ ಆನೆಯನ್ನು ಅಂಕೆಯಲ್ಲಿಟ್ಟುಕೊಳ್ಳಲು ಬಳಸುವ

ಸಣ್ಣದಾದ ಅಂಕುಶವನ್ನು ಯಕಶ್ಚಿತ್ ಚಿಕ್ಕದು ಎಂದು ಹೇಗೆ ಭಾವಿಸುವುದು ಎಂಬ ಪ್ರಶ್ನೆಯನ್ನು ಬಸವಣ್ಣನವರು ಎತ್ತುತ್ತಾರೆ. ಮತ್ತೊಂದು ವಚನದಲ್ಲಿ ಕರಿಯು ಕನ್ನಡಿಯೊಳಗಡಗಿದಂತಯ್ಯಾ ಎಂದು ತಿಳಿಸುತ್ತಾನೆ. ದೊಡ್ಡ ದೇಹದ ಆನೆಯನ್ನು ಕನ್ನಡಿಯೊಳಗೆ ಅಡಗಿಸಲು ಸಾಧ್ಯವೆ. ಅಕಸ್ಮಾತ್ ಹಿಡಿದಿಟ್ಟರೂ ಬಾಲ ರಾಮನು ಚಂದ್ರನನ್ನು ಕೈಯೊಳಗೆ ಹಿಡಿದುಕೊಳ್ಳಬೇಕು ಎಂದು ಆಪೇಕ್ಷಿದಂತಾಗುತ್ತದೆ ಅಷ್ಟೆ.

'ಕಾಲಾಳ್ಗಳ್ ಕಾಲಾಳ್ಗಳೊಳ್ ಕುದರೆಗಳ್ ಕುದರೆಗಳೊಳ್ ತೇರ್ಗಳ ತೇರ್ಗಳೊಳ್
ಆನೆಗಳಾನೆಗಳೊಳೋವದೆ ಕಾದಿ ಮಯ್ಯೆರ್ಗಳಿಂ ಜುಮ್ಮನೆಚ್ಚು ಪಾಯ್ವ"....[೬೦]

ಕಾಲಾಳುಗಳು ಕಾಲಾಳುಗಳೊಂದಿಗೆ, ಕುದುರೆ ಕುದುರೆಗಳೊಂದಿಗೆ, ರಥಗಳು ರಥಗಳೊಂದಿಗೆ, ಆನೆ ಆನೆಗಳೊಂದಿಗೆ ಹೋರಾಡುತ್ತಾ ಮೈಯೆಲ್ಲಾ ಗಾಯ ಮಾಡಿಕೊಂಡು ರಕ್ತದಿಂದ ಕೂಡಿದ್ದವು ಎಂದು ಆಂಡಯ್ಯ ತಿಳಿಸುತ್ತಾನೆ.

ಯುದ್ಧಭೂಮಿಯಲ್ಲಿ ಇದ್ದ ಆನೆ, ಕುದುರೆ, ರಥ, ಕಾಲಾಳುಗಳ ಲೆಕ್ಕವನ್ನು ಕುಮಾರವ್ಯಾಸ ಹೀಗೆ ನೀಡುತ್ತಾನೆ

'ಹದಿನೆಂಟು ಸಾವಿರ
ಕರಿಘಟೆಯ ನೈವತ್ತು ಸಾವಿರ
ತುರಗವನು ಮೂವತ್ತು ಸಾವಿರ ವರಮಹಾರಥರು'[೬೧] ಎಂದು ವಿವರಿಸುತ್ತಾನೆ.

ಮತ್ತೊಂದು ಕಡೆ

'ಕುದುರೆ ರಾವ್ತರು ರಥಿಕರು
ಹೊರಳಿಯೊಡೆದುದು ಗಜದ ಗಾವಳಿ
ಜರಿದುದಳಿದುದನಾರು ಬಲ್ಲರು ಭೂಪ ಕೇಳೆಂದ'[೬೨] ಎಂದು ಹೇಳುತ್ತಾನೆ.

ಹಾಗೆಯೇ 'ಹೊಳೆವ ರತುನದ ಸಾಲ ಮಕುಟದ
ಚಲುವಿಕೆಯ ಸಂರಂಭದಲಿ ಗಜ
ಗಲಿಸಿದರು ಮಾಣಿಕ್ಯಮಯ ಭೂಷಣವಿಲಾಸದಲ್ಲಿ'[೬೩]

ಯುದ್ಧಸನ್ನದ್ಧವಾದ ಆನೆ, ಕುದುರೆ, ರಥಗಳು ಹೊರಟ ಗರ್ಜನೆಯ ಧ್ವನಿಯನ್ನು ವಿರೋಧಿ ಪಡೆ ಕೇಳಿಸಿಕೊಂಡಿತು ಎಂದು ಕವಿ ವರ್ಣಿಸುತ್ತಾನೆ. ಯುದ್ಧದಲ್ಲಿ ತೊಡಗಿದ್ದ ಆನೆ, ಕುದುರೆಗಳು ಸೂರ್ಯನು ಪಶ್ಚಿಮದಲ್ಲಿ ಕಣ್ಮರೆಯಾಗುತ್ತಲೇ ಬಳಲಿಕೆ ಅನುಭವಿಸಿದವು ಎಂದು ಕುಮಾರವ್ಯಾಸನು ತಿಳಿಸುತ್ತಾನೆ.

ಯುದ್ಧ ಮುಗಿದ ತರುವಾಯ ಆನೆ, ಕಾಲಾಳು, ಕುದುರೆಗಳ ಚಿಕಿತ್ಸೆ ನಡೆಸುವ ಕ್ರಮದ ಕುರಿತು ಕುಮಾರವ್ಯಾಸ ತನ್ನ ಕೃತಿಯಲ್ಲಿ ಈ ಕೆಳಗಿನಂತೆ ಹೇಳುವನು.

'ಭರತದಲಿ ವೈದ್ಯದಲಿ ಕಾವ್ಯ ಸು
ವಿರಚಿತಾಲಂಕಾರದಲಿ ಗಜ
ತುರಗ ಲಕ್ಷಣದಲ್ಲಿ ಸಮಾಹಿತ ಮಂತ್ರ ತಂತ್ರದಲಿ'[೪]

ಮೇಲಿನ ಈ ಚಿತ್ರವು ಹಸ್ತಿ ಮತ್ತು ತುರಗ ವೈದ್ಯ ಲಕ್ಷಣ ಹಾಗೂ ಚಿಕಿತ್ಸಾಕ್ರಮವನ್ನು ನಿರೂಪಿಸುತ್ತದೆ.

ಕುಮಾರವ್ಯಾಸನ ಭಾರತದಲ್ಲಿ ವಿಜಯನಗರ ಕಾಲದ ಯುದ್ಧದ ಪರಿ ತಾನೇತಾನಾಗಿ ಮೂಡಿದೆ. ಇವನು ಲಾಲಿತ್ಯ ಕವಿ. ಉಪಮೆ, ಉಪಮಾನ ಅಲಂಕಾರಗಳಿಂದ ಕಾವ್ಯವನ್ನು ಲಾಲಿತ್ಯಪೂರ್ಣವಾಗಿಸಿದ್ದಾನೆ.

ಕುಮಾರವ್ಯಾಸನ ಪೂರ್ವದಲ್ಲಿ ಕ್ರಿ.ಶ. ೧೨ನೇ ಶತಮಾನದಲ್ಲಿ ಕನ್ನಡ ನೆಲದಲ್ಲಿ ಸಾಮಾಜಿಕ ಕ್ರಾಂತಿಯ ಜೊತೆಗೆ ಸಾಹಿತ್ಯಿಕ ಕ್ರಾಂತಿಯೂ ಜರುಗಿತು. ಹಿಂದೆ ಇದ್ದ ಹಳಗನ್ನಡ ಭಾಷೆಯ ಕಾವ್ಯಪರಂಪರೆಗೆ ತೀರ ವಿರುದ್ಧವಾದ ರೀತಿಯಲ್ಲಿ ಜನಸಾಮಾನ್ಯರ ಭಾಷೆಯನ್ನೇ ತಮ್ಮ ವಚನ ಸಾಹಿತ್ಯಕ್ಕೆ ಬಳಸಿದ ಹಿರಿಮೆ ವಚನಕಾರರದ್ದು. ಇವರ ವಚನಗಳಲ್ಲಿ ಸಾಂದರ್ಭಿಕವಾಗಿ ಆನೆ, ಕುದುರೆ, ಆಡು, ಹಾವು ಮುಂತಾದ ಪ್ರಾಣಿಗಳ ಉಲ್ಲೇಖ ದೊರೆಯುತ್ತದೆ. ವಚನಕಾರರಲ್ಲಿ ಬೆಡಗಿನ ವಚನಕಾರನೆಂದೇ ಪ್ರಸಿದ್ಧನಾದ ಅಲ್ಲಮನು ಒಂದು ವಚನದಲ್ಲಿ 'ಆನೆಯ ಏರಿಕೊಂಡು ಹೋದಿರೆ ನೀವು, ಕುದುರೆಯನೇರಿಕೊಂಡು ಹೋದಿರೆ ನೀವು' ಎಂದು ತಿಳಿಸುತ್ತಾನೆ. ವಚನಕಾರರ ಪ್ರಭಾವಕ್ಕೆ ಒಳಗಾದ ಹರಿಹರನು ಶೈವಧರ್ಮವನ್ನು ತ್ಯಜಿಸಿ ವೀರಶೈವ ಧರ್ಮದ ಕಡೆ ಒಲವನ್ನು ತೋರಿಸಿದವನು. ಇವನ ಪರಮಾಪ್ತ ಶಿಷ್ಯ ಹಾಗೂ ಸೋದರಳಿಯನಾದ ರಾಘವಾಂಕನು ಹರಿಶ್ಚಂದ್ರ ಕಾವ್ಯವನ್ನು ಬರೆದನು. ಹರಿಶ್ಚಂದ್ರ ಕಾವ್ಯದಲ್ಲಿ ವಿಶ್ವಾಮಿತ್ರನು ಹರಿಶ್ಚಂದ್ರನ ಸತ್ಯವ್ರತವನ್ನು ಅರಿಯುವುದಕ್ಕಾಗಿ ನಾನಾ ಪರೀಕ್ಷೆಗಳನ್ನು ರಾಜನಿಗೆ ಒಡ್ಡುತ್ತಾನೆ. ಯಾರು ಏನು ಕೇಳಿದರೂ ಇಲ್ಲವೆನ್ನದ ಹರಿಶ್ಚಂದ್ರನಿಗೆ ವಿಶ್ವಾಮಿತ್ರನು ಅವನ ಸಂಪತ್ತನ್ನು ಕೇಳುತ್ತಾನೆ. ಆಯಿತು ಎಷ್ಟು ಬೇಕೋ ತೆಗೆದುಕೊಳ್ಳಿ ಎಂದು ರಾಜನು ತಿಳಿಸಿದಾಗ ವಿಶ್ವಾಮಿತ್ರನು ರಾಜ ಬೀದಿಯಲ್ಲಿ ಆನೆಯ ಮೇಲೆ ನಿಂತು ಆಕಾಶದ ಕಡೆ ಬಿಲ್ಲೆಯೊಂದನ್ನು ಎಸೆದು ತನಗೆ ಬಿಲ್ಲೆ ಮೇಲೋದಷ್ಟು ಎತ್ತರಕ್ಕೆ ರಾಜನು ಸಂಪತ್ತನ್ನು ಕೊಡಬೇಕೆಂದು ಆಜ್ಞೆ ಮಾಡುತ್ತಾನೆ. ಅದೇ ರೀತಿ ಹರಿಶ್ಚಂದ್ರ ಕಾವ್ಯಕ್ಕೆ ಸಂಬಂಧಿಸಿದಂತೆ ಹರಿಹರ

ರಾಘವಾಂಕರ ಮಧ್ಯದಲ್ಲಿ ನಡೆದಿದೆ ಎಂದು ಹೇಳಲಾಗುವ ಐತಿಹ್ಯ ಹೀಗಿದೆ.

ರಾಘವಾಂಕನು ಹರಿಶ್ಚಂದ್ರ ಕಾವ್ಯವನ್ನು ರಚಿಸಿದ ತರುವಾಯ ಆ ಕಾವ್ಯವನ್ನು ಆನೆಯ ಮೇಲಿರಿಸಿ ಮೆರವಣಿಗೆ ಮಾಡಲಾಯಿತಂತೆ. ಆನೆಯ ಮೇಲೆ ಇರಿಸಿ ಮೆರವಣಿಗೆ ಮಾಡಿದ ಕಾವ್ಯವನ್ನು ತನ್ನ ಗುರು ಹರಿಹರನಿಗೆ ಸಲ್ಲಿಸಿದಾಗ ಹರನ ಹೊರತಾಗಿ ಪರರ ನೆನೆಯೆನು ಎಂಬ ಹರಿಹರನು ಸಾವ ಕೆಡುವವರ ಮೇಲೆಲ್ಲಾ ಕಾವ್ಯ ರಚಿಸಿದೆಯಲ್ಲ ಎಂದು ರಾಘವಾಂಕನ ಮೇಲೆ ಸಿಟ್ಟಾಗಿ ತನ್ನ ಮೆಟ್ಟಿನಿಂದ ರಾಘವಾಂಕನ ಮುಖಕ್ಕೆ ಹೊಡೆದನು ಎಂಬ ಕಥೆ ಇಂದಿಗೂ ಜನಜನಿತವಾದುದಾಗಿದೆ.

ಕ್ರಿ.ಶ. ೧೫ನೇ ಶತಮಾನದಲ್ಲಿದ್ದ ಕುಮಾರವ್ಯಾಸನು ಮಹಾಭಾರತ ಕಥೆಯನ್ನು ಕಾವ್ಯವಾಗಿಸಿದ ಮತ್ತೊಬ್ಬ ಪ್ರಮುಖ ಕವಿ. ಗದುಗಿನ ವೀರನಾರಾಯಣನ ಪರಮ ಭಕ್ತನಾದ ಕುಮಾರವ್ಯಾಸನು ತನ್ನ ಕಾವ್ಯದಲ್ಲಿ ಪ್ರಾಮುಖ್ಯತೆ ಕೊಟ್ಟಿರುವುದು ಕೃಷ್ಣನಿಗೆ. ಕೃಷ್ಣನ ಭಕ್ತನಾದ ಕುಮಾರವ್ಯಾಸನಿಗೆ ದೇವನಾದ ಕೃಷ್ಣನಿಂದಾಗಿಯೇ ಇಡೀ ಮಹಾಭಾರತದ ಕಥೆ ನಡೆಯುವುದು, ಕೃಷ್ಣ ಸೂತ್ರಧಾರಿ, ಇನ್ನುಳಿದ ಎಲ್ಲಾ ಪಾತ್ರಗಳು ಅವನು ಆಡಿಸಿದಂತೆ ಆಡುವ ಪಾತ್ರಗಳು ಮಾತ್ರ ಎಂಬ ಧೋರಣೆಯನ್ನು ಹೊಂದಿದವನು ಕುಮಾರವ್ಯಾಸ. ಇವನು ವಿಜಯನಗರ ಕಾಲದ ಯುದ್ಧದ ರೀತಿ ನೀತಿಗಳನ್ನು ಹತ್ತಿರದಿಂದ ನೋಡಿದವನು. ಇವನ ಕಾವ್ಯದಲ್ಲಿಯೂ ಆ ಕಾಲದ ಜನ ಜೀವನಪದ್ಧತಿ, ಯುದ್ಧದ ರೀತಿಗಳು ಪ್ರತಿಧ್ವನಿತವಾಗಿವೆ. ಇವನ ಕಾವ್ಯದಲ್ಲಿ ಒಂದುಕಡೆ ಗಜಬಲದ ಸಿದ್ಧತೆ ಮತ್ತು ಆಕ್ರಮಣದ ವಿವರಗಳು ಹೀಗಿವೆ.

‘ಮುರಿದು ಮೋದಿತು ಸಮ್ಮುಖದೊಳಿ
ಟ್ಟೊರಸಿತೆಡದಲಿ ಹೊಯ್ದು ಸೀಳಿತು
ಹರಹಿತಪಸವ್ಯದಲಿ ಮೆದೆಗೆಡಹಿತು ಮಹಾರಥರ
ಹೊರೆದ ರಕುತದ ಧಾರೆಗಳ ತುದಿ
ಕರದೊಳೆಳಲುವ ತಲೆಗಳಂಘ್ರಿಯೊ
ಳೊರೆದ ನೆಣನಡಗಿನ ಮಹಾಗಜ ಮೊಗೆದುದರಿಬಲವ’[೨೫]

ರಣರಂಗಕ್ಕೆ ಆನೆಗಳು ತೆರಳುವ ಪೂರ್ವದಲ್ಲಿ ರಕ್ಷಣಾತ್ಮಕವಾದ ಕವಚಗಳನ್ನು ತೊಡಿಸಿ ಆನೆಯನ್ನು ಅಲಂಕರಿಸಲಾಗುತ್ತಿತ್ತು ಎಂಬುದನ್ನು ಕುಮಾರವ್ಯಾಸನು ಈ ಕೆಳಗಿನ ಸಾಲುಗಳಲ್ಲಿ ಹೇಳಿದ್ದಾನೆ.

'ಬಲವೊರಜೆ ಎಡವೊರಜೆ ಬೆನ್ನಿನ
ಮಿಳಿಯ ಜಾಳಿಗೆವೊರಜೆ ತಳಸಂ
ಕಲೆಯ ತೊಡರಂಕಣೆಯ ಕೊಂಡೆಯ ಪಕ್ಕ ಗಂಟೆಗಳ ।
ತುಳುಕಿನುಗ್ಗ ಡಣೆಗಳ ಹಿಣಿಲಿನ
ಬಲುವೊರಜೆಗಳ ಬಾರ ಸಂಕಲೆ
ಗಳನ್ನು ಬಿಗಿದರು ಜೋಡಿಸಿದರುಬ್ಬರದ ಮದಗಜವ'[೬೬]

ವಿಂಧ್ಯಗಿರಿ, ಕನಕಗಿರಿ, ಅಂಜನಗಿರಿ, ಮಲಯಾದ್ರಿಯಲ್ಲಿ ಜನಿಸಿದ ಆನೆಗಳು ಯುದ್ಧರಂಗದಲ್ಲಿ ಪಾಲ್ಗೊಳ್ಳುತ್ತಿದ್ದವೆಂದು ಕುಮಾರವ್ಯಾಸ ತಿಳಿಸುತ್ತಾನೆ. ಕುಮಾರವ್ಯಾಸನ ಕಾವ್ಯದಲ್ಲಿ ಸುಪ್ರತೀಕ ಎಂಬ ಆನೆಯೊಂದಿಗೆ ಭೀಮನು ಹೋರಾಡಿದ ಚಿತ್ರಣ ಮನೋಹರವಾಗಿ ಮೂಡಿದೆ.

'ಸೀಳಿ ಹರಹಿತು ಕರಿಗಳನು ನೇ
ಪಾಳುಗುದುರೆಯ ಥಟ್ಟುಗಳ ಹಿಂ
ಗಾಲಲಣೆದುದು ರಥವನೈದಾರೇಳನೊಂದಾಗಿ ।
ತೋಳೊಳಗೆ ನೆಗ್ಗೊತ್ತಿ ಮಿಗೆ ಕಾ
ಲಾಳ ಹೊತ್ತಳದುಳಿದು ಕಾಲನ
ಗೂಳೆಯಕ್ಕುಪಕಾರಿಯಾದುದು ಸುಪ್ರತೀಕಗಜ'[೬೭]

ಇದೇ ಪ್ರಕರಣವನ್ನು ಪಂಪನ ವಿಕ್ರಮಾರ್ಜುನ ವಿಜಯ ದಲ್ಲಿಯೂ ಕಾಣುತ್ತೇವೆ.

ಇತ್ತೀಚೆಗೆ ಬರೆದ ಆನೆಗಳ ಕುರಿತಾದ ಆಧುನಿಕ ಸಾಹಿತ್ಯ ಕೃತಿಗಳು ಆನೆಗಳ ಕುರಿತು ವಿಶೇಷವಾದ ಮಹಿತಿಗಳು ಹಾಗೂ ಅವುಗಳ ವಿಶಿಷ್ಟ ಗುಂ ಸ್ವಭಾವ, ಲಕ್ಷಣ ಮತ್ತು ಆನೆಗಳ ದೈಹಿಕ ಲಕ್ಷಣ ಆನೆಗಳ ಮತ್ತು ಚಲನವಲನಗಳನ್ನು ತಿಳಿಸುವ ಮಹತ್ವದ ಕೃತಿಗಳಾಗಿವೆ. ಅವುಗಳನ್ನಿಲ್ಲಿ ಸಮೀಕ್ಷಿಸಬಹುದು.

**ಲೆಫ್ಟಿನೆಂಟ್ ಕರ್ನಲ್ ವಿಲಿಯಮ್ಸ್** ಭಾರತದೊಳಗಿನ ಆನೆಗಳೊಂದಿಗಿನ ತಮ್ಮ ಒಡನಾಟದ ಚಿತ್ರಗಳನ್ನು 'ಎಲಿಫೆಂಟ್ ಬಿಲ್' ಪುಸ್ತಕದೊಳಗೆ ನೀಡಿದ್ದಾರೆ. ಈ ಕೃತಿಯನ್ನು ನೀ ಕಸ್ತೂರಿ ಎಂಬುವವರು 'ಗಜೇಂದ್ರ ಲೋಕ'(೧೯೫೮) ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಲೆಫ್ಟಿನೆಂಟ್ ಕರ್ನಲ್ ವಿಲಿಯಮ್ಸರು ಬ್ರಿಟಿಷ್ ಆಡಳಿತಾವಧಿಯಲ್ಲಿ ಭಾರತದೊಳಗೆ ಸೈನ್ಯದ ತುಕಡಿಯೊಂದರ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸಿದವರು. ಮುಖ್ಯವಾಗಿ ಸೈನ್ಯದ ಅಂಗವಾಗಿದ್ದ ಆನೆಗಳ ಉಸ್ತುವಾರಿ ಇವರದಾಗಿತ್ತು. ಹೀಗಾಗಿ ಆನೆಗಳನ್ನು ತುಂಬಾ ಹತ್ತಿರದಿಂದ ಅರಿಯುವ ಭಾಗ್ಯ ವಿಲಿಯಮ್ಸ್‌ರಿಗೆ ದೊರೆಯಿತು.

'ಹದಿನಾಲ್ಕನೇ ದಳದ ನಮ್ಮ ಸೈನಿಕರಲ್ಲಿ ಬಿಳಿಯಿಂದ ಹಿಡಿದು ಹಳದಿ ಕಂದುಗಳ ಎಲ್ಲಾ ಛಾಯೆಗಳೂ ಸೇರಿ ಇದ್ದಿಲು ಬಣ್ಣದವರೂ ಇದ್ದರು. ನಾವು ಉಪಯೋಗಿಸುವ ಪ್ರಾಣಿಗಳೂ ಇದೇ ಬಗೆಯವು. ಪಾರಿವಾಳ, ನಾಯಿ, ತಟ್ಟು, ಹೇಸರಕತ್ತೆ, ಕುದುರೆ, ಎತ್ತು, ಎಮ್ಮೆ ಹಾಗೂ ಆನೆ ಎಲ್ಲವೂ ಉತ್ತಮವಾಗಿ ನಿಷ್ಠಾವಂತ ಸೇವೆ ಸಲ್ಲಿಸಿದವು. ಮನುಷ್ಯರಿಗೂ ಪ್ರಾಣಿಗಳಿಗೂ ನಡುವೆ ಪ್ರೀತಿಯ ನಿಜವಾದ ಸಂಬಂಧವಿತ್ತು. ಆದರೆ ನಮಗೆ ಆನೆಯಂದರೆ ವಿಶೇಷ ಆದರ. ಅದರ ಆಕಾರಕ್ಕಾಲೀ ಬಲಕ್ಕಾಗಲೀ ಈ ಆದರವಲ್ಲ. ನಮ್ಮ ಗೌರವಕ್ಕೆ ನಿಜವಾದ ಕಾರಣ ಆನೆಯ ಗಾಂಭೀರ್ಯ, ಜಾಣತನ. ಅದು ಸೇತುವೆ ಕಟ್ಟುವುದನ್ನು ನೋಡುವುದೆಂದರೆ ಭಾರಿ ದಿಮ್ಮಿಗಳನ್ನು ಆ ಗಜರಾಜ ಮೇಲೆತ್ತುವ ಚಾಕಚಕ್ಯತೆ, ಆ ದಿಮ್ಮಿಗಳನ್ನು ಸರಿಯಾಗಿ ಜೋಡಿಸುವ ಅದರ ನಿಖರತೆಯನ್ನು ನೋಡುವುದೆಂದರೆ ತರಬೇತಾದ ಆನೆ ಕೇವಲ ಸಾಗಣಿಕೆಯ ಮೃಗವಲ್ಲ, ಚೆನ್ನಾಗಿ ನುರಿತ ಕುಶಲ ಶಿಲ್ಪಿ–ಸೈನಿಕ ಎಂಬುದನ್ನು ಅರಿತಂತೆಯೆ'[೬೮] ಗಜೇಂದ್ರ ಲೋಕ ಕೃತಿಯಲ್ಲಿ ಆನೆಯ ಗುಣ ಸ್ವಭಾವ, ಮಾವುತರು ಆನೆಗಳನ್ನು ನಡೆಸಿಕೊಳ್ಳುವ ರೀತಿ, ಆನೆ ಮತ್ತು ಮಾವುತರ ಮಧ್ಯದ ಅವಿನಾಭಾವ ಸಂಬಂಧ, ಆನೆಗಳ ಕಾರ್ಯ ವೈಖರಿ, ಕಾಡಾನೆಗಳನ್ನು ಅಥವಾ ತಂಡಕ್ಕೆ ಸೇರದ ಆನೆಗಳನ್ನು ಪಳಗಿಸುವ ರೀತಿ, ಆನೆಗಳ ಬುದ್ಧಿವಂತಿಕೆ, ಮನುಷ್ಯ ಹಾಗೂ ಆನೆಗಳ ಮಧ್ಯದ ಸಂಬಂಧ ಇತ್ಯಾದಿ ವಿಚಾರಗಳನ್ನು ಈ ಕೃತಿ ಒಳಗೊಂಡಿದೆ. ಕೇವಲ ಪ್ರಾಚೀನ ಭಾರತದ ಸೈನಿಕರು ಮಾತ್ರ ಆನೆಗಳನ್ನು ಬಳಕೆ ಮಾಡುತ್ತಿದ್ದರು. ಹೊಸ ತಲೆಮಾರಿನ ಸೈನ್ಯದೊಳಗೆ ಆನೆಗಳ ಬಳಕೆ ಇರಲಿಲ್ಲ ಎಂಬ ತಪ್ಪು ಅಭಿಪ್ರಾಯವನ್ನು ಈ ಕೃತಿ ಹೊಡೆದೋಡಿಸುತ್ತದೆ.

ಇಂಥದೇ ಮತ್ತೊಂದು ಪುಸ್ತಕ **ಸಿ. ಎಚ್. ಬಸಪ್ಪನವರ** 'ಗಜಗಾಮಿನಿ– ಆನೆಯ ಬೆಡಗಿನ ನಡಿಗೆ'(೨೦೦೫) ಎಂಬುದಾಗಿದೆ. ಡಾ ಸಿ.ಎಚ್. ಬಸಪ್ಪನವರ ಅವರು ಕರ್ನಾಟಕ ಅರಣ್ಯ ಇಲಾಖೆಯಲ್ಲಿ ಉನ್ನತವಾದ ವಿವಿಧ ಹುದ್ದೆಗಳನ್ನು ನಿರ್ವಹಿಸಿದವರು. ಗಜಗಾಮಿನಿ ಕೃತಿ ಪೂರ್ಣವಾಗಿ ಆನೆಗಳ ಬದುಕನ್ನು ವಿವರಿಸುವ ಕೃತಿ. ಇದರ ಮೊದಲ ಭಾಗದಲ್ಲಿ ಬಂಡಿಪುರ ರಾಷ್ಟ್ರೀಯ ಮೃಗಧಾಮ–ಆನೆಗಳ ದೇಗುಲದಂತೆ, ಎರಡನೇ ಭಾಗದೊಳಗೆ ಆನೆಗಳ ಆಕಾರ ಸ್ವಭಾವದ ಕುರಿತ ಮಾಹಿತಿ ಇದೆ. ಮೂರನೇ ಭಾಗದಲ್ಲಿ ಆನೆಯ ಕುರಿತಾದ ದಂತಕಥೆ, ಚಾರಿತ್ರಿಕಗಳು, ಕಲೆ ಮತ್ತು ಜಾನಪದ ಸಾಹಿತ್ಯದಲ್ಲಿ ಮೂಡಿಬಂದ ಆನೆಯ ಚಿತ್ರಣದ ವಿವರವಿದೆ. ನಾಲ್ಕನೇ ಭಾಗದಲ್ಲಿ ಆನೆಯ ಹಿಂಡು, ಒಂದು ಭದ್ರಕೋಟೆಯಂತೆ ಎಂದಿದ್ದು ಆನೆಗಳ ಜೀವನಕ್ರಮ, ಆನೆಗಳ ಸ್ವಭಾವ, ಮುಂಡಾನೆಗಳು, ಸಲಗಗಳ ರೀತಿ, ಮರಿಗಳನ್ನು ಕಾಪಾಡುವ ಕ್ರಮ, ಆನೆಗಳ ಸಾಂಘಿಕ ಜೀವನ

ಮುಂತಾದ ವಿವರಗಳಿವೆ. ಐದನೇ ಭಾಗವು ಕಾಡಿನಲ್ಲಿ ಚಲಿಸುವ ಛಾಯೆಗಳು ಎಂದಿದ್ದು ಕಾಡಿನೊಳಗಿನ ತಮ್ಮ ಅನುಭವಗಳನ್ನು ಲೇಖಕರು ವಿವರಿಸಿದ್ದಾರೆ. ಆರನೇ ಅಧ್ಯಾಯವು ಆನೆಗಳು ಹಾಗೆ ಮಾಡುವುದೆಲ್ಲ ಏಕೆ? ಎಂದಿದ್ದು ಇದರಲ್ಲಿ ಆನೆಗಳು ಬರಗಾಲ ಸ್ಥಿತಿಯನ್ನು ಹೇಗೆ ಎದುರಿಸುತ್ತವೆ, ಆನೆಗಳ ನಡವಳಿಕೆ, ಮೈಮೇಲೆ ಕೆಸರೆರಚಿಕೊಳ್ಳುವಿಕೆ, ಸಲಗಗಳಲ್ಲಿನ ಕಾದಾಟ, ಆನೆಗಳೊಂದಿಗೆ ವ್ಯವಹರಿಸುವಾಗ ಮನುಷ್ಯ ಯಾವ ಬಗೆಯಲ್ಲಿ ವರ್ತಿಸಬೇಕು ಇತ್ಯಾದಿ ವಿವರಗಳಿವೆ. ಭಾಗ ಏಳರಲ್ಲಿ ಮದ್ದಾನೆಯಲ್ಲಿ ಭೋಗದ ಲಾಲಸೆ ಎಂದಿದ್ದು ಇದರಲ್ಲಿ ಆನೆಯ ಜನನಾಂಗಗಳು, ವೀರ್ಯಾಣು ಉತ್ಪಾದನೆ, ಪರಿಪಕ್ವ ಸಂಭೋಗ, ರತಿಕ್ರೀಡೆಯಲ್ಲಿ ಹೆಣ್ಣಾನೆಗಳ ನಡವಳಿಕೆ, ಗರ್ಭಧಾರಣೆ, ಮರಿಗಳ ಜನನ, ಹುಟ್ಟಿದ ಮರಿಯ ನಡವಳಿಕೆ, ಅವಳಿ ಅಥವಾ ತ್ರಿವಳಿಗಳ ಜನನ, ಮೋತಿ ಕುಲಾಂತರಿ ತಳಿಯ ಜನನ, ಕಾಡಿನಲ್ಲಿ ಆನೆಯ ವಯಸ್ಸು ಕಂಡು ಹಿಡಿಯುವ ಕ್ರಮಗಳು, ಆನೆಗಳಲ್ಲಿ ಜನನ ಮರಣಗಳ ಪ್ರಮಾಣ ಮುಂತಾದ ವಿವರಗಳಿವೆ. ಎಂಟನೇ ಭಾಗದಲ್ಲಿ ಸೆರೆ ಹಿಡಿಯುವುದು, ಸಾಕುವುದು ಮತ್ತು ತರಬೇತು ಎಂದಿದ್ದು ಆನೆಗಳನ್ನು ಸೆರೆ ಹಿಡಿಯುವ ಕ್ರಮ, ಮೈಸೂರು ಹಾಗೂ ಇತರ ಭಾಗಗಳಲ್ಲಿನ ಖೆಡ್ಡಾ, ಆನೆಗಳನ್ನು ಪಳಗಿಸುವುದು, ಮಾವುತ ಆನೆಯ ಮಧ್ಯದ ಸಂಬಂಧ, ಆನೆಗಳ ಬಿಡಾರ ಹಾಗೂ ಅದರ ಕಾರ್ಯನಿರ್ವಹಣೆ, ಗರ್ಭಿಣಿ ಆನೆಯ ಆರೈಕೆ, ಆರೋಗ್ಯ ಲಕ್ಷಣ, ಅನಾರೋಗ್ಯದ ಲಕ್ಷಣಗಳು, ಸರ್ಕಸ್ ಹಾಗೂ ಮೃಗಾಲಯದೊಳಗಿನ ಆನೆಗಳ ಕುರಿತಾದ ವಿವರಗಳಿವೆ. ಒಂಬತ್ತನೇ ಭಾಗದಲ್ಲಿ ಗಂಡಾಂತರದ ಅಂಚಿನಲ್ಲಿ ಆನೆಗಳು ಎಂದಿದ್ದು ಪ್ರಾಚೀನ ಯುಗದಲ್ಲಿ ಆನೆಗಳ ಸ್ಥಿತಿ, ಏಷಿಯಾದಲ್ಲಿ ಆನೆಗಳ ಹಂಚಿಕೆ, ಭಾರತದೊಳಗೆ ಆನೆಗಳ ಹಂಚಿಕೆ ಹಾಗೂ ಸ್ಥಿತಿ ಗತಿ, ಕರ್ನಾಟಕದೊಳಗೆ ಆನೆಗಳ ಹಂಚಿಕೆ ಹಾಗೂ ಸ್ಥಿತಿ ಗತಿ, ಆನೆದಂತ ಮುಂತಾದ ವಿವರಗಳನ್ನು ಈ ಭಾಗ ಒಳಗೊಂಡಿದೆ. ಭಾಗ ಹತ್ತರಲ್ಲಿ ಇಪ್ಪತ್ತೊಂದನೇ ಶತಮಾನದಾಚೆಯೂ ಆನೆ ಎಂದಿದ್ದು ಆನೆಗಳ ಅವಶ್ಯಕತೆ, ಮಾನವನ ಅತಿಯಾಸೆ, ಆನೆಯ ರಕ್ಷಣೆಗೆ ವಿಶೇಷ ಯೋಜನೆ ನೀತಿ ನಿರೂಪಣೆಗಳ ಅಗತ್ಯ, ಪ್ರತಿಬಂಧಕ ಕ್ರಮಗಳ ಕುರಿತು ತಿಳಿಸಲಾಗಿದೆ. ಕೊನೆಯಲ್ಲಿ ಅನುಬಂಧಗಳು ಹಾಗೂ ಪಾರಿಭಾಷಿಕ ಪದಕೋಶಗಳನ್ನು ನೀಡಲಾಗಿದೆ.

ಮುಪ್ಪಿನ ಷಡಕ್ಷರಿಯವರ ತಿರುಕನ ಕನಸು ಎಂಬ ಪದ್ಯದಲ್ಲಿ 'ತಿರುಕನೂರ ಊರ ಮುಂದೆ ಮುರುಕು ಧರ್ಮ ಶಾಲೆಯಲ್ಲಿ' ಎಂಬ ಚರಣದಿಂದ ಪ್ರಾರಂಭಗೊಳ್ಳುತ್ತದೆ. ಈ ಪದ್ಯ ತಿರುಕನ ಕನಸನ್ನು ಸಾಂಕೇತಿಕವಾಗಿ ಬಳಸಿಕೊಂಡು ಆಧ್ಯಾತ್ಮಿಕ ವಿಚಾರವನ್ನು ತಿಳಿಸುವ ಉದ್ದೇಶವನ್ನು ಹೊಂದಿದೆ. ಪದ್ಯದಲ್ಲಿ ತಿರುಕನು ಆ ದೇಶದ ರಾಜನು ತನ್ನ

ಮಗಳಿಗಾಗಿ ವರಾನ್ವೇಷಣೆಯಲ್ಲಿ ತೊಡಗಿದ್ದು ಆನೆಯ ಸೊಂಡಿಲೊಳಗೆ ಹೂವಿನ ಹಾರವೊಂದು ಕೊಟ್ಟಿರುತ್ತಾನೆ. ನಗರದೊಳಗೆ ರಾಜಬೀದಿಯಲ್ಲಿ ಯೋಗ್ಯ ವರನಿಗಾಗಿ ಹಾರವಿಡಿದು ಅನ್ವೇಷಣೆಗೆ ಹೊರಟ ಆನೆಯು ತಿರುಕನ ಕೊರಳಿಗೆ ಹಾರ ಹಾಕಿಬಿಡುತ್ತದೆ. ತಿರುಕನನ್ನು ಅರಮನೆಗೆ ಕರೆದುಕೊಂಡುಹೋಗಿ ರಾಜಕುಮಾರಿಯನ್ನು ಕೊಟ್ಟು ವಿವಾಹ ಮಾಡಿದಂತೆ ತಿರುಕನು ಹಗಲುಗನಸು ಕಾಣುವ ಚಿತ್ರಣ ಪದ್ಯದೊಳಗಿದೆ. ತಿನ್ನುವುದಕ್ಕೂ ಗತಿ ಇರದ ತಿರುಕನು ಒಂದು ರಾಜ್ಯದ ರಾಜಕುಮಾರಿಯನ್ನು ಮದುವೆಯಾದಂತೆ ಕನಸು ಕಾಣುವುದು ವಾಸ್ತವ ಬದುಕಿನಲ್ಲಿ ಅಸಾಧ್ಯವೆಂಬುದನ್ನೇ ಪದ್ಯ ಧ್ವನಿಸುತ್ತದೆ.

ಹಾಗೆಯೇ ಹಾ.ತಿ. ಕೃಷ್ಣೇಗೌಡರು ಮೈಸೂರು ಭಾಗದಲ್ಲಿ ಕಿನ್ನರಿ ಸಂಸ್ಕೃತಿಗೆ ಸೇರಿದ ಗಜಮೋಹಿನಿ ಎಂಬ ಜನಪದ ಕಾವ್ಯವನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಇದರಲ್ಲಿ ಆರತಿ ಮಾಡಲು ಹೋದ ರಾಜಕುಮಾರಿಯನ್ನು ಕಟ್ಟಿಹಾಕಿದ ಗಂಡಾನೆ ಸೊಂಡಿಲಿನಿಂದ ಎತ್ತಿ ತನ್ನ ಬೆನ್ನಮೇಲೆ ಕೂಡಿಸಿಕೊಂಡು ಕಾಡಿಗೆ ಹೋಗುವುದೂ ಹಾಗೂ ಅವಳನ್ನು ಹುಡುಕಿ ತಂದವರಿಗೆ ರಾಜನು ಅರ್ಧ ರಾಜ್ಯವನ್ನು ಘೋಷಿಸಿದ ವಿವರಗಳೊಂದಿಗೆ ಕಥೆ ಮುಂದುವರಿಯುವ ಚಿತ್ರಣವಿದೆ.

ಇಲ್ಲಿ ಆನೆ ತನ್ನ ದೇಹದಿಂದ ಹಾಗೂ ಶ್ರೇಷ್ಠತೆಯ ಕಾರಣಕ್ಕಾಗಿ ಮಹತ್ವವಾದುದು ಎಂಬ ನಂಬಿಕೆ ಇದೆ. ಇಂದಿಗೂ ದೇವರ ಮೆರವಣಿಗೆ, ರಾಜಮಹರಾಜರ ಮೆರವಣಿಗೆಗೆ ಆನೆಯ ಪಾತ್ರ ಮಹತ್ವದಾಗಿದೆ. ಇದಕ್ಕೆ ಉತ್ತಮ ಉದಾಹರಣೆ ಮೈಸೂರಿನ ದಸರಾ ಮೆರವಣಿಗೆಯಾಗಿದೆ.

ನವರಾತ್ರಿ ಉತ್ಸವದ ಕೊನೆಯ ದಿನ ನಡೆಯುವ ಆನೆಗಳ ಜಂಬೂಸವಾರಿ ಮೆರವಣಿಗೆ ಅತ್ಯಂತ ಮಹತ್ವದಾಗಿದೆ. ಹಿಂದೆ ಅರಸರು ಸೈನ್ಯದ ಬಲದ ಪ್ರದರ್ಶನದ ಜೊತೆಗೆ ಆನೆ ಕುದುರೆ ಸೇರಿದಂತೆ ರಾಜಮನೆತನದ ವೈಭೋಗವನ್ನು ಪ್ರದರ್ಶಿಸುತ್ತ ಜಂಬೂಸವಾರಿ ಮೆರವಣಿಗೆ ಸಾಗುತ್ತಿತ್ತು. ಅಂದರೆ ಅಂದು ರಾಜಮಹಾರಾಜ ಹಾಗೂ ಜನಸಾಮಾನ್ಯರು ಆನೆಗಳ ಬಗೆಗೆ ಇಟ್ಟಿರುವ ಪ್ರೀತಿ ವಿಶ್ವಾಸ ಮತ್ತು ವಿಶೇಷ ಕಾಳಜಿಯನ್ನು ಇಂತಹ ಹಬ್ಬ ಹರಿದಿನಗಳು ಸೂಚಿಸುತ್ತವೆ.

ವಿಶ್ವವಿಖ್ಯಾತ ಜಂಬೂಸವಾರಿಯು ದಸರಾ ಹಬ್ಬದ ಮುಖ್ಯ ಆಕರ್ಷಣೆ. ವಿಜಯ ದಶಮಿಯ ದಿನ ಹಿಂದೆ ರಾಜರು ಸಕಲ ಮಂಗಳ ಕಾರ್ಯಗಳನ್ನು ಮುಗಿಸಿ ಸಾಯಂಕಾಲ ಜೈತಯಾತ್ರೆಗೆ ಹೊರಡುತ್ತಿದ್ದರು. ಚಿನ್ನದ ಅಂಬಾರಿಯಲ್ಲಿ ಕುಳಿತ ರಾಜರು ಆನೆಯ ಮೇಲೆ ನಗರದ ಮುಖ್ಯ ರಸ್ತೆಗಳಲ್ಲಿ ತೆರಳಿ ಬನ್ನಿ ಮಂಟಪದಲ್ಲಿ ಸಾಂಪ್ರದಾಯಿಕವಾಗಿ

ವಿಜಯಗಳಿಸಿ ಶಮೀವೃಕ್ಷ ಪೂಜೆ ಮಾಡಿ ಮತ್ತೆ ಮೆರವಣಿಗೆಯಲ್ಲಿ ಅರಮನೆಗೆ ಹಿಂದಿರುಗುತ್ತದೆ. ಇದು ಕಣ್ಮನಗಳನ್ನು ತಣಿಸುತ್ತಿದ್ದ ಈ ವರ್ಣರಂಜಿತ ಜಂಬೂಸವಾರಿಯ ದೃಶ್ಯಗಳನ್ನು ಈಗ ನಾವು ಅರಮನೆಯ ಕಲ್ಯಾಣಮಂಟಪದ ಭಿತ್ತಿಚಿತ್ರಗಳಲ್ಲಿ ಕಾಣಬಹುದು.[೯]

ಮಹಾರಾಜರ ಆಳ್ವಿಕೆಯ ಕಾಲದಲ್ಲಿ ಜಂಬೂಸವಾರಿಯ ವೇಳೆ ಆನೆಗಾಡಿಯಲ್ಲಿ ಅರಸು ಮಕ್ಕಳನ್ನು ಕೂರಿಸುತ್ತಿದ್ದರು. ಮೆರವಣಿಗೆಯಲ್ಲಿ ಅವರು ಸಾಗಿದಂತೆ ನೆರೆದಿದ್ದವರೆಲ್ಲ ಅವರತ್ತ ಹೂವೆರಚುತ್ತಿದ್ದರು.[೬]

ಮುಮ್ಮಡಿ ಕೃಷ್ಣರಾಜ ಒಡೆಯರ್ ೧೮೮೦ರಲ್ಲಿ ಜಂಬೂಸವಾರಿ ಮೆರವಣಿಗೆಯಲ್ಲಿ ಅಂಬಾರಿಯ ಕಲ್ಪನೆ ತಂದರು. ಮೆರವಣಿಗೆಯಲ್ಲಿ ಸಾರೋಟ ಮಾದರಿಯ ರಥದಲ್ಲಿ ಕೂರುತ್ತಿದ್ದರು. ರಥದ ಚಕ್ರಕ್ಕೆ ಸ್ವತಃ ಮುಮ್ಮಡಿಯವರೇ ವಿನ್ಯಾಸ ಮಾಡುತ್ತಿದ್ದರೆಂದು ಹೇಳಲಾಗುತ್ತದೆ. ಈ ರಥವನ್ನು ಮೂರು ಜೋಡಿ ಆನೆಗಳು ಎಳೆಯುತ್ತಿದ್ದವು. ಇದನ್ನು ಪುಷ್ಟೀಕರಿಸುವ ವರ್ಣಮಯ ಭಿತ್ತಿಚಿತ್ರವೊಂದು ಜಗನ್ಮೋಹನ ಅರಮನೆಯ ಮೇಲಂತಸ್ತಿನಲ್ಲಿರುವ ರಂಗಮಹಲಿನಲ್ಲಿದೆ.[೭] ಹೀಗೆ ಮೈಸೂರು ಅರಸರು ದಸರಾದ ಆಚರಣೆಯಲ್ಲಿ ಆನೆಗಳನ್ನು ವಿಶೇಷವಾಗಿ ಬಳಸುತ್ತಾ ಬಂದಿದ್ದಾರೆ.

ದಸರಾ ಸಂದರ್ಭದ ಜಂಬೂಸವಾರಿಯಲ್ಲಿ ಆನೆಗಳು ತರಾವರಿ ಆಭರಣಗಳು, ರೇಷ್ಮೆ ವಸ್ತ್ರಗಳು, ಬಣ್ಣದ ಚಿತ್ತಾರದ ಬಳ್ಳಿಯನ್ನು ಮೈಮೇಲೆಲ್ಲಾ ಹರಡಿಕೊಂಡು ತುಂಬಿಕೊಂಡು ಗಂಭೀರವಾಗಿ ಹೆಜ್ಜೆ ಹಾಕುತ್ತಾ ನಡೆದು ಬರುವ ಆನೆಗಳ ದೃಶ್ಯ ಮನ ಸೂರೆಗೊಳ್ಳುತ್ತವೆ. ಪ್ರತಿಸಲ ದಸರಾಕ್ಕೆ ಆನೆಗಳು ನಾಗರಹೊಳೆ, ಬನ್ನೇರುಘಟ್ಟ, ಕ್ಯಾತೇದೇವರ ಗುಡಿ ಮೊದಲಾದ ಕಾಡುಗಳ ಶಿಬಿರಗಳಿಂದ ಮೈಸೂರಿಗೆ ಲಾರಿಗಳಲ್ಲಿ ಬರುತ್ತವೆ. ನಂತರ ಮೆರವಣಿಗೆ ತಾಲೀಮು ಆರಂಭ. ಇದರ ಹಿಂದೆ ಬಹು ಉದ್ದೇಶವಿದೆ. ಅಂಬಾರಿ ಹೊರುವ ಬಲರಾಮ ಮುಂದೆ ಸಾಗುತ್ತಾನೆ. ಈ ಗಂಡಾನೆಯ ಹಿಂದೆ ಉಳಿದ ಆನೆಗಳು ಸಾಲಾಗಿ ನಡೆಯುತ್ತವೆ. ಈ ಮೂಲಕ ನಗರದ ಜನಜಂಗುಳಿ, ವಾಹನಗಳ ಸದ್ದು, ಜನರ ಹರ್ಷೋದ್ಗಾರ ಕೇಕೆ ನಗರದಲ್ಲುಂಟಾಗುವ ಇತರ ಶಬ್ಧದ ಗಡಿಬಿಡಿಗಳನ್ನು ಆನೆಗಳು ಪರಿಚಯಿಸಿಕೊಳ್ಳುತ್ತವೆ. ಹೀಗೆ ದಿನಕ್ಕೆ ಎರಡು ಬಾರಿ ಅರಮನೆಯಿಂದ ಹೊರಟು ಆರು ಕಿ.ಮೀ. ದೂರದ ಬನ್ನಿಮಂಟಪ ತಲುಪಿ ಮತ್ತೆ ಅಲ್ಲಿಂದ ಅರಮನೆಗೆ ಬರುತ್ತವೆ. ಮುಂದೆ ದಸರಾ ಮೆರವಣಿಗೆ ವೇಳೆ ಲಕ್ಷಾಂತರ ಜನರ ಕೂಗಿನ ನಡುವೆ ಧೃತಿಗೆಡದೆ ಹೆಜ್ಜೆ ಇಡುವುದು ಈ ತಾಲೀಮು ಅವುಗಳಿಗೆ ನೆರವಾಗುತ್ತದೆ.[೮]

ತ್ರಿಪದಿಯ ಕವಿ ಎಂದೆ ಪ್ರಸಿದ್ಧವಾಗಿರುವ ಸರ್ವಜ್ಞನು ತನ್ನ ತ್ರಿಪದಿಗಳಲ್ಲಿ ಸಾಂದರ್ಭಿಕವಾಗಿ ಆನೆ ಮುಂತಾದ ಪ್ರಾಣಿಗಳ ಉಲ್ಲೇಖವನ್ನು ಮಾಡಿದ್ದಾನೆ.

'ಅಶ್ವಪತಿ ಗಜಪತಿಯು, ವಿಶ್ವನುತ ಹಂಪೆಯಲಿ
ದುಸ್ಮಾನರೊಡನೆ ಹೊಡೆದಾಡೆ ನರಪತಿಗೆ
ಮಸಣವಹುದೆಂದ ಸರ್ವಜ್ಞ[೬೩]

ಮತ್ತೊಂದು ತ್ರಿಪದಿಯಲ್ಲಿ

'ಕೋಡಗವು ಕುದುರೆಯಲಿ, ನೋಡನೋಡುತ ಹುಟ್ಟಿ
ಕಾಡಾನೆಗೆರಡು ಗರಿಮೂಡಿ ಗಗನದಿರಿ
ದಾಡುವುದ ಕಂಡೆ ಸರ್ವಜ್ಞ'[೬೪]

ಇಲ್ಲಿ ಪ್ರಕೃತಿ ವೈಚಿತ್ರ್ಯವನ್ನು ಕವಿ ತಿಳಿಸುತ್ತಾನೆ. ಆನೆಗೆ ಗರಿ ಮೂಡುವುದಾಗಲೀ, ಕೋತಿಯ ಹೊಟ್ಟೆಯಲ್ಲಿ ಕುದುರೆ ಹುಟ್ಟುವುದಾಗಲೀ ಅಸಾಧ್ಯವಾದ ಮಾತು. ಅದೇನಿದ್ದರೂ ಪುರಾಣಕಾರರ ಕಲ್ಪನೆಯಲ್ಲಿ ಮಾತ್ರ ಸಾಧ್ಯವೆಂಬುದನ್ನು ಪರೋಕ್ಷವಾಗಿ ಕವಿ ತಿಳಿಸುತ್ತಾನೆ.

ಕನ್ನಡ ಸಾಹಿತ್ಯದ ಮತ್ತೊಂದು ವಿಶಿಷ್ಟ ಪ್ರಕಾರ ಕಾಲಜ್ಞಾನ ಸಾಹಿತ್ಯ. ಕೊಡೇಕಲ್ಲು ಬಸವಣ್ಣನಿಂದ ಈ ಸಾಹಿತ್ಯ ಪ್ರಕಾರ ಪ್ರಚಲಿತಗೊಂಡಿತು ಎಂದು ಹೇಳಲಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಕೊಡೇಕಲ್ಲು ಬಸವಣ್ಣ, ತಿಂತಿಣಿ ಮೌನೇಶ, ಕಾಲಜ್ಞಾನದ ನಂಜೇಶ, ರುದ್ರಮುನಿ ಸ್ವಾಮಿ, ಎಮ್ಮೆಬಸವ ಮುಂತಾದ ಹಲವಾರು ಕಾಲಜ್ಞಾನಿಗಳು ಈ ಪ್ರಕಾರದಲ್ಲಿ ಸಾಹಿತ್ಯವನ್ನು ರಚಿಸಿದ್ದಾರೆ. ಕಾಲಜ್ಞಾನವೆಂದರೆ ಹಿಂದೆ ನಡೆದುಹೋದ ಘಟನೆಗಳೊಂದಿಗೆ ಮುಂದೆ ನಡೆಯುವ ಘಟನೆಗಳನ್ನೂ ಈ ಕಾಲಜ್ಞಾನ ಸಾಹಿತ್ಯ ಸೂಚಿಸುತ್ತದೆ ಎಂಬ ನಂಬಿಕೆ ಇಂದಿಗೂ ಜನರಲ್ಲಿದೆ. ಇವು ಬಹುತೇಕ ಬೆಡಗಿನ ವಚನಗಳ ರೂಪದಲ್ಲಿರುತ್ತವೆ. ಆನೆಯ ಉಲ್ಲೇಖವಿರುವ ರುದ್ರಮುನಿ ಸ್ವಾಮಿಯ ಕಾಲಜ್ಞಾನ ವಚನವೊಂದು ಹೀಗಿದೆ.

'ರಾವುತ ನುಂಗ್ಯಾನು ಮದಗಜ ಆನೆಯ
ರಾವುತನ ತುರುಗವೆ ನುಂಗೀತು
ಹನ್ನೆರಡು ಟಂಕೆಗೆ ಒಂದು ಬಿಳಿಪಟ್ಟೆ ಮಾರೀತು'[೬೫]

ಮತ್ತೊಂದು ಕಾಲಜ್ಞಾನದಲ್ಲಿ

'ಆನೆ ಕುದುರೆ ಮಂದಿ ಸೇನೆ ಭಂಡಾರವು ಕೂಕೂಕೂ
ತಾನೆದ್ದು ನಡೆದಾನು ಉತ್ತರ ಭಾಗಕ್ಕೆ ಕೂಕೂಕೂ'[೬೬]

ಕನ್ನಡ ಸಾಹಿತ್ಯದಲ್ಲಿ ಕಾಲಜ್ಞಾನ ಪ್ರಕಾರವಿರುವಂತೆ ಮುಂಡಿಗೆಗಳು ಮೂಡಿಬಂದಿವೆ. ಒಂದು ಮುಂಡಿಗೆಯಲ್ಲಿ ಆನೆಯ ಕುರಿತು ಬಂದ ಪ್ರಸ್ತಾಪ ಈ ರೀತಿಯಾಗಿದೆ.

'ಮದ್ದಾನೆ ಕುದುರೆಗಳು ಭರಿತ ಬಿದ್ದಾವು ಲೆಕ್ಕವಿಲ್ಲದೆ ಹಾಕಲೋ ಮಂಡಿಗೆಯ
ಉದ್ದನ ಕೊರಳಿನ ಒಂಟಿಯದ್ದಾವು ಯಮಪುರಕೆ ಹಾಕಲೋ ಮುಂಡಿಗೆಯ'[೫೮]

'ಆನೆಶಾನೆಯು ಕುದುರೆ ಸರ್ವರು
ಬೋನದ ಕುರಿಗಳಂತೆ
ಹೇನು ಹೆಚ್ಚಿದ ಮಂಡೆ ಮೀನದಂತಾಗಿ
ನಾನೆಂಬಹಂಕಾರದಿಂದ'[೭೮]

'ಮುಂದೆ ಬೊಕ್ಕಸಾಂಬಾರು ಗಜಿಬಿಜಿ
ಮುಂದೆ ಕಕ್ಕಸವಾಗದ ಗಜಿಬಿಜಿ
ಮುಂದೆ ಆನೆ ಕುದುರೆ ಗಜಿಬಿಜಿ
ಮುಂದೆ ಸಂದಣಿ ಸಂಭ್ರಮ ಗಜಿಬಿಜಿ'[೭೯]

ಹೀಗೆ ಕಾಲಜ್ಞಾನ ಹಾಗೂ ಮಂಡಿಗೆಗಳಲ್ಲಿ ಸಂಕೇತಿಕ ಪದಗಳ ಮೂಲಕ ಹೊಸ ಅರ್ಥ, ಜೀವನದ ಮರ್ಮಗಳನ್ನು ತಿಳಿಸುವ ಪ್ರಯತ್ನವನ್ನು ಕಾಲಜ್ಞಾನ, ಮುಂಡಿಗೆಯನ್ನು ರಚಿಸಿದ ಕವಿಗಳು ಮಾಡಿದ್ದಾರೆ.

ಆನೆಯ ಕುರಿತಾಗಿ ಹುಟ್ಟಿದ ಜಾತಕ ಹಾಗೂ ಜನಪದ ಕಥೆಗಳಿಗಂತೂ ಲೆಕ್ಕವಿಲ್ಲ. ಗಜ ಜಾತಕದ ಅನುಸಾರವಾಗಿ ಬೋಧಿಸತ್ವನು ತನ್ನ ಹಿಂದಿನ ಜನ್ಮದಲ್ಲಿ ಆನೆಯಾಗಿದ್ದನು ಅವನು ಆಗ ಎಂಟು ಸಾವಿರ ಆನೆಗಳ ಮುಖಂಡನಾಗಿದ್ದನು. ಅವನಿಗೆ ಇಬ್ಬರು ಪರಿಚಾರಿಕೆಯರು, ಇದರಲ್ಲಿ ಒಬ್ಬಳು ತನ್ನ ಒಡೆಯನ ಮೇಲೆ ಕೋಪಗೊಂಡಳು, ಅವನಿಗೆ ಸರಿಯಾದ ಪಾಠ ಕಲಿಸಬೇಕೆಂದು ನಿರ್ಧರಿಸಿ ಕಾಶಿಯ ನಿರ್ಜನ ಪ್ರದೇಶವೊಂದರಲ್ಲಿ ತಪಸ್ಸನ್ನು ಕೈಗೊಂಡಳು. ಹೀಗೆ ತಪಸ್ಸು ಮಾಡಿ ಜಯಗಳಿಸಿದ ತರುವಾಯ ಕಾಶಿಯ ರಾಣಿಯಾದಳು. ರಾಣಿಯಾದ ತರುವಾಯ ತನ್ನ ಹಿಂದಿನ ಸೇಡನ್ನು ತೀರಿಸಿಕೊಳ್ಳುವ ಆಲೋಚನೆಯಿಂದ ತನ್ನ ಸೇವಕರಿಗೆ ಬೋಧಿಸತ್ವನ ಕೋರೆಗಳನ್ನು ತೆಗೆದುಕೊಂಡು ಬನ್ನಿ ಎಂದು ಆಜ್ಞಾಪಿಸಿದಳು. ಸೇವಕನು ಬೋಧಿಸತ್ವನ ಕೋರೆಯನ್ನು ಕೀಳಲು ಅಸಮರ್ಥನಾಗುತ್ತಾನೆ. ಬೋಧಿಸತ್ವ ಆನೆಗೆ ಸೇವಕನ ಈ ಅವಸ್ಥೆ ನೋಡಿ ಕರುಣೆ ಯುಂಟಾಯಿತು. ಹೀಗಾಗಿ ತನ್ನ ಕೋರೆಗಳನ್ನು ಸ್ವತಃ ಕಳಚಿ ಸೇವಕನಿಗೆ ನಿನ್ನ ರಾಣಿಗೆ

ಕೊಡುಹೋಗು ಎಂದು ತಿಳಿಸಿದನು. ನಡೆದ ವಿಚಾರವನ್ನೆಲ್ಲ ಹೇಳಿ ಸೇವಕನು ರಾಣಿಗೆ ಬೋಧಿಸತ್ವನ ಕೋರೆಗಳನ್ನು ಒಪ್ಪಿಸುತ್ತಾನೆ. ಸ್ವತಃ ಬೋಧಿಸತ್ವನೇ ಕೋರೆಗಳನ್ನು ಕಿತ್ತುಕೊಟ್ಟ ವಿಚಾರ ಕೇಳಿ ರಾಣಿಗೆ ಆಶ್ಚರ್ಯವೂ ಹಾಗೂ ಪಶ್ಚತ್ತಾಪವೂ ಆಯಿತು. ಪಶ್ಚತ್ತಾಪದಿಂದ ರಾಣಿ ದುಃಖಿಸುವಾಗ ಸ್ವತಃ ಬೋಧಿಸತ್ವನೇ ಬಂದು ರಾಣಿಗೆ ಸಮಾಧಾನವನ್ನು ತಿಳಿಸುತ್ತಾನೆ. ಈ ಕಥೆಯನ್ನು ವಿವರಿಸುವ ಚಿತ್ರವು ಇಂದಿಗೂ ಅಜಂತಾ ಗುಹೆಯಲ್ಲಿ ಚಿತ್ರಿತಗೊಂಡಿರುವುದನ್ನು ಕಾಣಬಹುದು.

ಮತ್ತೊಂದು ಕಥೆಯಲ್ಲಿ ಬೋಧಿಸತ್ವನು ತನ್ನ ಪೂರ್ವ ಜನ್ಮದಲ್ಲಿ ವಿಶ್ವಂಥರ ಎಂಬ ರಾಜಕುಮಾರನಾಗಿದ್ದನು. ಇವನು ಹಿಮಾಲಯದಷ್ಟು ಬೃಹತ್ತಾದ, ಕಾಂತಿಯುಕ್ತ ಮುಖವನ್ನು ಹೊತ್ತ ಮಂದವಾಗಿ ಹೆಜ್ಜೆಯನ್ನು ಇಡುವ ಆನೆಯ ಮೇಲೆ ಕುಳಿತು ಸವಾರಿ ಹೊರಟನು. ಆ ಆನೆಯ ಹೆಸರು ಹಸ್ತಿಗಂಧಿ ಎಂದಾಗಿತ್ತು. ಹೀಗೊಮ್ಮೆ ರಾಜಕುಮಾರ ಸವಾರಿ ಮಾಡುತ್ತಿದ್ದಾಗ, ರಾಜಕುಮಾರನ ದಾನಧರ್ಮಗಳನ್ನು ಕೇಳಿ ತಿಳಿದುಕೊಂಡ ಪಕ್ಕದ ರಾಜ್ಯದ ರಾಜನು ಈರ್ಷ್ಯೆಗೊಂಡ ಮನೋವೃತ್ತಿಯವನಾಗಿ ರಾಜಕುಮಾರನಿಗೆ ತಕ್ಕ ಪಾಠ ಕಲಿಸಲು ಯೋಚಿಸಿದನು. ವಿಶ್ವಂಥರ ರಾಜಕುಮಾರನು ಸವಾರಿ ಮಾಡುತ್ತಿದ್ದ ಆನೆಯನ್ನು ಹಿಡಿದು ತನ್ನ ರಾಜ್ಯಕ್ಕೆ ತರಲು ಸೇವಕರನ್ನು ಕಳಿಸಿದನು. ಬ್ರಾಹ್ಮಣ ವೇಷಧಾರಿಯಾಗಿ ಬಂದ ಸೇವಕರು ರಾಜಕುಮಾರನಿಗೆ ಆಶೀರ್ವದಿಸಿ ತರುವಾಯ ಅವನ ದಾನ ಧರ್ಮಗಳನ್ನೂ, ಸವಾರಿ ಮಾಡುವ ಆನೆಯನ್ನು ಕುರಿತು ಬಾಯ್ತುಂಬ ಹೊಗಳಿದರು. ಇದರಿಂದ ಸಂಪ್ರೀತನಾದ ರಾಜಕುಮಾರನು ನಿಮಗೆ ಏನು ಬೇಕು ಕೇಳಿ ಎಂದು ಬ್ರಾಹ್ಮಣ ವೇಷಧಾರಿಗಳಿಗೆ ಕೇಳಿದಾಗ ಈ ಸೇವಕರು ಅವನು ಸವಾರಿ ಮಾಡುವ ಆನೆಯನ್ನು ನೀಡುವಂತೆ ಕೇಳಿಕೊಂಡರು. ಅವರ ಮಾತಿಗೆ ಎರಡು ಮಾತನಾಡದೆ ರಾಜಕುಮಾರನು ಬ್ರಾಹ್ಮಣ ವೇಷಧಾರಿಗಳಿಗೆ ದಾನ ಮಾಡಿದನು. ಆದರೆ ವಿಶ್ವಂಥರನ ಪ್ರಜೆಗಳು ಆನೆಯ ದಾನ ಸಮ್ಮತವಾದುದಲ್ಲ ಎಂದು ವಿರೋಧಿಸಿದರು. ಪ್ರಜೆಗಳಿಗೆ ಆನೆಯು ರಾಜ್ಯದ ಕೀರ್ತಿಯ ಪ್ರತೀಕವಾಗಿತ್ತು. ರಾಜಕುಮಾರನು ಆನೆಯನ್ನು ದಾನ ಮಾಡಿಯಾಗಿದೆ. ಇತ್ತ ಪ್ರಜೆಗಳು ಅಸಮ್ಮತಿ ಸೂಚಿಸುತ್ತಿದ್ದಾರೆ. ಈ ಉಭಯ ಸಂಕಟದಿಂದ ಪಾರಾಗಲು ರಾಜಕುಮಾರನು ಅಜ್ಞಾತವಾಸಕ್ಕೆ ತೆರಳುತ್ತಾನೆ ಎಂದಿದೆ. 'ಈ ಕಥೆಯನ್ನು ಭರಹಟ್‌ನ ದೇವಾಲಯದ ಭಿತ್ತಿಯ ಮೇಲೆ ಕೆತ್ತಲ್ಪಟ್ಟಿದೆ'[೮೦]

ಕನ್ನಡದ ಜನಪದ ಕಥೆ ಹಾಡುಗಳಲ್ಲಿ ಆನೆಗೆ ಸಂಬಂಧಿಸಿದ ವಿವರಗಳು ನೂರಾರು ದೊರೆಯುತ್ತವೆ. ಜನಪದ ಕಥೆಗಳಲ್ಲೊಂದು ಕಥೆ ಈ ಕೆಳಗಿನಂತಿದೆ. ಈ ಕಥೆಯಲ್ಲಿ

ಆನೆಯೊಂದು ತನ್ನ ಉದ್ಧಟತನದಿಂದ ನಡೆಸುವ ಕೃತ್ಯದಿಂದಾಗಿ ಕೊನೆಗೆ ಅದರ ಪ್ರತಿಫಲ ಉಣ್ಣಬೇಕಾಗುತ್ತದೆ.

'ಒಂದು ಕಾಡಿನಲ್ಲಿ ಒಂದು ದಿನ ಗುಬ್ಬಿಯೊಂದು ಮರದ ಮೇಲೆ ಬಚ್ಚೊಂದನ್ನು(ಗೂಡು) ಮಾಡಿ ಮೊಟ್ಟೆಗಳನ್ನಿಟ್ಟು ಮರಿ ಮಾಡಿತು. ಎರಡು ಮರಿಗಳಾದವು. ಗುಬ್ಬಿ ಕುಟುಂಬದ ಅಪ್ಪ, ಅಮ್ಮ ಗುಬ್ಬಿಗಳು ದಿನಾಲೂ ಹಾರಲು ಬಾರದ ತಮ್ಮ ಮರಿಗಳಿಗೆ ಆಹಾರ ಹುಡುಕಿ ತಂದು ಗುಟುಕು ಕೊಡುತ್ತಿದ್ದವು. ಹೀಗೆ ಒಮ್ಮೆ ಮರಿಗಳನ್ನು ಗೂಡಿನಲ್ಲಿ ಬಿಟ್ಟು ಆಹಾರ ತರಲು ಕಾಡಿನೊಳಗೆ ಹೋದಾಗ ಅದೇ ದಾರಿಯಲ್ಲಿ ಆನೆಯೊಂದು ಬಂದಿತು. ಒಳ್ಳೆ ಸೊಕ್ಕಿನಲ್ಲಿದ್ದ ಆ ಆನೆಗೆ ಯಾವುದರ ಕಡೆಗೂ ಲಕ್ಷ್ಯವಿರಲಿಲ್ಲ. ದಾರಿಯಲ್ಲಿ ಎದುರಿಗೆ ಸಿಕ್ಕ ಮರ, ಗಿಡ, ಬಳ್ಳಿಗಳನ್ನೆಲ್ಲಾ ಕಿತ್ತುಹಾಕುತ್ತ ದಾಂದಲೆ ಮಾಡುತ್ತ ಬರುತ್ತಿತ್ತು. ಹೀಗೆ ಬರುವಾಗ ಗುಬ್ಬಿ ಬಚ್ಚನ್ನಿರಿಸಿದ ಮರದ ಟೊಂಗೆಯನ್ನು ಹಿಡಿದು ಜೋರಾಗಿ ಅಲ್ಲಾಡಿಸಿ ಹೋಯಿತು. ಇದರಿಂದಾಗಿ ಆ ಟೊಂಗೆಗೆ ಹೊಂದಿಕೊಂಡಿದ್ದ ಗುಬ್ಬಿ ಬಚ್ಚಿನಲ್ಲಿದ್ದ ಗುಬ್ಬಿ ಮರಿಗಳು ನೆಲದ ಪಾಲಾದವು. ನೆಲಕ್ಕೆ ಬಿದ್ದ ಗುಬ್ಬಿಯ ಮರಿಗಳನ್ನು ತುಳಿದು ಆನೆ ಹೊರಟುಹೋಗಿತ್ತು. ಇದೇ ರೀತಿ ಎಷ್ಟೋ ಪಕ್ಷಿ ಪ್ರಾಣಿಗಳಿಗೆ ಈ ಆನೆಯಿಂದ ಈ ಹಿಂದೆ ತೊಂದರೆಯಾಗಿತ್ತು. ಗುಬ್ಬಿಮರಿಗಳು ಆನೆಯ ಕಾಲ್ತುಳಿತಕ್ಕೆ ಸಿಲುಕಿ ಗತಪ್ರಾಣ ಗಳಾಗಿದ್ದವು. ತಾಯಿ ಗುಬ್ಬಿಯು ತನ್ನ ಮರಿಗಳಿಗಾಗಿ ಆಹಾರವನ್ನು ತೆಗೆದುಕೊಂಡು ಮರದ ಬಳಿ ಬಂದರೆ ಅದರ ಬಚ್ಚು ಇಲ್ಲ, ಅದರೊಳಗಿನ ಮರಿಗಳೂ ಇಲ್ಲ. ಬಚ್ಚು ಎಲ್ಲೋಗಿರಬಹುದೆಂದು ಆತಂಕದಿಂದ ಕೆಳಗೆ ನೋಡಿದರೆ ಬಚ್ಚು ಕೆಳಗೆ ಚಲ್ಲಾಪಿಲ್ಲಿಯಾಗಿ ಬಿದ್ದಿದೆ. ಮರಿಗಳು ಜೀವ ಕಳೆದುಕೊಂಡು ಇರುವೆಗಳಿಗೆ ಆಹಾರವಾಗುತ್ತಿವೆ. ಇದನ್ನು ನೋಡಿ ಗುಬ್ಬಿ ಅಳುತ್ತಾ ಕುಳಿತುಕೊಂಡಿತು. ಗುಬ್ಬಿಯ ಈ ಅವಸ್ಥೆಯನ್ನು ನೋಡಿ ಇರುವೆಯು ಏಕೆ ಅಳುತ್ತಿ ಗುಬ್ಬಕ್ಕ ಎಂದು ಕೇಳಿತು. ಆಗ ಆನೆಯೊಂದರಿಂದಾಗಿ ತನ್ನ ಮರಿಗಳಿಗಾದ ಅವಸ್ಥೆಯನ್ನು ವಿವರಿಸಿತು. ಗುಬ್ಬಿಯ ದುಃಖವನ್ನು ನೋಡಿ ಅಯ್ಯೋ ಎನಿಸಿದ ಇರುವೆಯು ಆನೆಯ ಮೇಲೆ ನಾವು ಪ್ರತಿಕಾರ ತೀರಿಸಿಕೊಳ್ಳೋಣ ಎಂದಿತು. ಅದೇ ಸ್ಥಳಕ್ಕೆ ಬಂದ ನೊಣ, ಕಪ್ಪೆ, ಹಾವು ಇತ್ಯಾದಿ ಪ್ರಾಣಿಗಳೆಲ್ಲಾ ಗುಬ್ಬಿಯ ಅವಸ್ಥೆ ನೋಡಿ ಮರುಗಿ ಗುಬ್ಬಿಗೆ ಸಹಾಯ ಮಾಡಲು ಮುಂದಾದವು. ಇವುಗಳ ಬೆಂಬಲ ನೋಡಿ ಗುಬ್ಬಿಗೆ ಆಶ್ಚರ್ಯವಾಯಿತು. ಅದು ಹೇಳಿತು. ಆನೆಯ ಗಾತ್ರದ ಮುಂದೆ ನಾವೆಲ್ಲ ಚಿಕ್ಕ ಜಂತುಗಳು, ನಾವು ಹೇಗೆ ಆನೆಯ ಮೇಲೆ ಪ್ರತಿಕಾರ ತೀರಿಸಿಕೊಳ್ಳುವುದು ಎಂದು ಕೇಳಿತು. ಅದಕ್ಕೇ ಆ ಪ್ರಾಣಿಗಳೆಲ್ಲಾ ಒಂದು ಉಪಾಯ ಮಾಡಿದವು. ಇರುವೆಯು ಸಮಯ ಕಾದಿದ್ದು ಆನೆಯ ಸೊಂಡಿಲಿನೊಳಗೆ ಹೋಗಿ ಕಚ್ಚಿ ಗಟ್ಟಿಯಾಗಿ

ಹಿಡಿಯಿತು. ಇರುವೆಯ ಕಡಿತದಿಂದ ನವೆ ಬಂದು ಸೊಂಡಿಲಿನೊಳಗೆ ಇರುವ ಇರುವೆಯನ್ನು ಓಡಿಸುವ ಪ್ರಯತ್ನವನ್ನು ಆನೆ ಮಾಡಿತು. ಆದರೆ ಇರುವೆ ಸೊಂಡಿಲಿನಿಂದ ಹೊರಗೆ ಬರಲೇ ಇಲ್ಲ. ಇದರಿಂದ ಆನೆಗೆ ತಲೆಕೆಟ್ಟಂತಾಗಿ ತಲೆ ಝಾಡಿಸುತ್ತ ಕೊನೆಗೆ ಒಂದು ಮರಕ್ಕೆ ಜೋರಾಗಿ ಡಿಕ್ಕಿ ಹೊಡೆಯಿತು. ಇದರಿಂದಾಗಿ ಆನೆಗೆ ಪೆಟ್ಟಾಗಿ ತಲೆಯಿಂದ ರಕ್ತ ಸೋರತೊಡಗಿತು. ಇದೇ ಅವಕಾಶಕ್ಕಾಗಿ ಕಾಯುತ್ತಿದ್ದ ನೊಣವು ತನ್ನ ಗೆಳೆಯ ನೊಣಗಳೊಂದಿಗೆ ಹೋಗಿ ಗಾಯದ ಮೇಲೆ ಕುಳಿತು ಇನ್ನೂ ಹೆಚ್ಚಿನ ತೊಂದರೆ ಕೊಟ್ಟವು. ಅದರಿಂದಾಗಿ ಗಾಯ ಇನ್ನೂ ಹೆಚ್ಚಾಯಿತು. ನೊಣಗಳು ಇಷ್ಟಕ್ಕೇ ಬಿಡಲಿಲ್ಲ. ಗಾಯದ ಮೇಲೆ ಮೊಟ್ಟೆಗಳನ್ನಿಟ್ಟು ನೊಣದ ಮರಿಗಳು ಗಾಯದೊಳಗೆ ಸೇರುವಂತಾಯಿತು. ಹೀಗೆ ಗಾಯ ದೊಡ್ಡದಾಗುತ್ತಾ ಆನೆಯ ಕಣ್ಣುಗಳವರೆಗೆ ವ್ಯಾಪಿಸಿ ಆನೆಗೆ ಕಣ್ಣುಗಳು ಕಾಣದಂತಾದವು. ಕಣ್ಣು ಕಾಣದೆ ಆನೆಯು ಎಲ್ಲಿ ಬೇಕಲ್ಲಿ ಕಾಡಿನಲ್ಲಿ ಅಲೆಯುತ್ತಿದ್ದಿತು. ಹೀಗೆ ಅಲೆಯುವಾಗ ಆನೆಗೆ ನೀರಡಿಕೆಯಾಯಿತು. ಆದರೆ ನೀರಿನ ಸ್ಥಳ ಎಲ್ಲಿದೆ ಎಂಬುದು ಆನೆಗೆ ಕಾಣುತ್ತಿಲ್ಲ. ಇದೇ ಅವಕಾಶಕ್ಕಾಗಿ ಕಾದಿದ್ದ ಕಪ್ಪೆಯು ತನ್ನ ಗೆಳೆಯರೊಂದಿಗೆ ಕೂಡಿ ದೊಡ್ಡ ಕಮರಿಯಲ್ಲಿ ಕುಳಿತು ವಟರ್ ವಟರ್ ಎಂದು ಧ್ವನಿ ಹೊರಡಿಸತೊಡಗಿದವು. ಕಪ್ಪೆಗಳು ಸಾಮಾನ್ಯವಾಗಿ ನೀರಿರುವ ಜಾಗದಲ್ಲಿರುತ್ತವೆ ಎಂದು ಭಾವಿಸಿ ಕುರುಡು ಆನೆಯು ನೀರು ಕುಡಿಯಲೆಂದು ಅಂದಾಜಿನ ಮೇಲೆ ಕಮರಿಯಡೆಗೆ ಹೋಗಿ ಕಮರಿಯೊಳಗೆ ಬಿದ್ದುಬಿಟ್ಟಿತು. ಕಮರಿಯೊಳಗೆ ಬಿದ್ದಿದ್ದರಿಂದ ಆನೆಯ ಕಾಲುಗಳೆಲ್ಲಾ ಮುರಿದುಹೋದವು. ನೊಣಗಳು ಉಪಟಳ ಕೊಟ್ಟು ಆನೆ ಇನ್ನೂ ನರಳುವಂತೆ ಮಾಡಿದವು. ಹಾವು ಆನೆ ಕಡಿದು ನೋವು ಕೊಟ್ಟಿತು. ಅನ್ನಾಹಾರಗಳಿಲ್ಲದೆ ಆನೆ ನರಳುತ್ತ ಇರುವಾಗ ಆನೆಗೆ ತಿಳಿಯುವಂತೆ ಈ ಎಲ್ಲಾ ಪ್ರಾಣಿಗಳು ಹೀಗೆ ಹೇಳಿದವು. ನೀನು ಹಿಂದೆ ನನ್ನನ್ನು ಮೀರಿಸುವ ಪ್ರಾಣಿ ಈ ಜಗತ್ತಿನಲ್ಲಿಯೇ ಇಲ್ಲ. ನನಗೆ ಯಾರೂ ಏನೂ ಮಾಡಲಾರರು ಎಂದು ಮೆರೆಯುತ್ತಿದ್ದೆ. ಅದೇ ಸೊಕ್ಕಿನಿಂದ ನಮ್ಮಂಥ ಸಣ್ಣ ಪ್ರಾಣಿಗಳಿಗೆ ತೊಂದರೆ ಕೊಡುತ್ತಿದ್ದೆ. ನಮ್ಮಂಥ ಸಣ್ಣ ಪ್ರಾಣಿಗಳೂ ಸಹ ಕೋಪಗೊಂಡರೆ ಏನಾಗಬಹುದು ಎಂಬುದಕ್ಕೆ ಇಂದು ನೀನೇ ಉದಾಹರಣೆಯಾದೆ. ನಮಗೆ ತೊಂದರೆ ಕೊಟ್ಟಿದ್ದಕ್ಕಾಗಿ ನಿನಗೆ ಈ ಶಿಕ್ಷೆ ಎಂದು ಹೇಳಿದವು. ಈ ಮಾತುಗಳನ್ನು ಕೇಳಿ ಆನೆಗೆ ತಾನು ಹಿಂದೆ ಮಾಡಿದ ತಪ್ಪುಗಳೆಲ್ಲಾ ನೆನಪಾಗಿ ಪಶ್ಚಾತ್ತಾಪವಾಯಿತು. ಆದರೆ ಕಾಲ ಗತಿಸಿಹೋಗಿತ್ತು. ಆನೆ ನರಳಾಟದಿಂದ ಕೊನೆಯುಸಿರೆಳೆಯಿತು. ಇತ್ತ ಸಣ್ಣ ಪ್ರಾಣಿಗಳೆಲ್ಲ ಆನೆಯ ಉಪಟಳದಿಂದ ಪಾರಾದವು.[೮] ಈ ಕಥೆಯನ್ನು ಇಂದಿಗೂ ಹೈದರಾಬಾದ್ ಕರ್ನಾಟಕ ಮಾತ್ರವಲ್ಲ. ಬಹುತೇಕ ಕರ್ನಾಟಕದಾದ್ಯಂತ ಪ್ರಚಲಿತವಿದೆ.

ಇದು ಆನೆಯ ಕುರಿತಾದ ಕಥೆಯ ಒಂದು ಉದಾಹರಣೆಯಷ್ಟೆ. ಇಂಥ ಎಷ್ಟೋ ಕಥೆಗಳು ಇಂದಿಗೂ ಭಾರತದಾದ್ಯಂತ ಪ್ರಚಲಿತವಿವೆ. ಅದೇ ರೀತಿಯಾಗಿ ಕನ್ನಡದಲ್ಲಿ ಆನೆಗೆ ಸಂಬಂಧಿಸಿದ ಹಾಡುಗಳೂ ಇವೆ. ಉದಾಹರಣೆಗೆ ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿರುವ ಈ ಹಾಡನ್ನು ನೋಡಬಹುದು.

'ಆನೆ ಬಂತೊಂದಾನೆ
ಯಾವೂರ ಆನೆ
ಬಿಜಾಪುರದ ಆನೆ
ಇಲ್ಲಿಗ್ಯಾಕೆ ಬಂತು
ನೀರು ಕುಡಿಯೋಕೆ ಬಂತು......' ಮುಂತಾಗಿ ಮುಂದುವರಿಯುತ್ತದೆ. ಈ ಹಾಡಿಗೆ ಸಂಬಂಧಿಸಿದಂತೆ ಕರ್ನಾಟಕದ ವಿಜಯನಗರ ಅರಸರಿಗೂ ಹಾಗೂ ಬಿಜಾಪುರದ ಸುಲ್ತಾನರ ನಡುವೆ ನಡೆದ ಸಂಘರ್ಷವೇ ಈ ಹಾಡು ಹುಟ್ಟಲು ಕಾರಣ ಎಂಬ ಅಭಿಪ್ರಾಯವನ್ನು ವಿದ್ವಾಂಸರು ತಿಳಿಸುತ್ತಾರೆ. ಆದರೆ ಈ ಹಾಡನ್ನು ಹೇಳುವವರು ಚರಿತ್ರೆಯೇ ಗೊತ್ತಿರದ ಹಳ್ಳಿಯ ಅನಕ್ಷರಸ್ಥರು ಎಂಬುದನ್ನು ಮರೆಯಲಾಗದು.

**೩.೨. ದಾಖಲು ಸಾಹಿತ್ಯ ಆಕರಗಳು**

**೩.೨.೧. ಶಾಸನಗಳು**

ಶಾಸನಗಳು ಭಾರತೀಯ ಸಂಸ್ಕೃತಿಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿವೆ. ಆಳರಸರ ಪ್ರಭುತ್ವದ ಕುರಿತು ಹೇಳುವುದರೊಂದಿಗೆ ಅವರು ತಮ್ಮ ಆಡಳಿತಾವಧಿಯಲ್ಲಿ ನೀಡಿದ ದಾನ ದತ್ತಿಗಳ ಕುರಿತು ಮಹತ್ವದ ದಾಖಲೆಗಳನ್ನು ಒದಗಿಸುತ್ತವೆ. ಅಷ್ಟೇ ಅಲ್ಲದೆ ಗಂಡನ ಸಾವಿನೊಂದಿಗೆ ಚಿತೆಯೇರಿದ ಮಹಾಸತಿಯರು ಇದ್ದರೆಂಬುದನ್ನು ತಿಳಿಸುವ ಮಾಸ್ತಿ ಕಲ್ಲು, ತನ್ನರಸನಿಗಾಗಿ ತಲೆದಂಡವನ್ನು ನೀಡಿದ ಸ್ವಾಮಿನಿಷ್ಠ ವ್ಯಕ್ತಿಗಳ ಕುರಿತು ವಿವರ ನೀಡುವ ವೀರಗಲ್ಲುಗಳು, ತಮ್ಮ ಊರಿನ ಅಥವಾ ರಾಜ್ಯದ ಪಶುಗಳನ್ನು ಕಾಪಾಡಲುಹೋಗಿ ಶತ್ರುಗಳಿಂದ ಹತನಾದ ವೀರರ ವೀರ ಮರಣವನ್ನು ಪ್ರತಿನಿಧಿಸುವ ವೀರಗಲ್ಲುಗಳು, ತಾವು ಸಾಕಿದ ಪ್ರೀತಿಯ ಪ್ರಾಣಿಗಾಗಿ ಇರಿಸಿದ ಸ್ಮಾರಕಗಳು, ಧಾರ್ಮಿಕ ಕಾರಣಗಳಿಗಾಗಿ ಜೀವತೆತ್ತವರಿಗಾಗಿ ನಡೆಸಿದ ನಿಷಧಿ ಕಲ್ಲುಗಳು ಮುಂತಾದವುಗಳೆಲ್ಲವನ್ನೂ ಶಾಸನಗಳೆಂದೇ ಪರಿಗಣಿಸಲಾಗುತ್ತದೆ. ಶಾಸನಗಳಿಗಿಂತ ಪೂರ್ವದಲ್ಲಿಯೇ ಬೃಹತ್ ಶಿಲಾಯುಗದ ಕಾಲದಲ್ಲಿ ಆನೆಯ ಚಿತ್ರಗಳನ್ನು ಕೆಮ್ಮಣ್ಣು, ಸುಣ್ಣದಲ್ಲಿ ಆ ಕಾಲದ ಜನ ಗುಹೆಗಳಲ್ಲಿ ಬರೆದ ಉದಾಹರಣೆ ದೊರೆಯುತ್ತದೆ. ಉದಾಹರಣೆಗೆ ಬಳ್ಳಾರಿ ಜಿಲ್ಲೆಯ ಸಂಗನಕಲ್ಲು, ಹಂಪೆ

ಹಾಗೂ ಕೊಪ್ಪಳ ಜಿಲ್ಲೆಯ ಹಿರೇಬೆಣಕಲ್ಲು, ಆನೆಗೊಂದಿ ಮುಂತಾದ ಕಡೆ ಬೃಹತ್ ಶಿಲಾಯುಗ ಕಾಲದ ಆನೆಗಳ ಚಿತ್ರಗಳನ್ನು ಕಾಣಬಹುದು. ಪ್ರಾಚೀನ ಕಾಲದ ಎಲ್ಲಾ ಹಿಂದೂ ದೇವಾಲಯಗಳ ಮೆಟ್ಟಿಲ ಅಕ್ಕಪಕ್ಕ ಆಸರೆ ಗೋಡೆಗೆ ಆನೆಯ ಶಿಲ್ಪಗಳನ್ನು ಇರಿಸಿರುವುದು ಕಂಡುಬರುತ್ತದೆ. ಅದೇ ರೀತಿ ದೇವಾಲಯಗಳ ಭಿತ್ತಿಯ ಮೇಲೆ ಆನೆಯ ಉಬ್ಬುಶಿಲ್ಪಗಳಿವೆ. ಬೇಲೂರು, ಹಳೆಬೀಡು ಮತ್ತು ಹಂಪೆಯ ಬನ್ನಿದಿಬ್ಬದ ಹೊರಮೈಗೆ ಆನೆಯ ಸಾಲು ಉಬ್ಬು ಚಿತ್ರಗಳಿವೆ. ಹಾಗೆಯೇ ಕುದುರೆ, ನೃತ್ಯಗಾತಿಯರ ಉಬ್ಬುಶಿಲ್ಪಗಳೂ ಇವೆ. ವಿಜಯನಗರ ಕಾಲದಲ್ಲಿ ಆನೆಗಳಿಗೆ ವಿಶೇಷ ಮಾನ್ಯತೆ ಇದ್ದುದು ಕಮಲ ಮಹಲಿನ ಹಿಂಭಾಗದಲ್ಲಿ ವಿಶಿಷ್ಟ ವಿನ್ಯಾಸದಲ್ಲಿ ಕಟ್ಟಿಸಿದ ಆನೆ ಲಾಯದಿಂದ ತಿಳಿಯುತ್ತದೆ. ಹಾಗೆಯೇ ಇತ್ತೀಚೆಗೆ ಉತ್ಖನನದ ವೇಳೆ ಕಮಲ ಮಹಲಿನ ಮುಂಭಾಗದಲ್ಲಿ ಆನೆಯ ಪಳೆಯುಳಿಕೆಗಳು ದೊರೆತಿವೆ. ವಿಜಯನಗರ ಅರಸರ ಸಂಪ್ರದಾಯವನ್ನೇ ಅವರ ಸಾಮಂತರಾದ ಮೈಸೂರು ಅರಸರು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಮೈಸೂರು ಅರಸರ ತರುವಾಯ ಕರ್ನಾಟಕ ಸರ್ಕಾರ ದಸರೆಯನ್ನು ನಾಡಹಬ್ಬವಾಗಿ ಇಂದಿಗೂ ಮೈಸೂರಿನಲ್ಲಿ ಆಚರಿಸುವ ವಿಚಾರ ಎಲ್ಲರಿಗೂ ತಿಳಿದಿದೆ. ಕನ್ನಡ ನಾಡನ್ನು ಆಳಿದ ಗಂಗರು ತಮ್ಮ ರಾಜಲಾಂಛನವಾಗಿ ಆನೆಯನ್ನಿರಿಸಿಕೊಂಡಿದ್ದಾರೆ.

ಕ್ರಿಸ್ತಪೂರ್ವದಲ್ಲಿದ್ದ ಸಿಂಧೂ ನಾಗರಿಕತೆಯ ಕಾಲದ ಆವೆ ಮಣ್ಣಿನ ಆನೆಯ ಗೊಂಬೆಗಳು ದೊರೆತಿವೆ.

ಈಜಿಪ್ತಿನ ನಾಗರಿಕತೆಯ ಕಾಲದಲ್ಲಿ ರಚಿಸಿದ ಶಾಸನವೊಂದನ್ನು ಉತ್ಖನನಕಾರರು ಗುರುತಿಸಿದ್ದಾರೆ. ಈ ಶಾಸನವು ತ್ರಿಕೋನಾಕಾರದಲ್ಲಿದ್ದು ಮೇಲ್ಭಾಗದಲ್ಲಿ ಸೂರ್ಯನ ಚಿತ್ರವಿದೆ. ಸೂರ್ಯನ ಚಿತ್ರದ ಕೆಳಗೆ ಆನೆಯ ಶಿಲ್ಪವಿದ್ದು ಅದರ ಕೆಳಭಾಗದಲ್ಲಿ ಮೂರು ಸಾಲಿನಲ್ಲಿ ಅಕ್ಷರಗಳಿವೆ. ಪ್ರಾಯಶಃ ಆನೆಯ ಚಿತ್ರವಿರುವ ಮೊದಲ ಶಾಸನ ಇದಾಗಿರ ಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಹಾಗೆಯೇ ಕರ್ನಾಟಕದೊಳಗೆ ಆನೆಯ ಉಲ್ಲೇಖವಿರುವ ಹಲವಾರು ಶಾಸನಗಳು ದೊರೆತಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ.

ಮಧುಗಿರಿ ತಾಲೂಕಿನ ಶ್ರಾವಣ ಗುಡಿಯ ವೀರಗಲ್ಲು ಶಾಸನದಲ್ಲಿ ವೀರನು ಬಿಲ್ಲು ಬಾಣಗಳಿಂದ ಆನೆಯನ್ನು ಎದುರಿಸುತ್ತಿದ್ದಾನೆ. ವೀರನು ಬಿಟ್ಟ ಬಾಣ ಆನೆಯ ನೆತ್ತಿಯಲ್ಲಿ ನಾಟಿದೆ. ಆನೆ ಬಾಣದಿಂದಾದ ನೋವನ್ನು ತಾಳಲಾರದೆ ತನ್ನ ಒಂದು ಕಾಲನ್ನು ಸ್ವಲ್ಪ ಮೇಲೆತ್ತಿದೆ. ಆನೆಯ ಮೇಲೆ ಕುಳಿತವ ಜಾರಿ ಹಿಂದಕ್ಕೆ ಬೀಳುತ್ತಿದ್ದಾನೆ. ಆನೆಯನ್ನು

ಹತೋಟಿಯಲ್ಲಿಡಲು ಅಂಕುಶ ಬಳಸಲಾಗಿದೆ. ಇಡೀ ಶಿಲ್ಪವು ಯುದ್ಧದ ಪರಿಣಾಮವನ್ನು ಸೂಚಿಸುತ್ತದೆ.[೮೨]

ಕ್ರಿ.ಶ. ೧೩೧೦ರ ಹಳೇಬೀಡು ಶಾಸನವು ಸಂಕಮದೇವ ಎಂಬುವವನು ಯುದ್ಧ ಮಾಡುತ್ತಿದ್ದ ರೀತಿಯನ್ನು ಈ ರೀತಿ ವಿವರಿಸಲಾಗಿದೆ. 'ಆನೆಯನಾನೆಯ ಮೇಲಿಕ್ಕಿ ಕುದುರೆಯ ಕುದುರೆಯ ಮೇಲಿಕ್ಕಿ ಆಳನಾಳ ಮೇಲಿಕ್ಕಿ ಹೆಣಮಯನಾಗಿ ಕೊಂಡಟ್ಟೆಗಳನಾಡಿ ತನ್ನ ಕೈಯ್ಯ ಹಸುವೊಪ್ಪಿನಂ ತರಿದು ನೆತ್ತರ ಕಡಲಂ ಹರಸಿ...' ಹೋರಾಡುತ್ತಾನೆ ಎಂದು ವಿವರಿಸಿದೆ.[೮೩]

ಕ್ರಿ.ಶ. ೧೧೧೯ರ ಆಲ್ದೂರು ಶಾಸನವೊಂದರಲ್ಲಿ ಹೊಯ್ಸಳ ದೊರೆ ಬಿಟ್ಟಿದೇವನು ಪಾಂಡ್ಯನ ಮೇಲೆ ಯುದ್ಧ ಮಾಡಿದ ಉಲ್ಲೇಖವಿದೆ. ಈ ಶಾಸನದಲ್ಲಿ 'ಹೊಯ್ಸಳ ಬಿಟ್ಟಿದೇವನು ಪಾಂಡ್ಯನ ಮೇಲೆತ್ತಿ ದೆಂಮ್ಮೆಯ ಕಾಳೆಗದಲು ಆನೆಯಘಟ ಕುದುರೆಯ ದಳವೆತ್ತಿದಲ್ಲಿ ಆರಂದೂರು ಲೆಂಕ ಮಾಚಂಣ ಇಮ್ಮಡಿ ಜೀವಿತಕ್ಕೆ..'[೮೪] ಕ್ರಿ.ಶ. ೧೧೨೫ರ ಕೆಳಗೂರು ಶಾಸನದಲ್ಲಿ ಬಿದಿರೂರ ಮುರವನ ಹಿಸಹಾನುಂಗಲಕೋಟೆಯಲು ಆನೆಯ ಕುದುರೆದಳ ಹೊಸ್ಸದೇವರು ಬೆಸಸಲು....'[೮೫] ಎಂದು ವಿವರಿಸಿದೆ.

ಇದೇ ಕಾಲದ ಕೆಳಗೂರ ಶಾಸನದಲ್ಲಿ 'ಬಿದಿರೂರ ರಕ್ಕಸ ಮೊನೆಯಾಳ್ವದೇವ ಈಯಾನೆಯ ಕುದುರೆಯದಳದಲು ಕಯ್ಯ ರಾ ಬುತವಲು ದೇವಣಂಗೆ ಬಿನ್ನ ಪಂಗೈಯ್ಯಲು....'[೮೬] ಎಂಬ ಉಲ್ಲೇಖವಿದೆ.

ಕ್ರಿ.ಶ. ೧೧೨೭ರ ಕಸಗಿಯ ಶಾಸನದಲ್ಲಿ 'ಕಡಗುಳದ ಮೂವತ್ತರ ಬಟ್ಟ ವೆಗ್ಗಡೆಯ ಮುಗದಾಣ ವೆಗ್ಗಡೆ ಬಹುಳದ ಕೊಪ್ಪಲಿದ ಆನೆಗಟ ಕುದುರೆಯದಳ ಎತ್ತದಲಿ ಕುಡಹಳ್ಳಲಿ ಹೆಣದಿರೆದು ಬಿದು ಸುರಲೋಕ..'[೮೭] ಎಂದಿದೆ.

ಸುಮಾರು ಕ್ರಿ.ಶ. ೧೦೭೭ರ ನಗರ(ಶಿವಮೊಗ್ಗ ಜಿಲ್ಲೆ)ದ ಶಾಸನವೊಂದರಲ್ಲಿ ಗಂಗರಾಜನಾದ ಸೈಗೊಟ್ಟ ಶಿವಮಾರನು 'ಶಿವಮಾರಮತ' ಎಂಬ ಗಜಶಾಸ್ತ್ರವನ್ನೂ, ಗಜಾಷ್ಟಕವನ್ನು ಬರೆದ ವಿಚಾರವನ್ನು ತಿಳಿಸುತ್ತದೆ. ಇದರಲ್ಲಿ 'ಶಿವಮಾರ ಸೈಗೊಟ್ಟದೇವಂ ಸೈಗೊಟ್ಟನೆಂಬೆರಡನೆ ಪೆಸರಂ ತಾಳ್ದಿ ಶಿವಮಾರಮತಮೆಂದು ಗಜಶಾಸ್ತ್ರಮಾಡಿ ಮತ್ತಂ–

ಏವಿಳ್ವುದೊ ಶಿವಮಾರನು ಹೀವಳಿಯಾಧಿಪನ ಸುಭಗ ಕವಿತಾಗುಣಮಂ
ಭೂವಳಯದೊಳ್ ಗಜಾಷ್ಟಕ ಮೋವನಿಗೆಯುಂ ಒನಕೆವಾಡುಮಾದುದೆಪೇಳ್ಗುಂ'[೮೮]

ಎಂದು ವಿವರಿಸಲಾಗಿದೆ.

ಕ್ರಿ.ಶ. ೧೨೨೯ರ ದೊಡ್ಡಗದ್ದವಳ್ಳಿಯ ಶಾಸನವೊಂದರಲ್ಲಿ ಆನೆಯ ಕುರಿತ ಉಲ್ಲೇಖ ದೊರೆಯುತ್ತದೆ. 'ಶ್ರೀ ಭೂತನಾಥ ದೇವರಾಳುವ ಹಳ್ಳಿಗಳೊಳಗೆ ಘಟ್ಟಾವಳಿಯಲು ಆನೆ ಮಾಣಿಕ ಕುದುರೆ ಅಡಕೆ ಅರಿಸಿನ ಮೆಣಸಿನಭಾರ ಎಲೆಯಕ್ಕಿ ಉಪ್ಪು ಆವ ಭಂಡವ ಹೇರೂದಡಂ.. ..'[೯]

ಕ್ರಿ.ಶ. ೧೩೫೨ರ ಹಾಗಲಹಳ್ಳಿಯ ಶಾಸನದಲ್ಲಿ 'ದಕ್ಷಿಣ ಸಮುದ್ರಾಧಿಪತಿ, ಅಶ್ವಪತಿ, ಗಜಪತಿ, ನರಪತಿ ತಿನಿರಾಯಾಂಬಾ ಮುಲ.. ..'[೧೦] ಎಂಬ ವರ್ಣನೆ ಇದೆ.

ಕ್ರಿ.ಶ. ೧೩೫೮ರ ಬೇಲೂರು ಶಾಸನವೊಂದರಲ್ಲಿ 'ಬೆಂಬತ್ತಿ ಪೊಯ್ಯಲ್ಕೆ ಬಿರ್ದ್ದತ್ತುರಗಂ ರಾವತರ್ಗಜಂ ಚೋದರು ಬಹಳ ಪದಾತಿ ಪ್ರತಾನಂ.. ..'[೧೧] ಎಂದಿದೆ. ಅಂದರೆ ಕುದುರೆ, ಆನೆಯ ಕಳ್ಳರನ್ನು ರಾವುತರು, ಪದಾತಿ ಸೈನ್ಯ ಬೆನ್ನಟ್ಟಿ ತಡೆಯಿತು ಎಂದು ಈ ಶಾಸನ ವಿವರಿಸುತ್ತದೆ.

'ಆನೆಗಳನ್ನು ಪಳಗಿಸಲು ಯಾವ ಕ್ರಮವನ್ನು ಅನುಸರಿಸುತ್ತಿದ್ದರೋ ತಿಳಿಯದು. ಆನೆಗಳು ಕಾಡಿನಿಂದ ಒಂಟೊಂಟಿಯಾಗಿ ಹೊರಬಂದು ಜನರನ್ನೂ ಬೆಳೆಗಳನ್ನೂ ನಾಶಪಡಿಸುತ್ತಿದ್ದ ವಿಷಯ ಶಾಸನಗಳಲ್ಲಿವೆ'[೧೨] ಯುದ್ಧಕಾಲದಲ್ಲದೆ ಇತರ ಸಮಯದಲ್ಲಿಯೂ ಆನೆಗಳೊಂದಿಗೆ ಹೋರಾಡಿ ಮಡಿದ ವೀರರ ಕುರಿತು ಶಾಸನಗಳ ಮೂಲಕ ತಿಳಿದುಬರುತ್ತದೆ. ಆನೆಯೊಂದು ರಾಜಬೀದಿಯಲು ಹೊಕ್ಕು ಜನಂಗಳ ಕೊಲ್ಲುತ್ತಿದ್ದಾಗ ಆ ಸಾವನ್ನು ಸಹಿಸಲಾಗದೆ ಆನೆಯನ್ನು ನಿಯಂತ್ರಿಸಲು ಹೋಗಿ ರಾಮ ಮಾವಂತನೆಂಬುವವನನ್ನು ಆನೆ ಕೊಂದ ವಿಚಾರ ಶಾಸನವೊಂದರ ಮೂಲಕ ತಿಳಿದುಬರುತ್ತದೆ. ಆ ಶಾಸನದಲ್ಲಿ ಆನೆಯಿಂದ ಕೊನೆಯುಸಿರೆಳೆದ ರಾಮ ಮಾವಂತನನ್ನು ದೇವೇಂದ್ರ ಮೊದಲಾದ ದೇವತೆಗಳು 'ಐರಾವತವನೇರಿಸಿಕೊಂಡುಹೋಗಿ ಸರ್ವೇಶ್ವರನಾದ ಶ್ರೀ ಮಹಾದೇವನ ಸಮೀಪದಲು ಯಿರ್‍ಸಿದರು'[೧೩] ಎಂಬ ಉಲ್ಲೇಖವಿದೆ.

ಕ್ರಿ.ಶ. ೧೪೦೭ರ ಮತ್ತೊಂದು ಶಾಸನದಲ್ಲಿ 'ಚೀಲಗೌರದರಸ ಎಂಬುವವನ ಮೇಲೆ ಆನೆಯು ಏರಿ ಬಂದಾಗ ಬೊಂಮಣ್ಣನೆಂಬುವನು ತನ್ನ ಪ್ರಾಣವ ಕಾಪಾಡಿದ ಕಾರಣ ಆತನಿಗೆ ಚೀಲಗೌರದರಸನು ಉಮ್ಬಳಿಯನ್ನು ಬಿಟ್ಟ ವಿಷಯ ತಿಳಿಯುತ್ತದೆ'[೧೪] ಕ್ರಿ.ಶ. ೧೮೦೧ರ ಶಾಸನವೊಂದರಲ್ಲಿ ಕೊಡಗಿನ ಲಿಂಗರಾಜೇಂದ್ರ ಅರಸನು 'ಕಾಡಿನ ಬೇಟೆಯಲ್ಲು ದೊಡ್ಡ [ಆನೆ] ಹೊಡೆದು ಸಂಣ ಮರಿ ಲನ್ನು ಕೈಸೆರ‍್ರೆ ಹಿಡಿದು' ತಂದವನಿಗೆ ಬೆಳ್ಳಿಯ ಆನೆಯನ್ನು ಬಹುಮಾನವಾಗಿ ನೀಡುತ್ತಾನೆಂಬ ವಿವರಗಳಿವೆ.[೧೫] 'ಆನೆಯ ಉಪಟಳವನ್ನು ತಾಳದೆ ತಮ್ಮ ಅರಸ ವೀರರಾಜೇಂದ್ರನಲ್ಲಿ ಜನರು ಭಿನ್ನವಿಸಿಕೊಂಡಾಗ ಎರಡು ವರ್ಷ

ಒಂದು ತಿಂಗಳ ಅವಧಿಯಲ್ಲಿ ಅರಸನು ೨೩೩ ಆನೆಗಳನ್ನು ಕೊಂದು ೧೮೧ ಆನೆಗಳನ್ನು ಜೀವಂತವಾಗಿ ಸೆರೆ ಹಿಡಿದ ವಿವರವನ್ನು ಪ್ರಸ್ತಾಪಿಸಿದೆ.'[೬೬]

ಕ್ರಿ.ಶ. ೧೮೮೨ರ ಶಾಸನವೊಂದರಲ್ಲಿ 'ದಳವಾಯಿ ಕೆರೆಗೆ ಬಂದುಯಿದ್ದು ತಪ್ಪಿಸಿಕೊಂಡು ಅಡವಿಗೆ ಹೋದ ಆನೆಯನ್ನು ಅಪ್ಪಣೆ ಮೇರೆಗೆ ಗುಂಡಿನಿಂದ ಹೊಡೆಶಿ ಹುಜೂರಿಗೆ ದಪಿಸ್ತ ಬಗ್ಗೆ ಹೆಗ್ಗಡೆದೇವನಕೋಟೆ ಅಮಲುದಾರ ಶಾಂತ್ಯೆಯನ ಮಗ ದೇವಚಂದ್ರಯಂಗೆ' ಜಮೀನನ್ನು ಇನಾಮಾಗಿ ಕೊಟ್ಟ ವಿವರಗಳು ದೊರೆಯುತ್ತವೆ.[೬೭]

ಯುದ್ಧದಲ್ಲಿ ಆನೆಗೆ ವಿಶಿಷ್ಟ ಸ್ಥಾನವಿದ್ದಿತು. ಕ್ರಿ.ಶ. ೧೧೩೬ರ ತಂಬೂರಿನ ಶಾಸನದಲ್ಲಿ 'ಕೇತನಾಯಕಂ[ಪರದಳ]ದ ಒಡ್ಡು ನೂಂಕಿದಲ್ಲಿ ಪೆಣಮಯಂ ಆಗೆ ಕುದುರೆಯ ದಳಮಂ ತಳ್ತು ಇರಿಯಲ್ ಇಂತಿವನ್ ಎನಗಲ್ಲದೆ ಸಾಧ್ಯವಲ್ಲ ಎಂದು ಬಿಜ್ಜಳಂ– ಕರಿಘಟೆಯಂನೂಕಲ್ ಆ ಕರಿಘಟೆಯಲುತಾಗಿಯಾನೆಯಂ ಮರಳ್ಚಿ ತನ್ನ ಬೀರಮಂ ಮೆರೆದು ಸುರಲೋಕ ಪ್ರಾಪ್ತನಾದಂ'[೬೮] ಎಂದು ಹೇಳುತ್ತದೆ. ಅಂದರೆ ಕೇತನಾಯಕನೆಂಬುವವನು ಬಿಜ್ಜಳನ ಸೈನ್ಯವನ್ನು ಒತ್ತಿ ಬಂದು ಕುದುರೆಯ ದಳವನ್ನು ಕೊಲ್ಲಲು ಮುಂದಾದನು. ಇದನ್ನು ಗಮನಿಸಿದ ಬಿಜ್ಜಳನು ಇವನನ್ನು ಎದುರಿಸಲು ತನ್ನಿಂದ ಹೊರತು ಪರರಿಂದ ಅಸಾಧ್ಯವೆಂದು ತಿಳಿದು ತನ್ನ ಆನೆಯೊಂದಿಗೆ ಕೇತನಾಯಕನ ಮೇಲೆ ನುಗ್ಗಿ ಎರಗುತ್ತಾನೆ. ಈ ಹೋರಾಟದಲ್ಲಿ ಕೇತನಾಯಕನು ಮಡಿದು ಬಿಜ್ಜಳನು ಜಯಶಾಲಿಯಾಗುತ್ತಾನೆ.

ಆನೆಯನ್ನು ಯುದ್ಧದಲ್ಲಿ ಬಳಸುವಾಗ ಸೈನಿಕರಿಗೆ ಮಾವುತನ ಸಹಾಯ ಅತ್ಯಗತ್ಯವಾಗಿತ್ತು. ಎದುರಾಳಿಗಳು ಸಾಮಾನ್ಯವಾಗಿ ಮೊದಲಿಗೆ ಆನೆಯನ್ನು ನಡೆಸುವ ಇಲ್ಲವೆ ನಿಯಂತ್ರಿಸುವ ಮಾವುತನನ್ನು ಮೊದಲಿಗೆ ಕೊಂದು ಆನೆಯನ್ನು ದುರ್ಬಲಗೊಳಿಸಿ ಆ ತರುವಾಯ ಆನೆಯ ಮೇಲೆ ಕುಳಿತ ಇತರ ಯೋಧರ ಮೇಲೆ ಆಕ್ರಮಣ ನಡೆಸುತ್ತಿದ್ದರೆಂದು ಹೇಳಲಾಗುತ್ತದೆ. ಇದಕ್ಕೆ ನಿದರ್ಶನವಾಗಿ 'ನೊಳಂಬ ಹಾಗೂ ಗಂಗರ ನಡುವೆ ನಡೆದ ಯುದ್ಧದಲ್ಲಿ ನೊಳಂಬರ ಪರವಾಗಿ ಆನೆಯ ಮಾವುತನಾಗಿ ಕಾರ್ಯವೆಸಗಿದ ಉತ್ತಿಗನಂದಯ್ಯ ಎಂಬುವವನು 'ಉನ್ಮತ್ತ ಮತ್ತೇಭವನ್ನು ಏರಿ' ತನ್ನ ಪರಾಕ್ರಮವನ್ನು ಮೆರೆದು ಮಡಿದನೆಂದು ವೀರಗಲ್ಲೊಂದರ ಮೂಲಕ ತಿಳಿದುಬರುತ್ತದೆ'[೬೯]

ಆನೆಯ ಮೇಲೆ ಕುಳಿತು ಯುದ್ಧ ಮಾಡುವವರೊಂದಿಗೆ ಎದುರಾಳಿಗಳೂ ಸಹ ಆನೆಯ ಮೇಲಿಂದಲೇ ಯುದ್ಧ ಮಾಡುತ್ತಿದ್ದರೆಂಬುದು ನೇರ್ಲಿಗೆಯ ವೀರಗಲ್ಲೊಂದರಿಂದ ತಿಳಿದುಬರುತ್ತದೆ.

ಕ್ರಿ.ಶ. ೧೧೮೪ರ ವೀರಗಲ್ಲು ಶಾಸನವೊಂದು 'ಬಮ್ಮಣ ಎಂಬುವವನು ಆನೆಯ ಮಸ್ತಕವನಿರಿದು ಸತ್ತ ವಿಷಯವನ್ನು ತಿಳಿಸುತ್ತದೆ.[೧೦೦] ಮತ್ತೊಂದು ಶಾಸನದಲ್ಲಿ ವೀರನೊಬ್ಬನು ಆನೆಯನ್ನು ಕೊಂದು ತಾನೂ ಸತ್ತನೆಂಬ ವಿಚಾರವನ್ನು ತಿಳಿಸುತ್ತದೆ.[೧೦೧]

ಹೀಗೆ ಕರ್ನಾಟಕದ ಶಾಸನಗಳು, ವೀರಗಲ್ಲುಗಳ ಮೂಲಕ ಯುದ್ಧದಲ್ಲಿ ಆನೆಯ ಬಳಕೆಯ ಕ್ರಮವನ್ನು ಅರಿಯಬಹುದಾಗಿದೆ.

### ೩.೨.೨. ಪ್ರವಾಸಿಗರ ವರದಿಗಳು

ಯುದ್ಧಕ್ಕೆ ಆನೆಗಳನ್ನು ಬಳಸುತ್ತಿದ್ದರು. ಆನೆಯ ಹೊರತಾಗಿ ರಥಕ್ಕೆ ನಾಲ್ಕು ನಾಲ್ಕು ಕುದುರೆಗಳನ್ನು ಕಟ್ಟಿ ಯುದ್ಧಭೂಮಿಯಲ್ಲಿ ಬಳಸುತ್ತಿದ್ದರು. ಆನೆಗಳನ್ನು ಬಿಟ್ಟರೆ ಕುದುರೆಗಳ ರಥ ಹೆಚ್ಚಿನದು ಎಂದು ಮೆಗಸ್ತನೀಸನು ಅಭಿಪ್ರಾಯಪಟ್ಟಿದ್ದಾನೆ.[೧೦೨]

ಚೀನಾ ದೇಶದ ಪ್ರವಾಸಿ ಮೆಗಸ್ತನೀಸನು ಚಂದ್ರಗುಪ್ತನ ಸೈನ್ಯದಲ್ಲಿ ೬೦೦೦೦೦ ಪದಾತಿ ದಳದ ಆಳುಗಳು, ೩೦೦೦೦ ಅಶ್ವದಳದ ಆಳುಗಳು, ೮-೯ಸಾವಿರದಷ್ಟು ಆನೆಗಳು ಸೈನ್ಯದಲ್ಲಿದ್ದವೆಂದು ತಿಳಿಸುತ್ತಾನೆ. ಇಷ್ಟೇ ಅಲ್ಲದೆ ಇವನು ಆನೆಯ ಮೇಲೆ ಕುಳಿತು ಯುದ್ಧ ಮಾಡುವವರ ಕುರಿತು ವಿವರಿಸುತ್ತಾನೆ. ಆನೆಯ ಮೇಲೆ ಮೂರು ಜನ ಬಿಲ್ಲುಗಾರರು ಹಾಗೂ ಅಂಕುಶವನ್ನು ಹಿಡಿದ ಮಾವುತರು ಆನೆಯ ಮೇಲಿರುತ್ತಿದ್ದರು.[೧೦೩] 'ಇಡೀ ಏಷಿಯಾ ದೇಶವನ್ನು ಗೆದ್ದ ಅಲೆಗ್ಸಾಂಡರನು ಗಂಗರಿದೀ ನಾಡಿನ ಮೇಲೆ ಯುದ್ಧಕ್ಕೆ ಹೋಗದೆ ಹಿಂದಿರುಗಲು ಮುಖ್ಯ ಕಾರಣ ಆ ನಾಡಿನಲ್ಲಿದ್ದ ಗಜಸೈನ್ಯ'[೧೦೪] ಎಂದು ತಿಳಿಸಿದ್ದಾನೆ. ಯುದ್ಧಕ್ಕೆ ಹೋಗುವಾಗ ಯುದ್ಧದ ಆನೆಗಳೂ, ಯೋಧರು ಪಾನೋನ್ಮತ್ತರಾಗಿರುತ್ತಿದ್ದರೆಂದು ಹ್ಯೂಯನ್‌ತ್ಸಾಂಗ್ ತಿಳಿಸುತ್ತಾನೆ. ಈ ರೀತಿಯ ಪಾನೀಯಕ್ಕೆ ವೀರಪಾಣಂ ಎಂದು ಕರೆಯುತ್ತಿದ್ದರೆಂದು ತಿಳಿದುಬರುತ್ತದೆ.

ಭಾರತಕ್ಕೆ ಪ್ರವಾಸ ಬಂದ ಅಥನೇಷಿಯಸ್ ಎಂಬುವವನು ಭಾರತದಲ್ಲಿ ಯುದ್ಧಕ್ಕೆ ಸಿದ್ಧವಾದ ಆನೆಗಳ ಕುರಿತು ಹೀಗೆ ಹೇಳುತ್ತಾನೆ. 'ಆನೆಗಳಿಗೆ ಅಲಂಕರಿಸಿದ ಉಕ್ಕಿನ ತಗಡು(ಕವಚ)ಗಳನ್ನು ಹೊದ್ದಿಸಿ ಅವುಗಳ ಸೊಂಡಿಲು ಹಾಗೂ ಕೋರೆಗಳಿಗೆ ದೊಡ್ಡ ಕೊಲ್ಗತ್ತಿಗಳನ್ನು ಸಿಕ್ಕಿಸಿರುತ್ತಾರೆ.'[೧೦೫] ಪ್ರವಾಸಿ ಪಾಯೇಸನು 'ಆನೆಗಳಿಗೂ ಮಕಮಲ್ಲು ಮುಂತಾದ ಬೆಲೆ ಬಾಳುವ ಬಟ್ಟೆಗಳನ್ನು ಹೊದ್ದಿಸಿ ಗಂಟೆಗಳ ಸರಗಳನ್ನು ಕಟ್ಟಿದ್ದರು'[೧೦೬] ಎಂದು ತಿಳಿಸುತ್ತಾನೆ.

ಹರ್ಷನ ಸೈನ್ಯದಲ್ಲಿ ೫೦೦೦೦ ಪದಾತಿ ದಳದ ಆಳುಗಳು, ೨೦೦೦೦ ಅಶ್ವದಳದ ಆಳುಗಳು, ೫ ಸಾವಿರದಷ್ಟು ಆನೆಗಳು ಇದ್ದುದಾಗಿ ತಿಳಿಸಲಾಗಿದೆ.

ಅಕ್ಷೋಹಿಣಿ ಸೈನ್ಯದಲ್ಲಿ ೨೧೮೭ ಆನೆ, ೨೧೮೭ ರಥ, ೬೫೧೬ ಕುದುರೆ, ೧೦೯೩೫ ಕಾಲಾಳು ಎಂದು ವ್ಯವಹಾರ ಗಣಿತದಲ್ಲಿ ತಿಳಿಸಲಾಗಿದೆ.

ವಿಜಯನಗರ ಸೈನ್ಯದ ಒಂದು ಘಟಕದಲ್ಲಿ ೧ ಆನೆ, ೨೦ ಕುದುರೆ, ೬೦ ಜನ ಬಿಲ್ಲಾಳುಗಳು, ೬೦ ಜನ ಖಡ್ಗಧಾರಿ, ೬೦ ಜನ ಈಟಿಗಾರರಿದ್ದುದಾಗಿ ಹಾಗೂ ಇಂತಹ ೩೫೦೦ ಘಟಕಗಳನ್ನೊಳಗೊಂಡ ಸೈನ್ಯವಿದ್ದುದಾಗಿ ತಿಳಿದುಬರುತ್ತದೆ.[೧೦೭] ರಾಯಚೂರಿನ ಯುದ್ಧದಲ್ಲಿ ವಿಜಯನಗರ ಸೈನ್ಯವು ೫೫೧ ಆನೆ, ೩೨೦೦೦ ಕುದುರೆ, ೭೦೩೦೦೦ ಕಾಲಾಳುಗಳಿದ್ದವೆಂದು ಪೋರ್ಚುಗೀಸ್ ಪ್ರವಾಸಿ ನ್ಯೂನಿಜ್ ತಿಳಿಸಿದ್ದಾನೆ.[೧೦೮]

**೩.೨.೩. ದಿನಚರಿಗಳು**

ದಿನಚರಿ ಎಂದರೆ ಒಬ್ಬ ವ್ಯಕ್ತಿ ತನ್ನ ಜೀವಿತಾದ ಅವಧಿಯಲ್ಲಿ ನಡೆಯುವ ಎಲ್ಲಾ ಘಟನೆಗಳನ್ನು, ದಿನನಿತ್ಯದ ಕಾರ್ಯಚಟುವಟಿಕೆಗಳನ್ನು ದಾಖಲು ಮಾಡುವ ಕ್ರಮವನ್ನು ದಿನಚರಿಯೆಂದು ಕರೆಯುತ್ತೇವೆ. ದಿನಚರಿಗಳು ಪ್ರಾಚೀನ ಕಾಲದಲ್ಲಿ ರಾಜ-ಮಹಾರಾಜರು ತಮ್ಮ ಆಳ್ವಿಕೆ ಸಂದರ್ಭದಲ್ಲಿ ನಡೆಯುವ ರಾಜಕೀಯ ಆಡಳಿತ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಜೀವನದ ಹಾಗೂ ಐತಿಹ್ಯ ಕುರಿತ ವಿಷಯಗಳು ಪುರಾಣಕೃತ ವಿಷಯಗಳ ಮೇಲೆ ದಿನಚರಿಗಳು ಬೆಳಕು ಚೆಲುವುದರ ಜೊತೆಗೆ ಆನೆಗಳ ಕುರಿತು ಅವುಗಳ ಬೆಲೆ, ಆರೈಕೆ, ಪಾಲನೆ-ಪೋಷಣೆ, ಮಾವುತರ ನೇಮಕಾತಿ, ಮಾವುತರ ಕೈಸಂಬಳ, ಗಜವೈದ್ಯರ ನೇಮಕಾತಿ, ಅವುಗಳ ಆಹಾರದ ವೆಚ್ಚ, ವೈದ್ಯೋಪಚಾರದ ಖರ್ಚು-ವೆಚ್ಚಗಳನ್ನು ಇತ್ಯಾದಿ ಸಂಗತಿಗಳನ್ನು ಕೃಷ್ಣದೇವರಾಯನ ದಿನಚರಿಯಂತಹ ಕೃತಿಯಲ್ಲಿ ಮಹತ್ವದ ಸಂಗತಿಗಳು ಉಲ್ಲೇಖಗೊಂಡಿರುವುದನ್ನು ಕಾಣುತ್ತೇವೆ.

"ವ್ಯಕ್ತಿಯೊಬ್ಬ ತಾನು ಬದುಕಿನ ರೀತಿಯನು ತಾನೇ ಬರೆದುಕೊಳ್ಳುವುದು 'ಆತ್ಮಚರಿತ್ರೆ' ಯಾದರೆ ಅದೇ ವ್ಯಕ್ತಿಯ ಬದುಕಿನ ರೀತಿಯನ್ನು ಬೇರೊಬ್ಬರು ಬರೆದರೆ ಅದು 'ಜೀವನಚರಿತ್ರೆ'ಯೆನಿಸುತ್ತದೆ. ಈ ಎರಡೂ ಸಾಹಿತ್ಯ ಪ್ರಕಾರ ರಚನೆಗೆ ಪ್ರಮುಖ ಆಕರ ಸಾಮಾಗ್ರಿ ಎಂದರೆ ದಿನಚರಿ"[೧೦೯]

ಅರ್ಥ: "ದಿನಚರಿ ಎಂದರೆ ಒಂದು ದಿನದ ಕೆಲಸಕಾರ್ಯಗಳ ವಿವರಣೆ ಎಂದು ತಿಳಿಯಬೇಕಾಗಿಲ್ಲ. ಜೀವನದುದ್ದಕ್ಕು ಕೈಗೊಂಡ ಕಾರ್ಯಗಳ ಘಟಿಸಿದ ಘಟನೆಗಳ ಅಂದಂದಿನ ದಾಖಲೆ. ಪ್ರಾಚೀನ ಮೀಮಾಂಸೆ, ಕಾವ್ಯ ಹಾಗೂ ನಿಘಂಟುಗಳಲ್ಲಿ ಈ ಪದ ದಿನಚರ್ಯೆ, ಆಹೋರಾತ್ರಿಕಂ, ದಿನವಹಿ, ರೋಜಾಪುಸ್ತಕ ಮುಂತಾಗಿ ಬಳಕೆಗೊಂಡಿದೆ.

ಇಲ್ಲೆಲ್ಲ ಪ್ರತಿದಿನ, ದಿನಂಪ್ರತಿ ಮಾಡುವ ಕೆಲಸ ಕೈಗೊಳ್ಳುವ ಕಲಾಪಗಳ ದಾಖಲೆ ಎಂಬ ಅರ್ಥ ಬರುತ್ತದೆ."[೧೧೦]

ಕ್ರಿ.ಶ. ೧೬ನೇ ಶತಮಾನದ ಕೃಷ್ಣದೇವರಾಯನ ದಿನಚರಿಯನ್ನು "ದಿನಚರಿಯ ಕೃತ್ಯಗಳ ವಿಸ್ತಾರ" ಎಂದು ಹೇಳಿರುವುದರಿಂದ ಕೆಲಸಗಳನ್ನು ಸವಿಸ್ತಾರವಾಗಿ ಹೇಳುವ ಒಂದು ದಾಖಲೆ ಎಂದಾಗುತ್ತದೆ.

ಆಧುನಿಕ ನಿಘಂಟುಕಾರರಾದ ಡಾ. ಕಿಟೆಲ್ ಅವರು ನಿತ್ಯ ಮಾಡುವ ಎಲ್ಲಾ ಕೆಲಸಗಳನ್ನು ದಾಖಲಿಸುವ ಕಛೇರಿಯ ರೋಜು(ಜರ್ನಲ್) ಪುಸ್ತಕ ಎಂಬರ್ಥದಲ್ಲಿ "The Daily Due Observance of all rites on official Journal" ಎಂದಿದ್ದಾರೆ.[೧೧೧]

ಅದೇ ರೀತಿಯಾಗಿ ಕ್ರಿ.ಶ. ೧೭ನೇ ಶತಮಾನದ ಸಂಚಿಯ ಹೊನ್ನಮ್ಮ, ಹದಿಬದೆಯ ಧರ್ಮದಲ್ಲಿ ಪತಿವ್ರತೆಯರು ನಿತ್ಯ ನಡೆದುಕೊಳ್ಳುವ ಪರಿಯನ್ನು ತಿಳಿಸುವಾಗ "ಲೋಕಶಾಸ್ತ್ರ ವನಲೋಚಿಸಿ ತಿಳಿದಿದರೈಕ ಮತ್ಯಾವನಳವಡಿಸಿ ಏಕಪತ್ನಿಯರೆಸುಗುವ ದಿನಚರ್ಯೆಯ ಜೋಕೆ ತಪ್ಪದೆ ಸಲ್ಲಿಸುವೆನು" ಎನ್ನುತ್ತಾಳೆ(ಹದಿಬದೆಯ ಧರ್ಮ, ಸಂಧಿ ೮, ಪದ್ಯ ೩).

ಕೆಲವು ಸಂದರ್ಭಗಳಲ್ಲಿ "ಅಂದಂದಿನ ವ್ಯಾಪಾರ ಒಂದೊಂದನ್ನು ಅದು ಆದ ಹಾಗೆಲ್ಲ ಬರೆದುಕೊಂಡು ಅದನ್ನು ಯಾವ ಯಾವ ಜಮಾ-ಖರ್ಚು ಬಾಬ್ತಿಗೆ ಸೇರಿಸಬೇಕೆಂಬುದನ್ನು ನಮೂದಿಸುವ ಪುಸ್ತಕಕ್ಕೆ ದಿನಚರಿ ಪುಸ್ತಕ" ಎಂದು ಕರೆದಿದ್ದಾರೆ.

ಮೇಲಿನ ಎಲ್ಲಾ ಉಲ್ಲೇಖಗಳಿಂದ 'ದಿನಚರಿ' ಎಂದರೆ ಪ್ರತಿದಿನವು ಕೈಗೊಂಡ ಕೆಲಸಕಾರ್ಯಗಳು, ಲೆಕ್ಕ-ಪತ್ರಗಳನ್ನು ಕ್ರಮಬದ್ಧವಾಗಿ ನಮೂದಿಸುವ ಒಂದು ಪುಸ್ತಕ, ಡೈರಿ ಎಂದು ಹೇಳಬಹುದಾದರೂ ಕನ್ನಡದಲ್ಲಿ ಕೃಷ್ಣದೇವರಾಯನ ದಿನಚರಿ ಕೆಲವು ಮಠ-ಮಾನ್ಯಗಳಲ್ಲಿಯ ದಿನಚರಿಗಳನ್ನು ಗಮನಿಸಿದಾಗ ಚಾರಿತ್ರಿಕ ಮತ್ತು ಧಾರ್ಮಿಕ ದಾಖಲೆಗಳು ಎಂಬರ್ಥದಲ್ಲಿ ಮಾನ್ಯತೆಯನ್ನು ಪಡೆದುಕೊಳ್ಳುತ್ತದೆ.

'ಕೃಷ್ಣದೇವರಾಯನ ದಿನಚರಿ' ಕೃತಿಯಲ್ಲಿ ಉಲ್ಲೆಖಗೊಂಡಿರುವಂತೆ ಸಿಂಹಾಸನಾಧೀಶ್ವರ ನೆಂದು ಹೇಳಲ್ಪಟ್ಟಿರುವ ಕೃಷ್ಣದೇವರಾಯನು ವಿಜಯನಗರವನ್ನು ಆಳಿದವರಲ್ಲಿ ಅತ್ಯಂತ ಶ್ರೇಷ್ಠನು, ಪ್ರಸಿದ್ಧನು ಆಗಿದ್ದನು. ಇವನ ಸೈನ್ಯಗಳು ಎಲ್ಲೆಲ್ಲೊ ವಿಜಯವನ್ನು ಪಡೆದವು. ರಾಜಧಾನಿ ಬಹಳ ಸಂಪತ್ತಿನಿಂದ ಕೂಡಿತ್ತು. ದೊರೆಯು ಬಹಮನಿ ಆಕ್ರಮಣಕಾರಿ ಸೈನ್ಯೆಗಳನ್ನು ಹಿಮ್ಮೆಟ್ಟಿಸಿ ಕೋವಿಲ ಕೋಟೆಯನ್ನು ವಶಪಡಿಸಿಕೊಂಡು ರಾಜಧಾನಿಗೆ ಹಿಂತಿರುಗಿದನು. ಮತ್ತು ತನ್ನ ಸೈನ್ಯವನ್ನು ಪುನರ್‌ವ್ಯವಸ್ಥೆಗೊಳಿಸಿದನು. ಅಬ್ದುಲ್‌ರಜಾಕ್

ಪ್ರವಾಸಿ ಹೇಳಿರುವಂತೆ ಇವನ ಸೈನ್ಯದಲ್ಲಿ ಎರಡು ಸಾವಿರ ಮುಸ್ಲಿಮರು, ಆರವತ್ತು ಸಾವಿರ ಹಿಂದು ಬಿಲ್ಲುಗಾರರು, ಎಂಬತ್ತು ಸಾವಿರ ಕುದುರೆ ಸೈನಿಕರು, ಎರಡು ಲಕ್ಷ ಕಾಲಾಳುಗಳು ಇದ್ದರು. ಒಂದು ಕುದುರೆಗೆ ೧೦೦ ಘಟಿಗ, ಮತ್ತು ಒಂದು ಆನೆಗೆ ೧೦೦೦ ವರಾಹ ಬೆಲೆಯಿದ್ದಿತು. ದೊರೆಯು ೧೨ ಸಾವಿರ ಆನೆಗಳನ್ನು ಕೊಂಡುಕೊಂಡನೆಂದು ತಿಳಿದುಬರುತ್ತದೆ. ಇದನ್ನು ಗಮನಿಸಿದಾಗ ದಿನಚರಿಗಳು ರಾಜರ ಸೈನಿಕ ವ್ಯವಸ್ಥೆಯಲ್ಲಿ ಗಜಗಳ ಪಾತ್ರ ಹಾಗೂ ಅವುಗಳ ಮಹತ್ವವನ್ನು ದಿನಚರಿಗಳು ಬೆಳಕು ಚೆಲ್ಲುತ್ತವೆ. (ಕೃಷ್ಣದೇವರಾಯನ ದಿನಚರಿ, ಸಂಪಾದಕರ ಮಾತು).

ಆರಮನೆ ಬೊಕ್ಕಸ ಭಂಡಾರದಲ್ಲಿ ಯಿರುವ ರೊಕ್ಕ ರುಜಿನಕ್ಕೂ । ಸೀಮೆಮಣಿ ತೂಗಾರರ ಮೇಲೆ ಸಂದನಿಂದದಕ್ಕೂ । ಆರಮನೆ ಕೈಸಂಬಳದ ಆನೆ ಕುದುರೆ ಮಂದಿರಗಳಿಗೆ ವಿವರವಾಗಿ ಲೆಕ್ಕವ ಬರೆದು... ವಿದ್ಯಾರಣ್ಯರು ಪಟ್ಟಣದ ಕಟ್ಟುವಾಗ ಸಿಂಹಾಸನಸ್ತರಿಗೆ ನಿಕ್ಷೇಪವಾಗಿ । ತೊಂಬತ್ತಾರುಕೋಟಿ ದ್ರವ್ಯ ನಿಕ್ಷೇಪಿಸಿದಲ್ಲದೆ । ಭೂಷಣಗಳಿಂದ ನಾಲ್ಕು ಕೋಟಿ । ಯಿದಲ್ಲದೆ । ಯೀವರೆಗೆ । ಸಿಂಹಾಸನಸ್ತರಿಗೆ । ಸಿಂಹಾಸನದ ಪಣವ ನಡೆಸುತ್ತ ಬಂದು । ಕರ್ನಾಟಕ ರಾಜ್ಯ ಯೆಂಬತ್ತು ಲಕ್ಷಕ್ಕೂ ದೇವಾಲಯ । ಬ್ರಹ್ಮಾದಾಯ । ಮಠಪುರ ಮಾನ್ಯ ಹೋಗಲಾಗಿ । ನಿಂತ ರಾಜ್ಯಕ್ಕೆ ಸಂಬಂಳ । ಜಿಠೆ? ರಾವುತ ಕುದುರೆ ೧ಕ್ಕೆ ಘಟ್ಟಿಗ ೧೦೦ರ ಮೇರೆಯಲ್ಲಿ ಕುದುರೆ ಸಾವಿರಕ್ಕೆ ಲಕ್ಷಸ್ಥಿತಿ । ಕುದುರೆ ಯಿಪ್ಪತ್ತನಾಲ್ಕು ಸಾವಿರಕ್ಕೆ ಸ್ಥಿತಿ ಯಿಪ್ಪತ್ತು ನಾಲ್ಕು ಲಕ್ಷವೂ। ಆನೆ ೧ಕ್ಕೆ ಸಾವಿರ ವರಾಹ ಮೇರೆಯಲ್ಲಿ ಆನೆ ಘಟಿ ಸಾವಿರ ಯಿನ್ನೂರಕ್ಕೆ । ಸ್ಥಿತಿ ಹನ್ನೆರಡು ಲಕ್ಷ । ಆಳು ೧ಕ್ಕೆ ಘಟ್ಟಿಗ ೨೦ ವರಹ ಮೇರೆಯಲ್ಲಿ ಆಳು ಸಾವಿರಕ್ಕೆ ೨೪೦೦೦ ಯಿಪ್ಪತ್ತುನಾಲ್ಕು ಸಾವಿರ ಪ್ರಕಾರದಲ್ಲಿ । ಕುಲ್ಲಾಯಿ । ಕಬಾಯಿ । ತಾಳಿಚಾಕಳಿ। ಪೀತಾಂಬರ । ಗಂಧ । ಕಸ್ತೂರಿ । ತಾಂಬೂಲ ಆದಿಯಾಗಿ ಕೊಟ್ಟು । ಕೈಸಂಬಳ। ಆನೆಗಳಿಗೆ ತುಳುವ ಕೈಸಂಬಳ । ಕುದುರೆಗಳಿಗೂ ಕುರಬ ರಾವುತರಿಗೂ ಕಬ್ಬಿಲ ರಾವುತರಿಗೂ । ಕಾತಳಿಗೂ ಸಂಬಂಳವ ಬರಿಸಿ....। ಅವರ ಸಂಬಂಳ ಸಾರಿಗೆಗಳು । ಆನೆ ದವಸ ಧಾನ್ಯ ಹುಲ್ಲು ಸೊಪ್ಪುಗಳಿಗೂ ಎಣ್ಣೆ ತುಪ್ಪ ಕವಳಗಳಿಗೂ ಗಜ ವೈದ್ಯ ಅಶ್ವವೈದ್ಯರಿಗೂ । ಕಡಿಮೆ ಯಿಲ್ಲದೆ ನಡೆಸುವ ಹಾಗೆ... ಕಾಲಾಳು ಅರವತ್ತು ಸಾವಿರಕ್ಕೆ ತಿಂಗಳು ತಿಂಗಳು ತಪ್ಪದೆ ಮಧ್ಯಾಹ್ನದ ಸಂಬಳ ಮೊದಲಾಗಿ..."[೧೨]

ಪ್ರಸ್ತುತ ಆನೆಗಳ ಕುರಿತು ಅವುಗಳ ಬೆಲೆ, ಆರೈಕೆ, ಪಾಲನೆ-ಪೋಷಣೆ, ಮಾವುತರ ನೇಮಕಾತಿ, ಮಾವುತರ ಕೈಸಂಬಳ, ಗಜವೈದ್ಯರ ನೇಮಕಾತಿ, ಅವುಗಳ ಆಹಾರದ ವೆಚ್ಚ,

ವೈದ್ಯೋಪಚಾರದ ಖರ್ಚು–ವೆಚ್ಚಗಳನ್ನು ಇತ್ಯಾದಿ ಸಂಗತಿಗಳನ್ನು ಇಂತಹ ದಿನಚರಿಗಳಲ್ಲಿ ಉಲ್ಲೇಖಗೊಂಡಿರುವುದನ್ನು ಮಹತ್ವದ ಕೃತಿಗಳ ಮೂಲಕ ಕಂಡುಬರುತ್ತವೆ.

## ೩.೩. ಪುರಾತತ್ವ ಆಕರಗಳು

### ೩.೩.೧. ನಾಣ್ಯಗಳು

ಶಾಸನಗಳಂತೆ ನಾಣ್ಯಗಳಲ್ಲಿಯೂ ಆನೆಗಳು ಪ್ರಾಚೀನ ಕಾಲದಿಂದಲೂ ಸ್ಥಾನ ಪಡೆದಿವೆ. ಭಾರತೀಯ ಪರಂಪರೆಯಲ್ಲಿ ಆನೆಗೆ ಮಹತ್ವದ ಸ್ಥಾನವಿದೆ. ಬೌದ್ಧ ಮತದಲ್ಲಿಯೂ ಆನೆಗೆ ಪ್ರಮುಖ ಸ್ಥಾನವಿತ್ತು. ಬೋಧಿಸತ್ವನು ಮನುಷ್ಯನಾಗುವುದಕ್ಕೆ ಪೂರ್ವದಲ್ಲಿ ಆನೆ ಜನ್ಮವನ್ನು ತಾಳಿದ್ದನು, ಆನೆಯ ಹೊಟ್ಟೆಯಲ್ಲಿ ಹುಟ್ಟಿದ್ದನು ಇತ್ಯಾದಿ ಹಲವು ಕಥೆಗಳು ಬೌದ್ಧರ ಜಾತಕ ಕಥೆಗಳಲ್ಲಿ ವಿವರಿಸಲಾಗಿದೆ. ಇಂದ್ರನ ವಾಹನವಾಗಿ ಐರಾವತ ಇದ್ದಿತೆಂದು ಪುರಾಣ ಗ್ರಂಥಗಳು ತಿಳಿಸುತ್ತವೆ.

'ನಾಣ್ಯಗಳ ಮೇಲೆ ಮೊಟ್ಟಮೊದಲಿಗೆ ಆನೆ ಕಾಣಿಸಿಕೊಳ್ಳುವುದು ಪಂಚ್ ಮಾರ್ಕಿನ ನಾಣ್ಯಗಳಲ್ಲಿ'.[೧೧೩] ಈ ನಾಣ್ಯಗಳ ಮೇಲೆ ವೈವಿಧ್ಯಮಯವಾದ ಆನೆಯ ಚಿಹ್ನೆಯ ಚಿತ್ರಗಳಿರುವುದನ್ನು ಗಮನಿಸಬಹುದು. ಕುಮಾರಗುಪ್ತನ ಕಾಲದ ಒಂದು ನಾಣ್ಯದಲ್ಲಿ ದೊರೆಯು ಆನೆಯನ್ನು ಏರಿ ಸವಾರಿ ಮಾಡುತ್ತಿರುವುದನ್ನು ಕಾಣಬಹುದು. ರಾಜನಾದವನು ಆನೆಯು ಬೇಗ ನಡೆಯುವಂತೆ ಮಾಡಲು ಕುಮ್ಮಕ್ಕು ಕೊಡುತ್ತಿದ್ದಾನೆ. ಸೊಂಡಿಲು, ಮುಂಗಾಲು, ಬಾಲವನ್ನು ಎತ್ತಿ ಉದ್ವೇಗದಿಂದ ಆನೆ ಓಡುತ್ತಿದೆಯೇನೋ ಎಂಬಂತೆ ಚಿತ್ರಿತಗೊಂಡಿದೆ. ಆನೆಯ ಮೇಲೆ ಮನುಷ್ಯಾಕಾರದ ವ್ಯಕ್ತಿಯೊಬ್ಬ ಕುಳಿತಿದ್ದು ರಾಜನೆಂದು ಭಾವಿಸಬಹುದಾಗಿದೆ. 'ಆನೆಯ ಚಿತ್ರದ ಸುತ್ತಲೂ ಕ್ಷತರಿಪು ಕುಮಾರ ಗುಪ್ತೋ ರಾಜತ್ರಾತ ರಿಪೂನ್' ಎಂಬ ಬರಹವಿದೆ. ಅನಂತರ ನಾಣ್ಯಗಳ ಮೇಲೆ ಆನೆಯನ್ನು ಅಳವಡಿಸಿದವರು ಶಾತವಾಹನರು. ದಕ್ಷಿಣ ಭಾಗದಲ್ಲಿ ನಾಣ್ಯಗಳ ಪದ್ಧತಿಯನ್ನು ಅಳವಡಿಸಿದವರಲ್ಲಿ ಮೊದಲಿಗರೆಂದು ಶಾತವಾಹನರೇದರೆ ಹೇಳಬಹುದು. ಶಾತವಾಹನರ ದೊರೆಗಳಲ್ಲಿ ಒಬ್ಬನಾದ **ವಾಸಿಷ್ಠೀ ಪುತ್ರ ಪುಳವಾವಿಯು** ಚಾಲನೆಗೆ ತಂದ ನಾಣ್ಯವೊಂದರ ಮೇಲೆ ಚಿತ್ರಿಸಿರುವ ಆನೆಯು ತುಂಬಾ ಕಲಾತ್ಮಕವಾಗಿದೆ. 'ಇಪ್ಪತ್ತು ಗ್ರೇನ್ ತೂಕವಿರುವ ಚಿನ್ನದ ನಾಣ್ಯವೊಂದರಲ್ಲಿ ಸೊಂಡಿಲನ್ನು ಮೇಲೆತ್ತಿ ನಿಂತಿರುವ ಆನೆಯನ್ನು ಚಿತ್ರಿಸಲಾಗಿದೆ. ಆನೆ ಚಿತ್ರದ ಸುತ್ತಲೂ ವಾಸಿರಿಪುತ ಪುಳುಮಾವಿ ಎನ್ನುವ ಬ್ರಾಹ್ಮಿ ಬರಹವಿದೆ.'[೧೧೪] ವಾಸಿಷ್ಠೀಪುತ್ರ ಪುಳಮಾವಿಯಲ್ಲದೆ ಶಿವಶ್ರೀ ಪುಳಮಾವಿ, ಯಜ್ಞಶ್ರೀ ಶಾತಕರ್ಣಿ ಮುಂತಾದ ಶಾತವಾಹನರ ರಾಜರ ನಾಣ್ಯಗಳಲ್ಲಿಯೂ ಆನೆಯ ಚಿಹ್ನೆಯನ್ನು ಹೊಂದಿದ ನಾಣ್ಯಗಳನ್ನು ಕಾಣಬಹುದು.

ತಲಕಾಡಿನ ಗಂಗರ ರಾಜಲಾಂಛನ ಆನೆಯಾಗಿತ್ತು. ಗಂಭೀರವಾಗಿ ಸೊಂಡಿಲನ್ನು ಕೆಳಗೆ ಇಳಿಬಿಟ್ಟು ನಿಂತಿರುವ ಆನೆಯ ಚಿತ್ರ ಗಂಗರ ನೂರಾರು ತಾಮ್ರಪಟಗಳಲ್ಲಿ ಕಂಡುಬರುತ್ತವೆ. 'ಕುವಲವಾಡ(ಕೋಲಾರ)ದಲ್ಲಿ ಆಳ್ವಿಕೆಯನ್ನು ಆರಂಭಿಸಿ ತದನಂತರ ತಲಕಾಡನ್ನು ರಾಜಧಾನಿಯಾಗಿಸಿಕೊಂಡ ಕ್ರಿ.ಶ. ನಾಲ್ಕನೇ ಶತಮಾನದಿಂದಲೇ ಕನ್ನಡ ನಾಡನ್ನು ಆಳಲು ಪ್ರಾರಂಭಿಸಿದ ಗಂಗರ ಅರಸರಲ್ಲಿ ಒಬ್ಬನಾದ 'ಶ್ರೀಪುರಷನು ಚಾಲ್ತಿಗೆ ತಂದ ೬೦ ಗ್ರೇನ್ ತೂಕದ ತಾಮ್ರದ ನಾಣ್ಯದ ಮುಮ್ಮುಖದಲ್ಲಿ ನಿಂತಿರುವ ಅಲಂಕೃತ ಆನೆ ಹಾಗೂ ಅದರ ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಚಿತ್ರಗಳಿವೆ. ಹಿಂಭಾಗದಲ್ಲಿ ಶ್ರೀ ಪುರುಷ ಎಂಬ ಕನ್ನಡ ಬರಹವಿದೆ.'[೧೧೫] ಅದೇ ರೀತಿ ಶಾತವಾಹನರ ಮತ್ತೊಬ್ಬ ದೊರೆ 'ಇಮ್ಮಡಿ ಬೂತುಗನ ೫೪ ಗ್ರೇನ್ ತೂಕದ ಚಿನ್ನದ ನಾಣ್ಯದಲ್ಲಿ ಮುಮ್ಮುಖದಲ್ಲಿ ಅಲಂಕೃತ ಹೊದಿಕೆ ಇರುವ ಆನೆ, ಸೂರ್ಯ ಚಂದ್ರರಿದ್ದಾರೆ. ಹಿಮ್ಮುಖದಲ್ಲಿ ನನ್ನಿಯ ಗಂಗ ಎಂಬ ಎರಡು ಸಾಲುಗಳ ಕನ್ನಡ ಬರಹವಿದೆ.'[೧೧೬] ಮತ್ತೊಂದು ೧.೫ ಗ್ರೇನ್ ತೂಕದ ತಾಮ್ರದ ನಾಣ್ಯದ ಮುಮ್ಮುಖದಲ್ಲಿ ಅಲಂಕೃತ ಆನೆ, ಸೂರ್ಯ ಚಂದ್ರ, ಗದೆಯ ಚಿತ್ರಗಳಿವೆ. ಹಿಮ್ಮುಖದಲ್ಲಿ ಸುಂದರವಾದ ಪುಷ್ಪ ವಿನ್ಯಾಸವಿದೆ. ಗಂಗರ ಕಾಲದ ಬಹುತೇಕ ನಾಣ್ಯಗಳಲ್ಲಿ ಆನೆಯ ಚಿಹ್ನೆ ಕಂಡುಬರುತ್ತವೆ. ಪ್ರಾಯಶಃ ಆನೆಯ ಚಿಹ್ನೆಯನ್ನು ಒಳಗೊಂಡಿದ್ದರಿಂದಾಗಿಯೇ ಇವುಗಳನ್ನು ಜನಸಾಮಾನ್ಯರು ಆನೆ ಕಾಸು ಎಂದು ಕರೆಯುತ್ತಾರೆ.

ಕುಲಚುರಿ ರಾಜವಂಶದವರಲ್ಲಿ ಒಂದು ಶಾಖೆಯು ರತ್ನಪುರದಿಂದ ರಾಜ್ಯಭಾರ ಮಾಡಿದರೆಂಬುದಾಗಿ ತಿಳಿದುಬರುತ್ತದೆ. ಈ ರಾಜರು ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳನ್ನು ಟಂಕಿಸಿದರು. ಇವರ ನಾಣ್ಯಗಳಲ್ಲಿ ಗಜ ಶಾರ್ದೂಲ, ಹನುಮಾನ್, ಸಿಂಹದ ಮಾದರಿಯನ್ನೊಳಗೊಂಡ ನಾಣ್ಯಗಳು ಕಂಡುಬರುತ್ತವೆ. ಈ ವಂಶಕ್ಕೆ ಸೇರಿದ ಜಾಜಮಲ್ಲ ದೇವ ಎಂಬ ಅರಸನ ನಾಣ್ಯವೊಂದರ ಮುಮ್ಮುಖದಲ್ಲಿ ಸಿಂಹ ಹಾಗೂ ಆನೆ ಸೆಣಸಾಡುತ್ತಿರುವ ಚಿತ್ರವಿದೆ. ಹಿಂಬದಿಯಲ್ಲಿ ಶ್ರೀಮಜ್ಜಾ/ಜಲ್ಲದೇವ ಎಂಬ ನಾಗರೀ ಲಿಪಿ ಇದೆ.[೧೧೭]

ಅದೇ ರೀತಿಯಾಗಿ ಕಲ್ಯಾಣದ ಚಾಲುಕ್ಯರು ಕ್ರಿ.ಶ. ಹತ್ತರಿಂದ ಹನ್ನೆರಡನೇ ಶತಮಾನದವರೆಗೆ ಕನ್ನಡ ನಾಡಿನಲ್ಲಿ ರಾಜ್ಯಭಾರ ಮಾಡಿದರು. ಇವರ ಶಾಸನಗಳಲ್ಲಿ ಇವರು ಚಾಲ್ತಿಗೆ ತಂದ ನಾಣ್ಯ ಪದ್ಧತಿಯ ಕುರಿತ ಉಲ್ಲೇಖಗಳು ದೊರೆಯುತ್ತವೆ. ಇವರ ಕಾಲದ ನಾಣ್ಯಗಳು ಚಿನ್ನ, ಬೆಳ್ಳಿ, ತಾಮ್ರ ಲೋಹದವಾಗಿದ್ದವು. ಆದರೆ ಇವರ ನಾಣ್ಯಗಳಲ್ಲಿ ಆನೆಯ ಚಿತ್ರದ ಪಂಚ್ ಇರುವುದನ್ನು ಕಾಣಬಹುದು.

ಅದೇ ರೀತಿ ವಿಜಯನಗರ ರಾಜ್ಯದ ಕೆಲವು ಅರಸರ ನಾಣ್ಯಗಳಲ್ಲಿಯೂ ಆನೆ ಕಂಡುಬರುತ್ತದೆ. ಇಮ್ಮಡಿ ದೇವರಾಯನಿಗೆ ಆನೆಯ ಮೇಲೆ ವಿಶೇಷವಾದ ಮಮಕಾರ. ಇವನ ಕಾಲದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ಅಬ್ದುಲ್ ರಜಾಕನು ಇಮ್ಮಡಿ ದೇವರಾಯನಲ್ಲಿ ಎತ್ತರವಾದ ಹಾಗೂ ಬಲಿಷ್ಠವಾದ ನೂರಾರು ಆನೆಗಳಿದ್ದವು. ಅವುಗಳನ್ನು ಸೈನ್ಯದ ಒಂದು ಭಾಗವಾಗಿ ಬಳಸಲಾಗುತ್ತಿತ್ತು. ಆನೆಯ ಬೇಟೆಯಲ್ಲಿಯೂ ಈ ಅರಸ ನಿಷ್ಣಾತನಾಗಿದ್ದನು ಎಂದು ದಾಖಲಿಸಿದ್ದಾನೆ. ಹೀಗಾಗಿಯೇ ಇಮ್ಮಡಿ ದೇವರಾಯನಿಗೆ ಗಜಬೇಂಟೆಗಾರ ಎಂಬ ಬಿರುದು ದೊರಕಿರಬೇಕು. ಇವನ ಕಾಲದಲ್ಲಿ ಟಂಕಿಸಲಾದ ‘ವರಹ, ಕಾಲು ವರಹ, ಪರ್ತಬ್ ಎಂಬ ನಾಣ್ಯಗಳಲ್ಲಿ ಮುಮ್ಮುಖದ ಭಾಗದಲ್ಲಿ ಎಡಕ್ಕೆ ಚಲಿಸುತ್ತಿರುವ ಆನೆಯ ಚಿತ್ರ ಇದೆ. ಹಾಗೆಯೇ ಬೆಳ್ಳಿಯ ತಾರಾ ನಾಣ್ಯದಲ್ಲಿಯೂ ಆನೆಯ ಚಿತ್ರ ಇದೆ. ಕೆಲವು ನಾಣ್ಯಗಳಲ್ಲಿ ಅಲಂಕೃತ ಆನೆಯ ಚಿತ್ರ, ಬಾಲವನ್ನು ಮೇಲೆತ್ತಿಕೊಂಡಿರುವ ಆನೆಯ ಚಿತ್ರಗಳನ್ನು ಕಾಣಬಹುದು. ಇಮ್ಮಡಿ ವಿಜಯರಾಯ, ಮಲ್ಲಿಕಾರ್ಜುನ, ಅಚ್ಯುತ ದೇವರಾಯನು ಟಂಕಿಸಿದ ನಾಣ್ಯಗಳಲ್ಲಿಯೂ ಆನೆ ಚಿತ್ರಗಳಿವೆ. ಕ್ರಿ.ಶ. ೧೫೨೯-೪೨ರ ಮಧ್ಯಭಾಗದಲ್ಲಿ ರಾಜ್ಯಬಾರ ಮಾಡಿದ ಅಚ್ಯುತ ದೇವರಾಯನು ಟಂಕಿಸಿದ ನಾಣ್ಯವು ಚಿನ್ನದ್ದಾಗಿದ್ದು ೫೨ ಗ್ರೇನ್ ತೂಕವನ್ನು ಹೊಂದಿದೆ. ನಾಣ್ಯದ ಮುಂಭಾಗದಲ್ಲಿ ಎರಡು ಕೊಕ್ಕುಗಳಲ್ಲಿ ಎರಡು ಆನೆಗಳನ್ನು ಮೇಲಕ್ಕೆತ್ತಿಕೊಂಡು ಹಾರುತ್ತಿರುವ ಗಂಡಬೇರುಂಡದ ಚಿತ್ರವಿದೆ. ಹಿಂಭಾಗದಲ್ಲಿ ಶ್ರೀ ಪ್ರತಾಪಚ್ಯುತರಾಯ ಎಂದು ದೇವನಾಗರೀ ಬರಹವಿದೆ.[೧೧೮]

ಹೈದರಾಲಿ ಹಾಗೂ ಟಿಪ್ಪುಸುಲ್ತಾನರು ಚಲಾವಣೆಗೆ ತಂದ ನಾಣ್ಯಗಳಲ್ಲಿ ಆನೆಗೆ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ವಿವಿಧ ವಿನ್ಯಾಸದ ಆನೆಯ ಚಿತ್ರವನ್ನೊಳಗೊಂಡ ನಾಣ್ಯಗಳಿಗೆ ಈ ಅರಸರು ಮಹತ್ವವನ್ನು ನೀಡಿದ್ದಾರೆ. ‘೧೮೦ ಗ್ರೇನ್ ತೂಕದ ಹೈದರ ಆಲಿಯ ತಾಮ್ರದ ನಾಣ್ಯವೊಂದರಲ್ಲಿ ಮುಮ್ಮುಖದಲ್ಲಿ ಬಾಲವನ್ನು ಮೇಲೆತ್ತಿಕೊಂಡು ಬಲಭಾಗಕ್ಕೆ ತಿರುಗಿರುವ ಆನೆಯ ಚಿತ್ರವಿದೆ. ಹಿಮ್ಮುಖದಲ್ಲಿ ಜರ್ಬ್ ಇ ಬಲ್ಲಾರಿ ಎಂಬ ಬರಹವಿದೆ. ಈ ನಾಣ್ಯವನ್ನು ಬಳ್ಳಾರಿಯಲ್ಲಿ ಟಂಕಿಸಲಾಗುತ್ತಿತ್ತು ಎಂದು ಹೇಳಲಾಗುತ್ತದೆ.[೧೧೯] ರಾಜ್ಯದ ವಿವಿಧ ಭಾಗಗಳಲ್ಲಿ ನಾಣ್ಯಗಳನ್ನು ಮುದ್ರಿಸುವ ಟಂಕಶಾಲೆಗಳನ್ನು ಸ್ಥಾಪಿಸಿದ ಹೆಗ್ಗಳಿಕೆ ಟಿಪ್ಪು ಸುಲ್ತಾನನಿಗೆ ಸಲ್ಲುತ್ತದೆ. ‘ಶ್ರೀರಂಗ ಪಟ್ಟಣ, ಬಿದನೂರು-ನಜರಾಬಾದ್, ಬೆಂಗಳೂರು, ಚಿತ್ರದುರ್ಗ, ಧಾರವಾಡ, ಗುತ್ತಿ, ಗುರ್‍ರಂಕೊಂಡ, ದಿಂಡಿಗಲ್, ಸತ್ಯಮಂಗಲ, ಕಲ್ಲಿಕೋಟೆ, ಫಿರೂಕ್, ಹೊಳೆಹೊನ್ನೂರು, ಸಕ್ಕರಾಯ ಪಟ್ಟಣ(ಸಕ್ಕರೆ ಪಟ್ಟಣ), ಅಲ್ಲೂಬರು, ಗಂಡಿಕೋಟೆ, ಬೇಕಲ್, ಕದ್ರಿ ಮುಂತಾದ ಊರುಗಳಲ್ಲಿ ಟಂಕಶಾಲೆ ಸ್ಥಾಪಿಸಲ್ಪಟ್ಟಿತ್ತು.

ಅಹ್ಮದಿ, ಸದೀಕಿ, ಫಾರೂಕಿ, ಪಣಂ ಹೆಸರಿನ ಚಿನ್ನದ ನಾಣ್ಯ ಗಳನ್ನೂ, ಹೈದರೀ, ಇಮಾಮಿ, ಆಬಿದೀ, ಜಫರಿ, ಬಾಕರಿ, ಕಾಜಮೀ ಖಿಜ್ರಿ ಹೆಸರಿನ ಏಳು ವಿಧದ ಬೆಳ್ಳಿಯ ನಾಣ್ಯಗಳನ್ನೂ, ಐದು ನಮೂನೆಯ ಓಥ್ಮಾನಿ, ಮುಷ್ತರಿ, ಜೋಹ್ರಾ, ಬಹ್ರಾಂ, ಆಖ್ತಾರ್, ಕುತ್ಬ್ ಹೆಸರಿನ ತಾಮ್ರದ ನಾಣ್ಯಗಳನ್ನು ಮುದ್ರಿಸಿದ್ದಾಗಿ ತಿಳಿದುಬರುತ್ತದೆ.'[೨೨] ಟಿಪ್ಪುಸುಲ್ತಾನನ ೨೫೦ ಗ್ರೇನ್ ತೂಕದ ತಾಮ್ರದ ನಾಣ್ಯವೊಂದರ ಮುಂಭಾಗದಲ್ಲಿ ಬಾಲವನ್ನು ಮೇಲೆತ್ತಿಕೊಂಡ ಆನೆ, ಅದರ ಮೇಲ್ಭಾಗದಲ್ಲಿ ಚೌಕಾಕಾರದ ಧ್ವಜ, ಆನೆಯ ಬಾಲದ ಸಮೀಪದಲ್ಲಿ ೧೨೨೧ ಎಂಬ ತೇದಿ ಇದೆ. ಹಿಮ್ಮುಖದಲ್ಲಿ ಓಥ್ಮಾನೀ/ಜರ್ಬ್ ಇದರುಸ್/ ಸುಲ್ತನತ್ ಇ ಪಟನ್ ಎಂದು ಪಾರ್ಷಿಯನ್ ಭಾಷೆಯಲ್ಲಿದೆ. ಅದೇ ರೀತಿ ೪೨ ಗ್ರೇನ್ ತೂಕದ ತಾಮ್ರದ ನಾಣ್ಯದ ಮುಂಭಾಗದಲ್ಲಿ ಬಲಕ್ಕೆ ಚಲಿಸುತ್ತಿರುವ ಆನೆ ಹಾಗೂ ಹಿಂಭಾಗದಲ್ಲಿ ಜರ್ಬ್ ಇ ಪಟನ್ ಮತ್ತು ೧೧೯೮ ಎಂಬ ತೇದಿ ಇದೆ. ಮತ್ತೊಂದು ೧೨ ಗ್ರೇನ್ ತೂಕದ ತಾಮ್ರದ ನಾಣ್ಯದಲ್ಲಿ ಆನೆ ಹಾಗೂ ೧೨೧೬ ಎಂಬ ತೇದಿ ಇದೆ. ಹಿಂಬದಿಯಲ್ಲಿ ಜರ್ಬ್ ಇ ಪಟನ್ ಕುತ್ಬ್ ಎಂಬ ಪರ್ಷಿಯನ್ ಬರಹವಿದೆ.

ಕರ್ನಾಟಕದ ಇತಿಹಾಸದಲ್ಲಿ ಮೈಸೂರು ಒಡೆಯರಿಗೆ ಒಂದು ಮಹತ್ವದ ಸ್ಥಾನವಿದೆ. ಭಾರತ ಸ್ವಾತಂತ್ರ್ಯಗೊಳ್ಳುವವರೆಗೂ ಆಳ್ವಿಕೆ ನಡೆಸಿದ ಕನ್ನಡದ ಅರಸರಲ್ಲಿ ಮೈಸೂರು ಒಡೆಯರ ಮನೆತನವೂ ಒಂದು. ಒಡೆಯರ್ ಮನೆತನದಲ್ಲಿ ಮೊಟ್ಟ ಮೊದಲನೆಯ ಟಂಕಶಾಲೆಯನ್ನು ಸ್ಥಾಪಿಸಿದವರು ಕಂಠೀರವ ನರಸರಾಜ ಒಡೆಯರ್ ಅವರು. ಇವರು ಶ್ರೀರಂಗ ಪಟ್ಟಣದಲ್ಲಿ ಟಂಕಶಾಲೆಯನ್ನು ಪ್ರಾರಂಭಿಸಿದರು. ಇವರು ಟಂಕಿಸಿದ ನಾಣ್ಯಗಳಿಗೆ ಕಂಠಿರಾಯ ನಾಣ್ಯಗಳೆಂದು ಕರೆಯುತ್ತಿದ್ದುದು ತಿಳಿದುಬರುತ್ತದೆ. ಇವರ ನಂತರ ಆಳ್ವಿಕೆಯನ್ನು ಮಾಡಿದ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿಶೇಷ ಖ್ಯಾತಿಯನ್ನು ಗಳಿಸಿದ ದೊರೆ. ಇವರು ಬೆಳ್ಳಿ, ತಾಮ್ರದ ನಾಣ್ಯಗಳನ್ನು ಚಾಲನೆಗೆ ತಂದರು. ಇವರ ತಾಮ್ರದ ನಾಣ್ಯವೊಂದರ ಮುಂಭಾಗದಲ್ಲಿ ಅಲಂಕೃತ ಆನೆ, ಅದರ ಮೇಲೆ ಶ್ರೀ ಎಂಬ ಕನ್ನಡ ಅಕ್ಷರ, ಅಕ್ಕಪಕ್ಕದಲ್ಲಿ ಸೂರ್ಯ ಚಂದ್ರರ ಚಿತ್ರಗಳಿವೆ. ಹಿಂಭಾಗದಲ್ಲಿ ಚುಕ್ಕಿಯ ವೃತ್ತದೊಳಗೆ ಮಯಿಲಿ ಕಾಸು ನಲ್ವತ್ತು ಎಂಬ ಮೂರು ಸಾಲಿನ ಬರಹವಿದೆ. ಕನ್ನಡದಿಂದ ಪ್ರಾರಂಭವಾಗುವ ಬರಹದ ಕೊನೆಯಲ್ಲಿ Xl CASH ರೋಮನ್ ಲಿಪಿ ಇದೆ. ಮತ್ತೊಂದು ನಾಣ್ಯದಲ್ಲಿ ಮುಂಭಾಗದಲ್ಲಿ ಆನೆ ಸೊಂಡಿಲನ್ನು ಮೇಲೆತ್ತಿಕೊಂಡಿದೆ. ಆನೆಗೆ ಯಾವ ಅಲಂಕಾರವೂ ಇಲ್ಲ. ಮೇಲೆ ಚಾಮುಂಡಿ ಎಂಬ ಬರಹವಿದೆ. ಹಿಂಭಾಗದಲ್ಲಿ ಕೃಷ್ಣ/ ಮಯಿಲಿಕ/ ಸುಯಿಪ್ಪತ್ತು/ XXCASH ಎಂಬ ಬರಹವಿದೆ.[೨೩]

ಒಟ್ಟಾರೆಯಾಗಿ ಗುಪ್ತರ ಕಾಲದಿಂದ ಮೈಸೂರು ಅರಸರ ಕಾಲದವರೆಗೆ ಚಾಲ್ತಿಯಲ್ಲಿದ್ದ ಹಲವು ನಾಣ್ಯಗಳಲ್ಲಿ ಆನೆಯು ಮಹತ್ವದ ಸ್ಥಾನವನ್ನು ಹೊಂದಿದ್ದಿತು ಎಂಬುದು ತಿಳಿದುಬರುತ್ತದೆ.

**ಕೊನೆಯ ಟಿಪ್ಪಣಿ**


೧. ಹಳ್ಳಿಕೇರಿ ಎಫ್.ಟಿ.(ಸಂ), ಹಸ್ತಪ್ರತಿ ವ್ಯಾಸಂಗ ಸಂಪುಟ–೮, ಡಾ. ಕೆ. ರವೀಂದ್ರನಾಥ (ಲೇ) ಗಜಶಾಸ್ತ್ರ, ೨೦೦೮, ಪು. ೧೦೮.

೨. ಅರವಿಂದ ಮಾಲಗತ್ತಿ, ಕನ್ನಡ ವಿಷಯ ವಿಶ್ವಕೋಶ, ಸಂಪುಟ–೧, ೨೦೦೫, ಪು. ೧೦೭೨.

೩. ರಾಮಚಂದ್ರಗೌಡ ಹಿ.ಶಿ., ಕನ್ನಡ ವಿಷಯ ವಿಶ್ವಕೋಶ, ಸಂಪುಟ–೨, ೨೦೦೭, ಪು. ೭೧೨.

೪. ಹಳ್ಳಿಕೇರಿ ಎಫ್.ಟಿ.(ಸಂ), ಹಸ್ತಪ್ರತಿ ವ್ಯಾಸಂಗ ಸಂಪುಟ–೮, ಡಾ. ಕೆ. ರವೀಂದ್ರನಾಥ (ಲೇ) ಗಜಶಾಸ್ತ್ರ, ೨೦೦೮, ಪು. ೧೦೮–೧೦೯.

೫. ಅದೇ, ಪು. ೧೦೯.

೬. ಅದೇ, ಪು. ೧೦೯–೧೧೦.

೭. ಅದೇ, ಪು. ೧೧೧.

೮. ರಂಗಸ್ವಾಮಿ ಎ., ಚಾವುಂಡರಾಯನ ಲೋಕೋಪಕಾರ: ಒಂದು ಅಧ್ಯಯನ, ೧೯೯೬, ಪು.೪.

೯. ರಾಮೇಗೌಡ, ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು, ೧೯೯೨, ಪು. ೪೭೮.

೧೦. ಕಲಬುರ್ಗಿ ಎಂ.ಎಂ.(ಸಂ), ಮಾನಸೋಲ್ಲಾಸ, ೧೯೯೮, ಪು. ೧೧.

೧೧. ಅದೇ, ಪು. ೧೫.

೧೨. ರಾಮೇಗೌಡ, ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು, ೧೯೯೨, ಪು. ೪೭೮.

೧೩. ಹಳ್ಳಿಕೇರಿ ಎಫ್.ಟಿ.(ಸಂ), ಹಸ್ತಪ್ರತಿ ವ್ಯಾಸಂಗ ಸಂಪುಟ–೮, ಕೆ. ರವೀಂದ್ರನಾಥ (ಲೇ) ಗಜಶಾಸ್ತ್ರ, ೨೦೦೮, ಪು. ೧೧೧.

೧೪. ಅದೇ, ಪು. ೧೧೨.

೧೫. ಪಂಚಮುಖಿ ಆರ್.ಎಸ್.(ಸಂ), ಮದನತಿಲಕಂ, ೧೯೫೪, ಪು. ೩೧.

೧೬. ಹಳ್ಳಿಕೇರಿ ಎಫ್.ಟಿ.(ಸಂ), ಹಸ್ತಪ್ರತಿ ವ್ಯಾಸಂಗ ಸಂಪುಟ-೮, ಕೆ. ರವೀಂದ್ರನಾಥ (ಲೇ) ಗಜಶಾಸ್ತ್ರ, ೨೦೦೮, ಪು. ೧೧೩.

೧೭. ಶ್ರೀಮತಿ ಎಚ್.ಎಸ್.(ಸಂ), ಸೌಂಗಧಿಕಾ ಪರಿಣಯ, ೨೦೦೪, ಪು. ೩೨೬.

೧೮. ಶ್ರೀಧರ ಎಚ್., ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧ ಕಲೆ, ೨೦೦೨, ಪು. ೪೮.

೧೯. ಬಸಪ್ಪನವರ, ಗಜಗಾಮಿನಿ, ೨೦೦೫, ಪು. ೫೭.

೨೦. ಅದೇ, ಪು. ೫೭.

೨೧. ಅದೇ, ಪು. ೫೭.

೨೨. ಅನಂತರಂಗಚಾರ್(ಸಂ), ಪಂಪಭಾರತ, ೧೯೭೩, ಪು. ೧೪೯.

೨೩. ಅದೇ, ಪು. ೪೭೯.

೨೪. ಅದೇ, ಪು. ೪೦೬.

೨೫. ನರಸಿಂಹಶಾಸ್ತ್ರೀ ಕೆ.ಎಲ್., ಆದಿಪುರಾಣಂ(ಗದ್ಯಾನುವಾದ), ೨೦೧೨, ಪು. ೫೫೬-೫೫೭.

೨೬. ಅದೇ, ಪು. ೫೬೧.

೨೭. ಅದೇ, ಪು. ೫೭೦-೫೭೧.

೨೮. ಅದೇ, ಪು. ೫೭೧-೫೭೨.

೨೯. ಅದೇ, ಪು. ೫೭೩-೫೭೪.

೩೦. ಅದೇ, ಪು. ೫೭೫.

೩೧. ಅದೇ, ಪು. ೫೭೬.

೩೨. ಕುಲಕರ್ಣಿ ಆರ್.ವಿ., ಸಾಹಸಭೀಮ ವಿಜಯಂ(ಗದ್ಯಾನುವಾದ), ೨೦೧೧, ಪು.೪.

೩೩. ಅದೇ, ಪು. ೫.

೩೪. ಅದೇ, ಪು. ೬.

೩೫. ಅದೇ, ಪು. ೧೫೦.

೩೬. ಅದೇ, ಪು. ೧೮೧.

೩೭. ಅದೇ, ಪು. ೭.

೩೮. ಅದೇ, ಪು. ೧೦.

೩೯. ಅದೇ, ಪು. ೧೬.

೪೦. ಅದೇ, ಪು. ೨೪.

೪೧. ಅದೇ, ಪು. ೪೧–೪೨.

೪೨. ಅದೇ, ಪು. ೪೪.

೪೩. ಅದೇ, ಪು. ೪೬.

೪೪. ಅದೇ, ಪು. ೪೭.

೪೫. ಅದೇ, ಪು. ೭೪.

೪೬. ಅದೇ, ಪು. ೭೫–೭೭.

೪೭. ಅದೇ, ಪು. ೮೭.

೪೮. ಕುಲಕರ್ಣಿ ಆರ್.ವಿ., ನೇಮಿಚಂದ್ರ ಸಂಸ್ಕೃತ ನೇಮಿನಾಥ ಪುರಾಣಂ(ಗದ್ಯಾನುವಾದ), ೨೦೧೧, ಪು. ೧, ೧೭.

೪೯. ಕೇಶವಭಟ್ಟ ಟಿ., ಸುಕೌಶಳಸ್ವಾಮಿಯ ಕಥೆ ಶಿವಕೋಟ್ಯಾಚಾರ್ಯನ ವಡ್ಡಾರಾಧನೆ (ಗದ್ಯಾನುವಾದ), ೨೦೧೩, ಪು. ೬೨.

೫೦. ಅದೇ, ಪು. ೬೨.

೫೧. ಅದೇ, ಪು. ೬೨.

೫೨. ಅದೇ, ಪು. ೬೩.

೫೩. ಅದೇ, ಪು. ೨೦೦.

೫೪. ಅದೇ, ಪು. ೨೫೪.

೫೫. ದೇವಿರಪ್ಪ ಎಚ್.(ಸಂ), ರಾಮನಾಥ ಚರಿತೆ, ೨೦೦೪, ಸಂಪುಟ–೨, ಪು. ೬೪.

೫೬. ಅದೇ, ಪು. ೬೯.

೫೭. ಅದೇ, ಪು. ೮೭.

೫೮. ಅದೇ, ಪು. ೧೫೪.

೫೯. ಕುಲಕರ್ಣಿ ಆರ್.ವಿ., ಅಂಡಯ್ಯ ಕವಿಯ ಕಬ್ಬಿಗರ ಕಾವ್ಯ, ೨೦೦೪, ಪು. ೧೯೨.

೬೦. ಅದೇ, ಪು. ೨೦೫.

೬೧. ಶಾಮರಾಯ ತ.ಸು.(ಸಂ), ಕುಮಾರವ್ಯಾಸ ಭಾರತ, ೧೯೯೬, ಪು. ೩೨೨

೬೨. ಅದೇ, ಪು. ೩೦೬.

೬೩. ಅದೇ, ಪು. ೨೬೩.

೬೪. ಅದೇ, ಪು. ೯೦.

೬೫. ಅದೇ, ಪು. ೩೦೮.

೬೬. ಅದೇ, ಪು. ೩೦೪.

೬೭. ಅದೇ, ಪು. ೩೦೭.

೬೮. ಲೆಫ್ಟಿನೆಂಟ್ ಕರ್ನಲ್ ವಿಲಿಯಮ್, ಗಜೇಂದ್ರ ಲೋಕ, ೧೯೫೮, ಮುನ್ನುಡಿಯಿಂದ.

೬೯. ಗೌರಿಸುಂದರ್(ಸಂ), ಮೈಸೂರು ದಸರಾ, ಜಂಬೂಸವಾರಿ (ಲೇಖನ), ೨೦೦೬, ಪು.೧೭೯

೭೦. ಅದೇ, ಪು. ೧೭೯.

೭೧. ಅದೇ, ಪು. ೧೮೦.

೭೨. ಅದೇ, ಪು. ೧೮೦.

೭೩. ರಾಜಶೇಖರ ಜಮದಂಡಿ, ಸರ್ವಜ್ಞ ವಚನಗಳಲ್ಲಿ ಒಂದು ಜಾನಪದೀಯ ಅಧ್ಯಯನ, ೨೦೦೪, ಪು. ೧೦೭೩.

೭೪. ಅದೇ, ಪು. ೨೦೪೪

೭೫. ಶಿವಬಸವಸ್ವಾಮಿ(ಸಂ), ಕಾಲಜ್ಞಾನ ಸಂಗ್ರಹ, ಭಾಗ-೧, ೧೯೪೬, ಪು.೩೮-೩೯.

೭೬. ಹಳ್ಳಿಕೇರಿ ಎಫ್.ಟಿ. (ಸಂ), ಎಮ್ಮೆಬಸವನ ಕಾಲಜ್ಞಾನ, ೨೦೦೮, ಪು. ೩೦-೩೧.

೭೭. ಶಿವಬಸವಸ್ವಾಮಿ (ಸಂ), ಕಾಲಜ್ಞಾನ ಸಂಗ್ರಹ, ಭಾಗ-೧, ೧೯೪೬, ಪು.೩೭-೩೮.

೭೮. ಅದೇ, ಪು. ೫೭.

೭೯. ಹಳ್ಳಿಕೇರಿ ಎಫ್.ಟಿ.(ಸಂ), ಎಮ್ಮೆಬಸವನ ಕಾಲಜ್ಞಾನ, ೨೦೦೮, ಪು. ೫೪.

೮೦. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೬೦

೮೧. ವಕ್ತ್ಯಮಾಹಿತಿ: ಕಮ್ಮಾರ ಕಾಳಮ್ಮ, (೮೯), (ಕಥೆಯನ್ನು ಹೇಳಿದವರು), ಕಲ್ಲಹಳ್ಳಿ ಗ್ರಾಮ, ಹರಪನಹಳ್ಳಿ ತಾ.

೮೨. ಸಣ್ಣರಾಮ(ಸಂ), ಸಾಹಿತ್ಯ ಸಂವೇದನೆ-೨, ಶಾಸನಗಳು ಪೂರ್ವಪಠ್ಯ (ಲೇ), ೨೦೧೧, ಪು. ೩.

೮೩. ಅದೇ, ಪು. ೩.

೮೪. ಎಫಿಗ್ರಾಫಿಯಾ ಕರ್ನಾಟಿಕ, ಸಂಪುಟ-೩, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು. ೧೦೧.

೮೫. ಅದೇ, ಪು. ೧೦೨.

೮೬. ಅದೇ, ಪು. ೧೦೪.

೮೭. ಅದೇ, ಪು. ೧೧೮.

೮೮. ಸೀತಾರಾಮಯ್ಯ ಎಂ.ವಿ., ಶಾಸ್ತ್ರಸಾಹಿತ್ಯ, ೧೯೭೫, ಪು. ೨೦೮.

೮೯. ಎಫಿಗ್ರಾಫಿಯಾ ಕರ್ನಾಟಿಕ, ಸಂಪುಟ-೯, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು. ೭೮.

೯೦. ಎಫಿಗ್ರಾಫಿಯಾ ಕರ್ನಾಟಿಕ, ಸಂಪುಟ-೭, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು. ೧೮.

೯೧. ಎಫಿಗ್ರಾಫಿಯಾ ಕರ್ನಾಟಿಕ, ಸಂಪುಟ-೯, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು. ೭೯.

೯೨. ಚಿದಾನಂದಮೂರ್ತಿ ಎಂ., ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೬, ಪು. ೨೬೧-೨೬೨.

೯೩. EC, XV.BI. 339, 1231.

೯೪. M.A.R 1923, 63, 1407.

೯೫. ECI, cg 26, 1801.

೯೬. ಶೇಷಶಾಸ್ತ್ರೀ ಆರ್., ಕರ್ನಾಟಕದ ವೀರಗಲ್ಲುಗಳು, ೧೯೭೮, ಪು. ೨೩೫.

೯೭. ECI, cg 25.

೯೮. JKUSS, Vol II, P. 49.

೯೯. ಶೇಷಶಾಸ್ತ್ರೀ ಆರ್., ಕರ್ನಾಟಕದ ವೀರಗಲ್ಲುಗಳು, ೧೯೭೮, ಪು. ೨೩೫.

೧೦೦. EC 6 mg 33, 1179.

೧೦೧. EC 6 kd 33, 1179.

೧೦೨. ನಾಗೇಗೌಡ ಎಚ್.ಎಲ್., ಪ್ರವಾಸಿಕಂಡ ಇಂಡಿಯಾ, ಪು. ೨೮.

೧೦೩. ಶೇಷಶಾಸ್ತ್ರೀ ಆರ್., ಕರ್ನಾಟಕದ ವೀರಗಲ್ಲುಗಳು, ೧೯೭೮, ಪು. ೨೩೬.

೧೦೪. ನಾಗೇಗೌಡ ಎಚ್.ಎಲ್., ಪ್ರವಾಸಿಕಂಡ ಇಂಡಿಯಾ, ಸಂಪುಟ–೭, ೧೯೮೩, ಪು. ೩೦.

೧೦೫. ಅದೇ, ಪು. ೨೬೩–೨೬೪.

೧೦೬. ಅದೇ, ಪು. ೨೭೯.

೧೦೭. ಕಲ್ಲಯ್ಯ ಎಸ್. ಹಿರೇಮಠ, ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ, ೨೦೦೯, ಪು. ೫೬.

೧೦೮. ಅದೇ, ಪು. ೫೬.

೧೦೯. ರವೀಂದ್ರನಾಥ ಕೆ., ಕನ್ನಡ ದಾಖಲು ಸಾಹಿತ್ಯ, ೨೦೧೪, ಪು. ೧೦೩.

೧೧೦. ಅದೇ, ಪು. ೧೦೩.

೧೧೧. ಕಿಟೇಲ್ ಎಫ್., ಕನ್ನಡಡ ಇಂಗ್ಲೀಷ್ ಡಿಕ್ಷನರಿ, ಪು. ೭೮೭.

೧೧೨. ರವೀಂದ್ರನಾಥ ಕೆ., ಕನ್ನಡ ದಾಖಲು ಸಾಹಿತ್ಯ, ೨೦೧೪, ಪು. ೧೧೧.

೧೧೩. ನರಸಿಂಹಮೂರ್ತಿ ಎ.ವಿ., ಭಾರತೀಯ ನಾಣ್ಯ ಪರಂಪರೆ, ೨೦೦೮, ಪು. ೧೮೬.

೧೧೪. ಅದೇ, ಪು. ೭೭.

೧೧೫. ಅದೇ, ಪು. ೮೦.

೧೧೬. ಅದೇ, ಪು. ೮೧.

೧೧೭. ಅದೇ, ಪು. ೯೦.

೧೧೮. ಅದೇ, ಪು. ೧೩೦.

೧೧೯. ಅದೇ, ಪು. ೧೩೭.

೧೨೦. ಅದೇ, ಪು. ೧೩೯.

೧೨೧. ಅದೇ, ಪು. ೧೮೮.

# ಅಧ್ಯಾಯ ನಾಲ್ಕು

# ಗಜಶಾಸ್ತ್ರ: ಆನೆಗಳ ವೈಶಿಷ್ಟ್ಯಗಳು

೪.೧.೧. ಆನೆಗಳ ಹುಟ್ಟು ಮತ್ತು ಬೆಳವಣಿಗೆ

೪.೧.೨. ಆನೆಗಳ ಜಾತಿ ಮತ್ತು ಪ್ರಭೇದಗಳು

೪.೧.೩. ಆನೆಗಳ ಗುಣಲಕ್ಷಣ

೪.೧.೪. ಆನೆಗಳ ರೋಗ ಮತ್ತು ಆರೈಕೆ

## ಅಧ್ಯಾಯ ನಾಲ್ಕು

# ಗಜಶಾಸ್ತ್ರ: ಆನೆಗಳ ವೈಶಿಷ್ಟ್ಯಗಳು

'ಗಜ' ಎನ್ನುವ ಪದ ಮೂಲತಃ ಸಂಸ್ಕೃತ ಮೂಲದ್ದು. ಶಾಸ್ತ್ರ ಸಾಹಿತ್ಯ ರಚನೆಕಾರರು ಸಂಸ್ಕೃತದ ಪ್ರಭಾವದಿಂದಾಗಿ ಕನ್ನಡದಲ್ಲಿ ಗಜ ಪದವನ್ನು ಬಳಕೆ ಮಾಡಿಕೊಂಡಿದ್ದಾರೆ. ಪ್ರಸ್ತುತ ಕನ್ನಡದಲ್ಲಿ ಆನೆಶಾಸ್ತ್ರ ಎಂದರೆ ಸ್ವಲ್ಪ ಗಂಭೀರತೆಯ ದೃಷ್ಟಿಯಿಂದ, ಅಷ್ಟು ಸಮಂಜಸವಲ್ಲವೆನ್ನುವ ದೃಷ್ಟಿಯಿಂದ ಗಜಶಾಸ್ತ್ರ ಎಂದು ಬಳಸಿರುವ ಸಾಧ್ಯತೆಯೂ ಇದೆ. ಹಾಗೆಯೇ ಗಜಶಾಸ್ತ್ರ ಸಾಹಿತ್ಯ ರಚನೆಕಾರರು ಸಂಸ್ಕೃತ ಸಾಹಿತ್ಯದ ಪಂಡಿತರೂ ಆಗಿರುವರು. ಏಕೆಂದರೆ ಸಂಸ್ಕೃತದಲ್ಲಿ ಬಂದ ಗಜಶಾಸ್ತ್ರವನ್ನು ಅನುಸರಿಸಿಯೇ ಕನ್ನಡದಲ್ಲಿಯೂ ಗಜಶಾಸ್ತ್ರ ಕೃತಿಗಳು ಜನ್ಮ ತಾಳಿವೆ. ಪ್ರಸ್ತುತ ಈ ಅಧ್ಯಾಯದಲ್ಲಿ ಆನೆಗಳ ವೈಶಷ್ಟ್ಯಗಳನ್ನು ಕುರಿತು ವಿವರಿಸಲಾಗಿದೆ. ಆನೆ ಅದರಲ್ಲಿ ಪ್ರಮುಖವಾಗಿ ಆನೆಗಳ ಹುಟ್ಟು ಬೆಳವಣಿಗೆ, ಮದಗಜಗಳ, ಆನೆಗಳಜಾತಿ, ಗುಣಲಕ್ಷಣ, ಆನೆಗಳ ಶುಭ, ಅಶುಭ ಆನೆಗಳು ಪ್ರಭೇದಗಳು, ರೋಗ ಮತ್ತು ಆರೈಕೆ ಅವುಗಳ ತರಬೇತಿ ಭಾಷಾತರಬೇತಿ, ಸಂಜ್ಞೆತರಬೇತಿ, ಮಾವುತರ ಪಾತ್ರ ಮತ್ತು ಚಿಕಿತ್ಸಾಕ್ರಮಗಳು ಮುಂತಾದವುಗಳ ಕುರಿತು ಚರ್ಚಿಸಲಾಗಿದೆ.

### ೪.೧. ಆನೆಗಳ ಹುಟ್ಟು ಮತ್ತು ಬೆಳವಣಿಗೆ

ಆನೆಗಳ ಹುಟ್ಟಿನ ಕುರಿತು ಪುರಾಣ ಶಾಸ್ತ್ರಗ್ರಂಥಗಳು ಅಲೌಕಿಕವಾದ ವಿಚಾರಗಳನ್ನು ಹೇಳುತ್ತವೆ. ಸೌಗಂಧಿಕಾ ಪರಿಣಯದ ಪ್ರಕಾರ ಕಾಶ್ಯಪ ಋಷಿಯ ಮಕ್ಕಳೇ ಆನೆಗಳು. ಇನ್ನೂ ಕೆಲವು ಕೃತಿಗಳಲ್ಲಿ ಕಾಲಪ್ಯ ಮುನಿಯ ವಂಶಜರೇ ಆನೆಗಳು ಎಂದು ಹೇಳಲಾಗಿದೆ. ಸೌಗಂಧಿಕಾ ಪರಿಣಯದಲ್ಲಿ ಆನೆಯ ಹುಟ್ಟಿನ ಕುರಿತು ಹೇಳಿದ ಮಾತುಗಳು ಹೀಗಿವೆ. 'ಪೂರ್ವದಲ್ಲಿ ಕಾಶ್ಯಪ ಋಷಿಗೆ ಕ್ರೋಧಾದೇವಿಯೆಂಬ ಓರ್ವಳು ಹದಿಮೂರನೇ ಹೆಂಡತಿಯಿದ್ದಳು. ಅವಳಿಗೆ ಹನ್ನೆರಡು ಜನ ಪುತ್ರಿಯರು ಉಂಟಾದರು. ಆ ಹನ್ನೆರಡು

ಜನರಲ್ಲಿ ಭದ್ರಮಂದ್ರಾ ಎಂಬುವವಳು ಐರಾವತವೆಂಬ ಮಹಾ ಗಜವಂ ಪ್ರಸವಿಸಿದಳು. ಶತಾಯೆಂಬುವವಳಲ್ಲಿ ಅಷ್ಟ ದಿಗ್ಗಜಗಳು(ಭೂಮಿಯ ಎಂಟು ದಿಕ್ಕುಗಳನ್ನೂ ಹೊತ್ತು ನಿಂತ ಆನೆಗಳು) ಜನಿಸಿದವು. ಮಾತಂಗಿ ಎಂಬುವವಳಲ್ಲಿ ಮಾತಂಗಗಳೆಂಬ ಗಜಗಳು ಜನಿಸಿದವು. ಇದಲ್ಲದೆ ಪೂರ್ವದಲ್ಲಿ ಮತಂಗನೆಂಬ ಮಹಾ ಋಷಿಯು ತನ್ನ ಯೋಗ ಶಕ್ತಿಯಿಂ ಬ್ರಹ್ಮಾಂಡವಂ ಇಬ್ಭಾಗವಂ ಮಾಡಿ ತಾಳಗಳಂತೆ ಮಾಡಿಕೊಂಡು ಈಶ್ವರನಂ ಸಂತೋಷಗೊಳಿಸಲೋಸುಗ ಸಾಮಗಾನಮಂ ಮಾಡುತ ತಾಳವಂ ಬಡಿಯುತ್ತಿರುವ ಸಮಯದೋಳ್ ಆ ಸಾಮದ್ದೆಶೆಯಿಂದ ಕೆಲವು ಆನೆಗಳು ಪುಟ್ಟಿ ಸಾಮಜಗಳೆಂದು ಪ್ರಸಿದ್ಧಗಳಾದವು. ಪೂರ್ವದಲ್ಲಿ ಈ ಗಜಗಳೆಲ್ಲವು ಮನಬಂದಂತೆ ಆಕಾಶದಲ್ಲಿ ಸಂಚರಿಸುತ ಸುಖದಿಂದ ಸ್ವರ್ಗದಲ್ಲಿದ್ದವು. ಅನಂತರದಲ್ಲಿ ಮುನಿ ಶಾಪದಿಂದ ಆ ಗಜಗಳ್ ಭೂಮಿಯೊಳ್ ಸಂಚರಿಸುತಲಿದ್ದವು"[೧] ಭೂಮಿಯ ಮೇಲಿರುವ ಪ್ರಸಿದ್ಧ ಎಂಟು ವನಗಳು ಗಜಗಳ ಉತ್ಪತ್ತಿ ಸ್ಥಾನವೆಂದು ಪುರಾಣ ಕೃತಿಗಳು ತಿಳಿಸುತ್ತವೆ. ಆದರೆ ಪುರಾಣ ಗ್ರಂಥಗಳಿಗಿಂತ ಭಿನ್ನವಾದ ಜೀವನಶೈಲಿಯನ್ನು ಹೊಂದಿದ ಆನೆಗಳು ವಾಸ್ತವವಾಗಿ ಗರ್ಭ ಧರಿಸಿ ಮರಿಯನ್ನು ಈಯುತ್ತದೆ.

ಗಬ್ಬ(ಗರ್ಭ) ಧರಿಸಿದ ಹೆಣ್ಣಾನೆಯ ಸಂಗಡ ಸುಶ್ರೂಷಕ ಹಿರಿಯ ಹೆಣ್ಣಾನೆ ಇರುತ್ತದೆಂದು ಈ ಮೊದಲೇ ಹೇಳಲಾಗಿದೆ. ಇದು ಹೆಣ್ಣಾನೆಗೆ ಮರಿ ಹುಟ್ಟಿ ಅದನ್ನು ತಾಯಿಯಾನೆ ಜೋಪಾನ ಮಾಡಬಲ್ಲಳು ಎಂದು ನಂಬಿಕೆ ಬರುವವರೆಗೂ ಸುಶ್ರೂಷಕ ಆನೆ ಗಬ್ಬ ಧರಿಸಿ ಹೆರಿಗೆಯಾದ ಆನೆಯೊಂದಿಗೆ ಜೊತೆಯಾಗಿಯೇ ಇರುತ್ತದೆ. ಆನೆಗಳು ಒಂದೇ ಮರಿಗೆ ಜನ್ಮ ನೀಡುವುದು ಹೆಚ್ಚಾಗಿದ್ದರೂ ಅವಳಿ ಮರಿಗಳಿಗೂ ಜನ್ಮ ನೀಡಿದ ಉದಾಹರಣೆಗಳಿವೆ. ಎರಡೆರಡು ಆನೆ ಮರಿಗಳನ್ನು ಆರೈಕೆ ಮಾಡುವ ಹೆಣ್ಣಾನೆಗಳನ್ನು ಆನೆಯ ತಜ್ಞರು ನೋಡಿದ್ದಾರೆ. ಆದರೆ ಅವಳಿ ಮರಿಗಳು ಹುಟ್ಟುವುದು ಅಪರೂಪವೆಂದು ಹೇಳಬಹುದು. ಸಾಮಾನ್ಯವಾಗಿ 'ಒಂದು ಹೆಣ್ಣಾನೆ ತನ್ನ ಜೀವಿತಾವಧಿಯಲ್ಲಿ ನಾಲ್ಕು ಸೂಲು ಈಯುತ್ತದೆ.'[೨] 'ಆನೆ ಸೆರೆಯಲ್ಲಿ ಈಯುವುದಿಲ್ಲ. ಸೆರೆ ಹಿಡಿದ ಆನೆಗಳು ನೈಸರ್ಗಿಕ ವಾತಾವರಣದಲ್ಲಿಯೇ ಸ್ವಾಭಾವಿಕವಾಗಿ ಮರಿ ಹಾಕುತ್ತವೆ.'[೩] ಹೀಗೆ ಆನೆಗಳು ನೈಸರ್ಗಿಕವಾಗಿ ಇತರ ಪ್ರಾಣಿಗಳಲ್ಲಿ ನಡೆಯುವ ಜೈವಿಕ ಕ್ರಿಯೆಯಲ್ಲಿ ತೊಡಗಿ ತನ್ನ ವಂಶವನ್ನು ಮುಂದುವರಿಸಿಕೊಂಡು ಹೋಗುತ್ತವೆ.

"ಹಸ್ತೀ ದಂತೀ ಗಜೋ ನಾಗೋ ಮತಂಗಂ ಕುಂಜರಂ ಕರೀ ।
ಇಭೋ ಮತಂಗಜಶ್ಚೈವ ವಾರಣೋ ದ್ವಿರದೋ ದ್ವಿಪಃ ॥

ಮೃಗೋಽಥ ಸಾಮಜಶ್ಚೈವ ತಥಾ ಚಾನೇಕಪಃ ಸ್ಮೃತಃ ।
ಇತಿ ಪಂಚದಶೈತಾನಿ ನಾಮಾನ್ಯುಕ್ತಾನಿ ಪಂಡಿತೈಃ ॥

ಪ್ರಾಣಿವರ್ಗದಲ್ಲೆಲ್ಲ ಬಹು ದೊಡ್ಡದಾದ, ಸೊಂಡಿಲಿರುವ ಪ್ರಾಣಿ ಗಜ. ಆನೆಯ ಕೋಡು ಬಾಗದೆಂಬಂತೆ; ತಾವರೆಕೊಳನಂ ಸೊಕ್ಕಿದಾನೆ ಪೊಕ್ಕಂತೆ; ಆನೆಯ ನಾಮಾಂತರಗಳು ಇರುವುದನ್ನು ಕಾಣುತ್ತೇವೆ. ಗಜಗಳಿರುವ ಕಾಡುಗಳು ಸುಂದರ ಉದ್ಯಾನಗಳು ಅನೇಕ ನದಿಗಳಿಗೆ ಆಶ್ರಯ ನೀಡಿದ ಭೂಮಿಯು ಯಾವಾಗಲೂ ರಾಜರಿಂದ ಆಳಲ್ಪಡುತ್ತವೆ. ಅವು ಆನೆಗಳಿಗೆ ಜನ್ಮಸ್ಥಳ ಹಾಗೂ ಆನೆಗಳು ವಾಸಿಸಲು ಶ್ರೇಷ್ಠವಾದವು.[೪] ಈ ಪ್ರದೇಶಗಳು ಆನೆಗಳಿಗೆ ಶ್ರೇಷ್ಠವಾದ ಹಾಗೂ ಅವುಗಳು ವಾಸಿಸಲು ಯೋಗ್ಯವಾದ ಸ್ಥಳಗಳು ಎಂದು ಅಂದಿನ ಕಾಲದ ರಾಜರು ಅಂತಹ ಪ್ರದೇಶಗಳನ್ನು ಗುರುತಿಸಿ ಅವುಗಳನ್ನು ರಕ್ಷಿಸುತ್ತಿದ್ದರು. ಅಲ್ಲದೇ ಆ ಪ್ರದೇಶಗಳು ಆ ರಾಜರ ಆಳ್ವಿಕೆಗೆ ಒಳಪಡುತ್ತಿದ್ದವು.

ಯಾವ ಪ್ರದೇಶಗಳಲ್ಲಿ ಆನೆಗಳು ನೆಲೆಸುತ್ತವೆ ಹಾಗೂ ಜನ್ಮ ನೀಡುತ್ತವೆ ಎಂಬುದನ್ನು ಸೋಮೇಶ್ವರನ ಮಾನಸೋಲ್ಲಾಸದಲ್ಲಿ ಈ ರೀತಿ ಹೇಳಿದ್ದಾನೆ. ಸೋಮೇಶ್ವರನು ಭಾರತದ ವಿವಿಧ ಭಾಗಗಳಿಗೆ ಆ ಕಾಲದಲ್ಲಿದ್ದ ಹೆಸರುಗಳನ್ನು ಹೇಳುವುದರೊಂದಿಗೆ ಆ ಕಾಡುಗಳನ್ನು ವಿಭಾಗಿಸಿ ಹೆಸರಿಸುತ್ತಾನೆ. ಮುಖ್ಯವಾಗಿ ಆ ಕಾಡುಗಳನ್ನು ಉತ್ತಮ, ಮಧ್ಯಮ, ಅಧಮವೆಂದು ಮೂರು ವಿಭಾಗಗಳನ್ನಾಗಿ ವಿಂಗಡಿಸಿದ್ದಾನೆ. ಅವುಗಳೆಂದರೆ,

'ಗಂಗಾನದಿ, ಹಿಮಾಲಯ, ಪ್ರಯಾಗಗಳ ಮಧ್ಯದಲ್ಲಿ ಹರಡಿರುವುದು ಪ್ರಾಚ್ಯವನವೆಂದು ಹೇಳಲಾಗುತ್ತದೆ ಮತ್ತು ಕೋಸಲದಿಂದ ತ್ರಿಪುರಾದವರೆಗಿದ್ದ ಪ್ರದೇಶದ ಕಾಡಿಗೆ ವೇದಿಕಾರೂಕ್ಷಕ ವನ ಎನ್ನುತ್ತಾರೆ. ಶ್ರೀಕ್ಷೇತ್ರ ಮತ್ತು ಗೌಡಬಂಗಾಲ ವನ ಪ್ರದೇಶಕ್ಕೆ ಅಂಗಿರೇಯ ವನ ಎನ್ನುತ್ತಾರೆ. ವಿಂಧ್ಯಾದ್ರಿ, ಚಿತ್ರಕೂಟಾದ್ರಿ, ಕಲಿಂಗ ಹಾಗೂ ದ್ರಾವಿಡ ದೇಶಗಳಲ್ಲಿರುವ ವನಕ್ಕೆ ಕಾಲಿಂಗವನ ಎನ್ನುತ್ತಾರೆ. ಶ್ರೀಶೈಲ, ವೇದಶೈಲ, ಮಲಯಾದ್ರಿಯಲ್ಲಿರುವ ಆನೆಗಳ ಜನ್ಮಕಾರಣವಾಗಿರುವ ವನಕ್ಕೆ ದಾಶಾರ್ಣಕ ವನ ಎನ್ನುವರು. ಸಹ್ಯಾದ್ರಿಯಿಂದ ಭೃಗಕಚ್ಛದವರೆಗಿನ ವನಕ್ಕೆ ಅಪರಾಂತವನ ಎಂದು ಕರೆಯುವರು. ಆವಂತಿ ಹಾಗೂ ದ್ವಾರಾವತಿಯಲ್ಲಿರುವ ವನಕ್ಕೆ ಸೌರಾಷ್ಟ್ರವನ ಎನ್ನುತ್ತಾರೆ. ಕಾಲಾಂಜರ, ಕುರುಕ್ಷೇತ್ರ, ಸಿಂಧೂನದಿ ಸಂಗಮದಲ್ಲಿರುವ ವನಕ್ಕೆ ಪಾಂಚನದ ವನವೆನ್ನುತ್ತಾರೆ. ಇದು ಹಿಮಾಲಯದವರೆಗೆ ಹಬ್ಬಿದೆ. ಕಾಲಿಂಗಕ ವನ, ವೇದಿಕಾರೂಷಕ ವನ, ದಾಶಾರ್ಣಕ ವನಗಳು ಶ್ರೇಷ್ಠವಾದವುಗಳು. ಆಂಗಿರೇಯ ಮತ್ತು ಪ್ರಾಚ್ಯವನಗಳು ಮಧ್ಯಮ ವನಗಳು ಎಂದು ವನಗಳನ್ನು ಬೇರ್ಪಡಿಸುತ್ತಾ

ಅಪರಾಂತ ಪಾಂಚನದ ಹಾಗೂ ಸೌರಾಷ್ಟ್ರ ವನಗಳು ಅಧಮವಾದ ವನಗಳು ಎಂದು ಪರಿಗಣಿತವಾಗಿವೆ.'[೫] ಹೀಗೆ ಸೋಮೇಶ್ವರನು ಮಾನಸೋಲ್ಲಾಸ ಕೃತಿಯಲ್ಲಿ ಆನೆಗಳ ಜನ್ಮಸ್ಥಳವನ್ನು ಎಂಟು ವನಗಳನ್ನಾಗಿ ಗುರುತಿಸಿದ್ದಾನೆ.

ಗಜಗಳ ಹುಟ್ಟು ಬೆಳವಣಿಗೆಯ ಕುರಿತು ಪ್ರಾಚೀನ ಕೃತಿಗಳಲ್ಲದೆ ಆಧುನಿಕ ಕನ್ನಡ ಕೃತಿಗಳು ಸಹ ಉಪಯುಕ್ತ ಮಾಹಿತಿಯನ್ನು ಒಳಗೊಂಡಿರುವುದನ್ನು ಸಿ.ಎಸ್. ಬಸಪ್ಪ ನವರ ಗಜಗಾಮಿನಿ ಕೃತಿಯು ತಿಳಿಸುತ್ತದೆ. ಆನೆಗಳು ವಾಸಿಸುವ ಪ್ರದೇಶ ಹಾಗೂ ಅವು ಸಂಚರಿಸುವ ಕಾಡುಗಳು ಅವುಗಳಿಗೆ ಉಪಯುಕ್ತವಾಗುವ ನೈಸರ್ಗಿಕ ಪರಿಸರವನ್ನು ಗಜಗಾಮಿನಿ ಕೃತಿಯಲ್ಲಿ ಕೆಳಕಂಡಂತೆ ವಿವರಿಸಿದ್ದಾರೆ.

ಏಷಿಯಾದ ಆನೆಗಳು ಉಷ್ಣವಲಯದ ಅರಣ್ಯ, ವಿಶಾಲವಾದ ಹುಲ್ಲುಗಾವಲು, ಎಲೆಯುದುರುವ ಅರಣ್ಯ ಪ್ರದೇಶ, ನಿತ್ಯ ಹರಿದ್ವರ್ಣ ಕಾಡು, ಹಿಮ ಪ್ರದೇಶ ಹೀಗೆ ವಿವಿಧ ನೈಸರ್ಗಿಕ ಪರಿಸರದಲ್ಲಿ ವಾಸಿಸುವಂಥ ಪ್ರಾಣಿಗಳಾಗಿವೆ. ಶಿಲಾಯುಗದ ಕಾಲದಿಂದಲೂ ಮಾನವನ ಬೇಟೆಯ ಪ್ರಾಣಿ ಇದಾಗಿತ್ತು. 'ಹತ್ತೊಂಬತ್ತನೇ ಶತಮಾನದಲ್ಲಿ ಮಾಸ್ಕ ಎಂಬ ಪಳೆಯುಳಿಕೆ ಶಾಸ್ತ್ರಜ್ಞನು ಜೆಕಾಸ್ಲೋವಿಯಾದಲ್ಲಿ ಸಂಶೋಧನೆ ನಡೆಸಿದಾಗ ದೊರೆತ ಪುರಾವೆಗಳಿಂದ ಶಿಲಾಯುಗ ಕಾಲದಲ್ಲಿ ಆನೆ ಬೇಟೆ ನಡೆಯುತ್ತಿತ್ತೆಂಬ ಅಂಶ ಬೆಳಕಿಗೆ ಬಂದಿದೆ. ಅವನು ಉತ್ಖನನ ಮಾಡಿದ ಸ್ಥಳದಲ್ಲಿ ಒಂಬೈನೂರು ಬೃಹದ್ಗಜಗಳ ಅಸ್ಥಿಪಂಜರ ದೊರೆತಿವೆ.'[೬] ಅಂದರೆ ಏಷಿಯಾದ ಆನೆಗಳು ಶಿಲಾಯುಗ ಪೂರ್ವದಿಂದಲೂ ಇದ್ದು ಅವು ಮಾಂಸಾಹಾರಿ ಪ್ರಾಣಿ ಹಾಗೂ ಮಾನವನ ಹಸಿವಿನ ಕಾರಣಕ್ಕಾಗಿ ದಾಳಿಗೆ ಒಳಗಾಗುತ್ತಿದ್ದವು ಎಂಬುದು ಸ್ಪಷ್ಟವಾಗುತ್ತದೆ.

ಏಷಿಯಾದಲ್ಲಿ ಆನೆಗಳ ನೆಲೆಗಳ ವಿಸ್ತಾರ ಅವುಗಳ ನೆಲೆಸುವಿಕೆಯ ಅಳಿದುಳಿದ ಭಾಗ ಮಾತ್ರವಾಗಿದೆ ಎಂದು ತಿಳಿದುಬರುತ್ತದೆ. 'ಸುಮಾರು ಆರು ಸಾವಿರ ವರ್ಷಗಳ ಪೂರ್ವದಲ್ಲಿ ಆನೆಗಳ ಆವಾಸ ವಿಸ್ತಾರವು ಪಶ್ಚಿಮ ಚೀನಾದ ಟೈಗ್ರಿಸ್, ಯೂಪ್ರಟಿಸ್ ನದಿಗಳ ಕೊಳ್ಳದಿಂದ ಮೊದಲುಗೊಂಡು ಪೂರ್ವದಲ್ಲಿ ಚೀನಾದ ಯಾಂಗ್‌ತ್ಸಿಕಿಯಾಂಗ್ ನದಿಯ ಕೊಳ್ಳದವರೆಗೆ, ಬಹುಶಃ ಅದಕ್ಕೂ ಮುಂದೆ ಹಬ್ಬಿತ್ತು ಎಂಬುದು ದಾಖಲೆಗಳಿಂದ ತಿಳಿದುಬರುತ್ತದೆ. ಆ ಭಾಗವು ಇಂದಿನ ಮಧ್ಯಪ್ರಾಚ್ಯ ದೇಶಗಳಾದ ಇರಾಕ್ ಮತ್ತು ಅದರ ಸುತ್ತಲ ದೇಶಗಳು, ದಕ್ಷಿಣ ಇರಾನ್ ಅಲ್ಲದೆ ಇಂದಿನ ಪಾಕಿಸ್ತಾನ, ಹಿಮಾಲಯದ ದಕ್ಷಿಣಕ್ಕಿರುವ ಇಡೀ ಭಾರತ ಉಪಖಂಡ, ಆಗ್ನೇಯ ಏಷಿಯಾ, ಚೀನಾದ ಪೂರ್ವ ಭಾಗ ಮತ್ತು ಅದರ ದ್ವೀಪಗಳು, ಶ್ರೀಲಂಕಾ, ಸುಮಾತ್ರಾ, ಬೋರ್ನಿಯೋ ಮತ್ತು

ಜಾವಾಗಳನ್ನು ಒಳಗೊಂಡಿತ್ತು'.[೭] ಏಷಿಯಾದ ಕಾಡಾನೆಗಳ ನೆಲೆಯ ಪ್ರದೇಶವು ಸುಮಾರು ಅರ್ಧ ಲಕ್ಷ ಚದರ ಕಿಲೋ ಮೀಟರ್‌ಗಳಿಷ್ಟಿರಬಹುದೆಂದು ಅಂದಾಜಿಸಲಾಗಿದೆ. 'ಏಷಿಯಾದ ಆನೆಗಳ ಸಾಂದ್ರತೆಯು ಅಲ್ಪಸಂಖ್ಯೆ ಹಾಗೂ ಕಡಿಮೆ ವಸತಿ ವಿಸ್ತಾರಗಳಿಂದ ನಿರ್ಬಂಧಿತ ವಾಗಿವೆ. ಇವುಗಳಲ್ಲಿ ಹತ್ತು ಆನೆಯ ಗುಂಪುಗಳು ಮಾತ್ರ ಸಾವಿರಕ್ಕಿಂತ ಹೆಚ್ಚು ಸಾಂದ್ರತೆ ಹೊಂದಿವೆ. ದಕ್ಷಿಣ ಭಾರತದಲ್ಲಿ ನೀಲಗಿರಿ ಪರ್ವತ, ಪೂರ್ವಘಟ್ಟಗಳು, ಅಣ್ಣಾಮಲೈ-ಪೆರಿಯಾರ್ ಪ್ರದೇಶಗಳಲ್ಲಿಯೂ ಇಂಥ ಆನೆಗಳ ಗುಂಪುಗಳಿವೆ. ಈಶಾನ್ಯ ಭಾರತದಲ್ಲಿ ಅರುಣಾಚಲ ಪ್ರದೇಶ, ಸಿಕ್ಕಿಂ, ಅಸ್ಸಾಂ, ಪಶ್ಚಿಮ ಬಂಗಾಳ, ಗಾರೋ-ಖಾಸಿ ಪರ್ವತ ಪ್ರದೇಶ; ಶ್ರೀಲಂಕಾದ ಆಗ್ನೇಯ ಭಾಗ, ಮ್ಯಾನ್ಮಾರ್‌ನಲ್ಲಿ ಮಿತ್ಕಿನಿಯಾ-ಭಾಮೋ ಮತ್ತು ಇರಾವ್ದಿ-ಚಿಂದ್ವಿನ್; ಲಾವೋಸ್-ಕಾಂಬೋಡಿಯಾ-ಮ್ಯಾನ್ಮಾರ್ ಗಡಿಗುಂಟ ಇರುವ ತೆನಸ್ಸೆರಿಯಮ್ ಪರ್ವತ ಪ್ರದೇಶಗಳು ಸೇರಿವೆ. ಕಾಂಬೋಡಿಯಾ-ಲಾವೋಸ್-ವಿಯಾಟ್ನಾಮ್ ಗಡಿಗಳಲ್ಲಿ ಮತ್ತು ಬೋರ್ನಿಯೋ ದ್ವೀಪಗಳ ಸಭಾ ಪ್ರದೇಶಗಳಲ್ಲಿಯೂ ಆನೆ ಹಿಂಡುಗಳಿವೆ.'[೮] ಈ ಮಾಹಿತಿ ಗಜಗಾಮಿನಿ ಕೃತಿಯಲ್ಲಿ ಉಲ್ಲೇಖವಾಗಿದೆ.

ಗಜಗಳು ತಮ್ಮ ವಯೋಮಾನಕ್ಕೆ ತಕ್ಕಂತೆ ಒಂದು ತಿಂಗಳ ಮರಿಯಿಂದ ವಿವಿಧ ವಯಸ್ಸಿನಲ್ಲಿ ಅವುಗಳ ಬೆಳವಣಿಗೆಗೆ ತಕ್ಕಂತೆ ವಿಶಿಷ್ಟವಾದ ನಾಮಗಳಿಂದ ಗುರುತಿಸುವುದನ್ನು ಗಜಶಾಸ್ತ್ರ ರಚನಕಾರರು ವಿವರಿಸಿರುವುದನ್ನು ಟಿ.ವಿ. ವೆಂಕಟಾಚಲಶಾಸ್ತ್ರಿಯವರು ತಮ್ಮ ಗಜಶಾಸ್ತ್ರ ಶಬ್ದಕೋಶ ಕೃತಿಯಲ್ಲಿ ಈ ಕೆಳಗಿನಂತೆ ಉಲ್ಲೇಖಿಸಿದ್ದಾರೆ.

**ಗಜವಯೋನುಗತ ನಾಮಗಳು:** ೧. ಶಿಶು(ಒಂದು ತಿಂಗಳ ಮರಿ), ಹಂಸ (ಎರಡು ತಿಂಗಳ ಮರಿ), ಯೂಥನಿಷ್ಕ್ರಾಮಿ(ಮೂರು ತಿಂಗಳ ಮರಿ), ಚಪಲಾಂಗ(ನಾಲ್ಕು ತಿಂಗಳ ಮರಿ), ವಿಕ್ಲಬಾಕ್ಷ(ಐದು ತಿಂಗಳ ಮರಿ), ಲಕ್ಷೋಪದಂಶ(ಆರು ತಿಂಗಳ ಮರಿ), ಲಂಡಭಕ್ಷ(ಏಳು ತಿಂಗಳ ಮರಿ), ಚಪಲಾ(ಎಂಟು ತಿಂಗಳ ಮರಿ), ಕ್ರೋಧನ(ಒಂಬತ್ತು ತಿಂಗಳ ಮರಿ), ಮಾತೃವತ್ಸಲ(ಹತ್ತು ತಿಂಗಳ ಮರಿ), ವ್ಯಕ್ತ ತಾಲು(ಹನ್ನೊಂದು ತಿಂಗಳ ಮರಿ), ವಿನಿದ್ರ(೧೨ ತಿಂಗಳ ಮರಿ), ಜಾತವರ್ಷ, ವರ್ಷದ್ವಿತಯಸಮ್ಮಿತ, ರೋಮಶಚೂಲಿಕ, ಕ್ಷೀರದಂತ(೩ ವರ್ಷದ ಮರಿ), ಪರ್ಯಸ್ತ(೪ ವರ್ಷದ ಮರಿ), ಅಲ್ಪನಿದ್ರ(೫ ವರ್ಷದ ಮರಿ), ಪೂರ್ವಕ(೧೧೦ ವರ್ಷದ ಆನೆ); ಆರರಿಂದ ನೂರು ವರ್ಷಗಳವರೆಗಿನ ಆನೆಗೆ ಪ್ರತ್ಯೇಕವೂ ವಿಶಿಷ್ಟವೂ ಆದ ನಾಮಾಂತರಗಳನ್ನು ಸೂಚಿಸಿಲ್ಲ: ಅಥಾತಃ ಪ್ರವಕ್ಷ್ಯಾಮಿ ವಯೋ ಜ್ಞಾನಂ ಮಹೀಪತೇ... ದ್ವಾದಶ್ಯಾಂ ಸ್ಯಾದಯೋಗ್ಯಸ್ತ ರಾಜ್ಞಾಜ್ಞೇಯಾ ಸುಪದ್ಧತಿಃ॥

೨. ಗ್ರಂಥಾಂತರದಲ್ಲಿ: ಮಂಡಕ(೨ ತಿಂಗಳ ಮರಿ), ಯೂಥನಿಷ್ಕ್ರಾಮಿ(೩ ತಿಂಗಳ ಮರಿ), ವಿಕ್ಲಬಾಕ್ಷ(೫ ತಿಂಗಳ ಮರಿ), ಲಂಡಭಕ್ಷ(೭ ತಿಂಗಳ ಮರಿ) ಚಪಲಾ(೮ ತಿಂಗಳ ಮರಿ), ಮಾತೃವತ್ಸಲ(೧೦ ತಿಂಗಳ ಮರಿ), ವ್ಯಕ್ತಾಲು(೧೧ ತಿಂಗಳ ಮರಿ), ವಿನಿದ್ರ (೧೨ ತಿಂಗಳ ಮರಿ), ಅಪಸರ್ಪ(೩ನೆಯ ವರ್ಷ), ಬರ್ಬರ(೪ ನೆಯ ವರ್ಷ), ಕಲಭ (೫ನೆಯ ವರ್ಷ), ವೈಕಾರಿಕ(೬ನೆಯ ವರ್ಷ), ಶಿಶು(೭ನೆಯ ವರ್ಷ), ಅಂಜನ (೮ನೆಯ ವರ್ಷ), ಪ್ರಭವ(೮ನೆಯ ವರ್ಷ), ವಿಕ್ಕ(೧೦ನೆಯ ವರ್ಷ), ಕಲಭ(೧೧ ರಿಂದ ೨೦ ವರ್ಷಗಳೊಳಗಿನದು), ಜವನ, ಕಲ್ಯಾಣ, ಯೂಥ, ನಿಸ್ಸೃತದಂತ, ವಿವರ್ಣಕ, ವಿರವೀ, ಪುರಾಣ, ಸ್ಥವಿರ, ಪೂರ್ವಕ. ಇಲ್ಲಿ ವಿಕ್ಕದ ವರೆಗೆ ನಡುವೆ ಕೆಲವು ನಾಮಾಂತರಗಳು ಅನುಕ್ತ; ವಿಕ್ಕದಿಂದ ಪೂರ್ವಕದ ವರೆಗೆ ೧೧ ದಶೆಗಳು ಉಕ್ತವಾಗಿವೆ; ಸಸ್ತನ್ಯಂ ಪಿಬೇದ್ ದ್ವಿಮಾಸಸ್ತು ಪಂಕೇಪ್ಸುರ್ಮಂಡಕೋ ಮೃದುಃ... ದಶಮ್ಯಾಂ ಸ್ಥವಿರೋ ಜ್ಞೇಯಃ ಏಕಾದಶ್ಯಾಂ ತು ಪೂರ್ವಕಃ.

೩. ಗ್ರಂಥಾಂತರದಲ್ಲಿ: ಚೂಲಿಕೆ(೨ ವರ್ಷ), ಅಪಸರ್ಪ(೩ ವರ್ಷ), ಬರ್ಬರ(೪ ವರ್ಷ), ಕಲಭ(೫ ವರ್ಷ), ವೈಕಾರಿಕ(೬ ವರ್ಷ), ಶಿಶು(೭ ವರ್ಷ), ಅಂಜನಾಭ(೭ ವರ್ಷ), ಪ್ರಭವ(೯ ವರ್ಷ), ವಿಕ್ಕ(೧೦ ವರ್ಷ), ಪೋತ(೨ನೆಯ ದಶೆ), ಜವನ (೩ನೆಯ ದಶೆ), ಕಲ್ಯಾಣ(೪ ನೆಯ ದಶೆ), ಯೂಥ(೫ನೆಯ ದಶೆ), ನಿಸ್ಸೃತದಂತ ಮೂಲ(೬ನೆಯ ದಶೆ), ವಿವರ್ಣ(೭ ನೆಯ ದಶೆ), ವಿರವೀ(೮ನೆಯ ದಶೆ), ಪುರಾಣ (೯ ನೆಯ ದಶೆ), ವೃದ್ಧ(೧೦ನೆಯ ದಶೆ).

೪. ಪೋತ, ವಿಕ್ಕ, ಕಲಭ, [ಜ]ವನ, ಕಲ್ಯಾಣ, ಯೌಧ, ವೃದ್ಧತರ, ಕೃಶ; ಸಲೆ ಪೋತ ವಿಕ್ಕ ಸುಲಲಿತ । ಕಳಭ ಜವನ ಕಾಂತರೂಪ ಕಲ್ಯಾಣ ಸಮು । ಜ್ವಳ[ಯೂಥ ವೃದ್ಧ]ತರ ಕೃಶ । ಬಳಹೀನ ಸ್ಥವಿರ ವೃದ್ಧಮೆಂಬಿವು ದಶೆಗಳ್. ಹಾಗೂ ಚಾಮುಂಡಿಕಾ ಲಘುನಿಘಂಟುವಿನಲ್ಲಿ ೫ ವರ್ಷದ ಆನೆಮರಿಗೆ ಬಾಲ ಎಂದು, ೧೦ ವರ್ಷದ ಆನೆಗೆ ಪೋತ, ೨೦ ವರ್ಷದ ಆನೆಗೆ ವಿಕ್ಕ, ೩೦ ವರ್ಷದ ಆನೆಗೆ ಕಲಭ ಹಾಗೂ ೬೦ ವರ್ಷದ ಆನೆಗೆ ಕುಂಜರ ಎಂಬುದಾಗಿ ಆನೆಗಳಿಗೆ ವಿವಿಧ ವಯೋನುಸಾರವಾಗಿ ಹೆಸರುಗಳಿಂದ ಕರೆಯುತ್ತಾರೆ.

ವಿಕ್ಕ, ಪೋತ, ಜವನ, ಕಲ್ಯಾಣ, ಯೌಧ, ನಿಸ್ಸೃತದಂತಮೂಲ, ವಿವರ್ಣ, ವಿರವೀ, ಪುರಾಣ, ವೃದ್ಧ ಇವು ಕ್ರಮವಾಗಿ ೧೦ ದಶೆಗಳು.

ಗಜಗಳ ಬೆಳವಣಿಗೆಯ ಹಂತದಲ್ಲಿ ಆಯಾ ವಯಸ್ಸಿನಲ್ಲಿ ತಮ್ಮ ವಿಶಿಷ್ಟವಾದ ಅಭಿರುಚಿಗಳನ್ನು ಹೊಂದಿರುತ್ತವೆ. ಮೊಲೆ ಕುಡಿಯುವ ಆನೆಯ ಮರಿಯಿಂದ ಹಿಡಿದು ಕೊನೆಯವರೆಗೆ ತಮ್ಮ ಹವ್ಯಾಸಗಳನ್ನು, ದೈಹಿಕ ಬೆಳವಣಿಗೆಗಳನ್ನು ಅವುಗಳ ಸ್ವಭಾವವನ್ನು ಕುರಿತು ಗಜಶಾಸ್ತ್ರಕಾರರು ಈ ರೀತಿ ವಿವರಿಸಿದ್ದಾರೆ.

ಮೊಲೆ ಕುಡಿಯುವ ಆನೆಯ ಮರಿಯನ್ನು ಬಿಕ್ಕ ಎಂದು ಕರೆಯುವರು: ಬಿಕ್ಕಃ ಸ್ತನಂಧಯಃ(ಅರ್ಥಶಾ. ೫೨-೪೮ ಟೀ) ತನ್ನದೀಕೂಲಮಂ । ಕದಡುತ್ತಿರ್ದುದು[ಬಿ]ಕ್ಕ ಪೋತ ಕಳಭಾಕೀರ್ಣಂ(ಮಲ್ಲಿಪು. ೧೦-೭೬: ಕಾವ್ಯಸಾ. ೧೦೫೫); ನಡುವಿರ್ದೆಟ್ಟಿರೆ ಪೋತ[ಬಿ]ಕ್ಕ ಕಳಭಂಗಳ್(ಜಗವಿ. ೧೬-೫); [ಬಿ]ಕ್ಕವಂ ಮೊಲೆಯೆಡೆಯೊಳಿಕ್ಕಿ ಪಿಡಿದುದು ಮತ್ತೆ(ಅನಂಪು. ೫-೩೬); ಕದುಪಿನ[ಬಿ]ಕ್ಕ ಪೋತ ಕರಿಣೀಗಣಮಂ(ಪಾರ್ಶ್ವಪು. ೪-೧೧೩/ ೪-೧೧೬). ಅಲ್ಲದೆ ನೋ: ವಿಕ್ಕ.[೧೦]

"ಶ್ಲಕ್ಷ್ಣಃ ಸುತಾಮ್ರೋ ಮೃದುಗಾತ್ರರೋಮಾ ॥
ನಿದ್ರಾಲುರಂ ಕೂರಿತಹಸ್ತಲಕ್ಷ್ಯಃ ।
ಅವ್ಯಕ್ತರೂಪಾಂಗಯುತಃ ಸ್ತನಾರ್ಥೀ }
ಬಾಲಾ ಹ್ವಯೋಽಯಂ ಪ್ರಥಮೇ ತು ವರ್ಷೇ (ಮಾತಂಗ. ೫-೨).

**ಒಂದು ವರ್ಷ ವಯಸ್ಸಿನ ಆನೆಯನ್ನು ಬಾಲ ಎಂದು ಕರೆಯುವರು.** ಶುಭ್ರವಾದ ತಾಮ್ರವರ್ಣದ, ಮೃದುಶರೀರದ ಹಾಗೂ ರೋಮದ, ನಿದ್ರಾಳುವಾದ, ಕಾಣಿಸಿ ಕೊಂಡಿರುವ ಸೊಂಡಿಲಿನ ಕಡೆಗೇ ಲಕ್ಷ್ಯವುಳ್ಳ, ಸ್ಪಷ್ಟವಾಗಿ ಹೊಮ್ಮದಿರುವ ಆಕಾರಸೌಷ್ಠವದ, ಮೊಲೆಹಾಲು ಕುಡಿಯಬಯಸುವ ಆನೆ.[೧೧]

"ಕಿಂಚಿ ತ್ಸಾಂದ್ರನಖೋತಿರಾಗರಸನೋಷ್ಠಾದಿ ಪಯೋಽಲ್ಪಂ ಪಿಬನ್ ।
ಕಿಂಚದ್ವಲ್ಲಿ ತೃಣಾದಿ ಖಾದಿತು ಮನಾ ಗಾತ್ರಾಂತರೇ ಲೋಹಿತಃ ।
ದ್ರಾಗ್ ಧಾವತ್ಯ ನಿಮಿತ್ತಮೇವ ಮುದಿತಃ ಪ್ರಾಯಃ ಸಿತಾ ಮೀಲಿತೋ ।
ನಮ್ರಾಕ್ಷೋ ನಯನಪ್ರಮೋದಕೃದಯಂ ವರ್ಷದ್ವಯೇ ಪುಚ್ಚುಕಂ

(ಮಾತಂಗ. ೫-೩).

**ಎರಡು ವರ್ಷ ವಯಸ್ಸಿನ ಆನೆಯನ್ನು ಪುಚ್ಚುಕ ಎನ್ನುವರು.** ಸ್ವಲ್ಪ ಒತ್ತಾದ ಉಗುರು ಗಳನ್ನುಳ್ಳ, ನಾಲಗೆ ತುಟಿಗಳು ಅತಿ ಕೆಂಪಾಗಿರುವ, ಸ್ವಲ್ಪವೇ ಹಾಲು ಕುಡಿಯುವ, ಬಳ್ಳಿ ಹುಲ್ಲು ಮುಂತಾದುವನ್ನು ತಿನ್ನುವ ಆಸೆಯುಳ್ಳ, ಮುಂಗಾಲಿನ ಒಳಭಾಗ ಕೆಂಪಗಿರುವ,

ಕಾರಣವಿಲ್ಲದೆ ಸುಮ್ಮನೆ ಸುಳಿದಾಡುವ, ಸಂತೋಷವಾಗಿರುವ, ಸ್ವಲ್ಪವೇ ಬಿಚ್ಚಿರುವ ಕೆಳಮೊಗವಾದ ಕಣ್ಣುಳ್ಳ, ನೋಡುವವರ ಕಣ್ಣುಗಳಿಗೆ ಪ್ರಿಯವಾದ ಆನೆ."[೧೨]

"ಸ್ಫುಟನಖವಿದು ಸಂಧಿಶ್ರೋತ್ರದಂತ ಪ್ರವೇಷ್ಟ ।
ಚ್ಛವಿರುರಸಿ ಸಬಿಂದುಃ ಕರ್ಣಪಿಂಭೂಷಯೋಶ್ಚ ।
ಶ್ರವಸಿ ಶಿರಸಿ ಕೇಶ್ಯುನ್ನಮ್ರಶೀರ್ಷಸ್ತೃಣಾದೀ ।
ದೃಢತರ ರದಪಂಕ್ತಿಶ್ಚೋಪಸರ್ಪ ಸ್ತೃತೀಯೇ ॥ (ಮಾತಂಗ. ೪–೫).

**ಮೂರನೆಯ ವರ್ಷದ ಆನೆಯನ್ನು ಉಪಸರ್ಪ ಎಂದು ಕರೆಯುವರು**. ಸ್ಫುಟವಾದ ಉಗುರು, ಬಿದು, ಸಂಧಿ, ಕಿವಿಗಳು, ದಂತ, ಎದೆ ಹಾಗೂ ಒಳಗಿವಿಯಲ್ಲಿ ಚುಬ್ಬು, ಗಟ್ಟಿಯಾದ ಹಲ್ಲುಗಳ ಸಾಲು, ತಲೆಯೆತ್ತಿ ನಡೆಯುವುದು – ಇವು ಲಕ್ಷಣಗಳಾಗಿ ಇರುವು."[೧೩]

"ವಿಲಾಗ ನಿಷ್ಕೋಶ ವಿಲೋಹಿತಃ ಪಯೋ।
ದ್ವಿಟ್ ಪ್ರೋಹ ಸಂದಾನ ಘನಸ್ತೃಣಪ್ರಿಯಃ
ಕೃಷ್ಣಾಂತತಾಲುಃ ಪೃಥುಲಶ್ಚತುಷ್ಟಯೇ।
ಮನಾಕ್ ಪ್ರರೋಹದ್ದಶನೋ ಹಿ ಬರ್ಬರಃ ॥ (ಮಾತಂಗ. ೫–೫).

**ನಾಲ್ಕು ವರ್ಷ ವಯಸ್ಸಿನ ಆನೆಯನ್ನು ಬರ್ಬರ ಎನ್ನುವರು**. ವಿಲಾಗ ನಿಷ್ಕೋಶ ಎಂಬ ಅಂಗಭಾಗಗಳು ಕೆಂಪಗಿರುವ, ನೀರನ್ನು ದ್ವೇಷಿಸುವ, ಪ್ರೋಹಾದಿ ಅಂಗಗಳು ಪುಷ್ಟ ವಾಗಿರುವ, ಹುಲ್ಲು ತಿನ್ನಲಾಶಿಸುವ, ಕಪ್ಪಾದ ತಾಳುಗೆಯುಳ್ಳ, ಗಟ್ಟಿಯಾದ ನಾಲ್ಕು ಹಲ್ಲುಗಳಿಂದ ಇಷ್ಟಪಡುವ ಆನೆ."[೧೪]

"ಕಾಷ್ಠ ತ್ವನುಕ್ತಸೇವನಸ್ತನುಕಚಃ ಪಂಕಾಂಬು ಪಾಂಸುಪ್ರಿಯಃ ।
ಸ್ವಲ್ಪಂ ಹೃಷ್ಯತಿ ಕೋಪಮೇತಿ ಚ ಸುಖಂ ದುಃಖಂ ಯತಂ ಬುಧ್ಯತೇ ।
ಶಬ್ದಾದೀನಪಿ ವೇತ್ತಿ ಯಂತ್ರ ವಶಗೋ ಹ್ಯುತ್ತಾನವಿತ್ ಪ್ರೋಲ್ಲಸ ।
ದ್ವಾಟಾವಗ್ರಹದಂತ ಏಷ ಕಲಭಃ ಪ್ರಾಪ್ತಃ ಸಮಾಂ ಪಂಚಮೀಮ್ ॥
(ಮಾತಂಗ. ೫–೬).

**ಐದು ವರ್ಷ ವಯಸ್ಸಿನ ಆನೆಯನ್ನು ಕಲಭ ಎಂದು ಕರೆಯುವರು**. ಆನೆಯ ಮರಿ: ಕಲಭಂ ಕರಿಶಾಬಕಂ(ಅಮರ. ೮–೫೦೧)."[೧೫]

"ಪಿಂಭೂಷ ಕರ್ಣ ಕಟ ಸೃಕ್ವ ವಿಲಾಗ ನೇತ್ರ ।
ಕೂಟಾಗ್ರ ಕರ್ಣಯುಗಲ ಪ್ರತಿಮಾನದೇಶೇ ।

ಯಃ ಸಾಂದ್ರಬಿಂದು ಸುಭಗೋ ವಲಿಹೀನವರ್ಷ್ಮಾ ।
ನೈಕಾರಿಕಂ ತಮಿಹ ಷಟ್ ಸಮಮಾ ಮನಂತಿ ॥ (ಮಾತಂಗ. ೫-೭).

**ಆರು ವರ್ಷ ವಯಸ್ಸಿನ ಆನೆಯನ್ನು ನೈಕಾರಿಕಾ ಎನ್ನುವರು.** ಪಿಂಭೂಷ ಕಿವಿ ಕಟ ಸೃಕ್ವ ವಿಲಾಗ ಕಣ್ಣು ಕೂಟಾಗ್ರ ಕರ್ಣಯುಗಳ ಮತ್ತು ಪ್ರತಿಮಾನಗಳಲ್ಲಿ ಒತ್ತಾದ ಮಚ್ಚೆಗಳಿಂದ ಚೆಲು ವಾಗಿ ಕಾಣುವಂತಹುದೂ ಸುಕ್ಕುಗಳಿಲ್ಲದುದೂ ಆದ ಆನೆ."[೧೬]

"ಘನನಖತಲ ಸಂಧಿ ಪ್ರೋಹ ಸಂದಾನ ಚಿಕ್ಕಾ ।
ಪಲಿ ಕರನಖ ಶೀರ್ಷೋ ದಂತಖಾದೀ ಸಕಂಡೂಃ ।
ಸ್ಫುಟಚರಣಜವಾವಸ್ಕಾರವಾನ್ ಸಪ್ತವರ್ಷಃ ।
ಶಿಶುರಿತಿ ಕಥಿತೋಽಸೌ ಸ್ನಿಗ್ಧದೋಃ ಪುಷ್ಕರಾಗ್ರಃ ॥ (ಮಾತಂಗ. ೫-೮).

**ಏಳು ವರ್ಷ ವಯಸ್ಸಿನ ಆನೆಯನ್ನು ಶಿಶು ಎಂದು ಕರೆಯುವರು.** ಉಗುರಿನ ಬುಡ, ಪ್ರೋಹ, ಸಂದಾನ ಮುಂತಾದ ಅಂಗಗಳು ಗಟ್ಟಿಯಾಗಿರುವ, ಹಲ್ಲು ಕಡಿಯುತ್ತ ತುರಿಸಿ ಕೊಳ್ಳುತ್ತ ಇರುವ, ಚರಣ ಜವಭಾಗ ಅವಸ್ಕಾರ ಈ ಅಂಗಗಳು ಸುವ್ಯಕ್ತವಾಗಿರುವ, ಮೃದುವಾದ ಸೊಂಡಿಲ ತುದಿಯುಳ್ಳ ಆನೆ."[೧೭]

"ಘನ ನಖತಲಸಂಧಿಃ ಕ್ಷಿಪ್ರರೋಹಿ ವ್ರಣೌಘೋ ।
ಮೃದುಮೃದುಯವಸಾಶೀ ಸಂಚಲ ದ್ದಂತಪಂಕ್ತಿಃ ।
ಚಪಲಗತಿರಜಸ್ರಂ ವರ್ಷಘರ್ಷೀ ಪ್ರಹರ್ಷೀ ।
ಪ್ರಹರಣಮೃದು ಕೋಽಸಾವಷ್ಟಮೇ ಮಜ್ಜನಾಖ್ಯಃ (ಮಾತಂಗ. ೫-೯).

**ಎಂಟು ವರ್ಷ ವಯಸ್ಸಿನ ಆನೆಯನ್ನು ಮಜ್ಜನ ಎನ್ನುವರು:** ಗಟ್ಟಿಯಾದ ಉಗುರಿನ ಬುಡವನ್ನುಳ್ಳ, ಬೇಗ ಬೆಳೆಯುವ ಗಾಯವನ್ನುಳ್ಳ, ಎಳಸೆಳಸಾದ ಹುಲ್ಲು ತಿನ್ನುವ, ಹಲ್ಲಿನ ಸಾಲನ್ನು ಆಡಿಸುತ್ತಿರುವ, ಸದಾ ಚಪಲಗತಿಯುಳ್ಳ, ಮಳೆ ನೀರಿಗೆ ಶರೀರವನ್ನೊಡ್ಡಿ ಹರ್ಷಿಸುವ, ಮೆಲ್ಲಗೆ ಹೊಡೆಯುವ ಸ್ವಭಾವವನ್ನುಳ್ಳ ಎಂಟನೆಯ ವರ್ಷದ ಆನೆ.[೧೮]

"ಶುಕ್ಲೇಕ್ಷಣಃ ಪ್ಲವತಿ ಧೇನುಮಮುಕ್ತಶುಕ್ಲಃ ।
ಸ್ನಿಗ್ಧಚ್ಛವಿಃ ಪ್ರತತದಂತಚಯಃ ಪೃಥೂರಾಃ ।
ಯೋ ರಂಧ್ರಸಂಧಿಷು ಪುನಃ ಸುದೃಢಪ್ರಹಾರೀ ।
ದಂತಾರುಣಂ ನವಸಮಾ ಪ್ರಭವಂ ವದಂತಿ । (ಮಾತಂಗ. ೫-೧೦).

**ಒಂಬತ್ತು ವರ್ಷ ವಯಸ್ಸಿನ ಆನೆಗೆ ದಂತಾರುಣ ಎನ್ನುವರು.** ಬಿಳಿಯ ಕಣ್ಣುಗಳ, ಶುಕ್ಲ

ಸುರಿಸದೆಯೇ ಹೆಣ್ಣಾನೆಯ ಮೇಲೆ ಹಾರುವ ಸ್ವಭಾವದ, ಸ್ನಿಗ್ಧಕಾಂತಿಯ, ಉದ್ದನೆಯ ದಂತಗಳ, ಹರವಾದ ಎದೆಯ ಆನೆ."[೧೯]

"**ಇಪ್ಪತ್ತು ವರ್ಷ ವಯಸ್ಸಿನ ಆನೆ**(ಮೋ.ವಿ.). ಕದುಪಿನ ವಿಕ್ಕ ಪೋತ ಕರಿಣೀ ಗಣಮಂ ನವ ಪಲ್ಲವಂಗಳಂ ಮುದದೊಳ್ ಮುನ್ನೆ ಮೇಯಿಸಿ(ಪಾರ್ಶ್ವಪು. ೪–೧೧೩; ಇಲ್ಲಿ ಬೇರೆ ಪರಿಷ್ಕರಣದಲ್ಲಿ ಚಿಕ್ಕ ಎಂದಿದ್ದು, ಇದು ಬ–ಚ ಸಾದೃಶ್ಯದಿಂದ ಆದ ಅಪಪಾಠ ವೆಂದು ಹೇಳಬೇಕು)."[೨೦]

ಗಜಗಳ ಬದುಕಿನ ವಿವಿಧ ಘಟ್ಟಗಳಲ್ಲಿ ಅವುಗಳ ಸ್ವಭಾವ ಮತ್ತು ಬೆಳವಣಿಗೆಯನ್ನು ಕುರಿತು ಮಾನಸೋಲ್ಲಾಸ ಎಂಬ ಕೃತಿಯಲ್ಲಿ ಈ ಕೆಳಕಂಡಂತೆ ಉಲ್ಲೇಖಿಸಿದ್ದಾರೆ.

**ಮೊದಲನೆಯ ಘಟ್ಟದಲ್ಲಿರುವ ಆನೆ**

"ಸಂಜಾತಶುಕ್ಲಃ ಪ್ಲವನೇ ಸ್ಥಿರಾಂಗಃ ಪ್ರಹೃಷ್ಟ ಮೇಢ್ರಃ ಸ್ಥಿರಜಾತದಂತಃ ।
ತೇಜೋ ಬಲಾಢ್ಯೋ ದಶಮೇ ಸುಖಾದೀ ಯೂಥ ಪ್ರಹರ್ಷೀ ಚ ಸ ಏವ ವಿಕ್ಕಃ॥
(ಮಾತಂಗ. ೫–೧೧);

ಹತ್ತು ವರ್ಷ ವಯಸ್ಸಿನ ಆನೆ; ವೀರ್ಯೋತ್ಪತ್ತಿ ಆಗಿರುವ, ಹೆಣ್ಣಾನೆಯ ಮೇಲೆ ಹಾರಲು ಸಮರ್ಥವಾದ ದೇಹವುಳ್ಳ, ದೃಢವಾದ ಜನನಾಂಗವನ್ನುಳ್ಳ, ಚೆನ್ನಾಗಿ ಹಲ್ಲು ಬಂದಿರುವ, ತೇಜಸ್ವಿಯೂ ಬಲಾಢ್ಯವೂ ಆದ, ನೆಮ್ಮದಿಯಾಗಿ ಮೇಯುವ, ಹಿಂಡಿ ನಲ್ಲಿರಲು ಸಂತೋಷಿಸುವ ಹತ್ತುವರ್ಷದ ಆನೆ."[೨೧]

**ಎರಡನೆಯ ಘಟ್ಟದ ಆನೆ**

"ಉತ್ಸಾಹೀ ಸ್ಫುಟಗಾತ್ರಸಂಧಿ ಸುಭಗೋ ಗರ್ಭಪ್ರದೋ ದುಃಖಭಾಕ್ ।
ಸಪ್ರೋಹಾದಿ ವಲಿರ್ಘನಪ್ರಹರಣಃ ಪೀತಾಭ ದಂತಚ್ಛವಿಃ ।
ದುರ್ಗಸ್ಥಾನರತಃ ಸುವೃತ್ತಜಘನಾವಸ್ಕಾರ ಕರ್ಣಾಂಚಲಃ ।
ಪೋತಾಖ್ಯಃ ಸ್ಮರವೇಗ ವಿಕ್ರಮಬಲೀ ಯತೋ ದ್ವಿತೀಯಾಂ ದಶಾಮ್ ॥
(ಮಾತಂಗ. ೫–೧೨); ಪೋತದ ರದನಾಗ್ರಮಂ ಪೊಳೆವ ಪುಷ್ಕರಮಂ (ಲೀಲಾವ. ೬–೭೯).

ಉತ್ಸಾಹಿಯಾದ, ಸ್ಫುಟವಾದ ಗಾತ್ರಸಂಧಿಯಿಂದ ಶೋಭಿಸುವ, ವಯಸ್ಕ ಆದ, ದುಃಖಭಾಗಿಯಾದ, ಪ್ರೋಹಾದಿ ಅಂಗ ಭಾಗಗಳನ್ನುಳ್ಳ, ಹಳದಿಯಾದ ದಂತಚ್ಛವಿಯುಳ್ಳ, ದುರ್ಗಸ್ಥಾನದಲ್ಲಿರಲು ಬಯಸುವ, ಪುಷ್ಟಜಘನ ಅವಸ್ಕಾರ ಕರ್ಣಾಂಚಲಗಳು ಇರುವ, ಕಾಮುಕ ಸ್ವಭಾವದ, ಎರಡನೆಯ ಘಟ್ಟದ ಆನೆ."[೨೨]

**ಮೂರನೆಯ ಘಟ್ಟದ ಆನೆ**

"ತತ್ತನ್ಮಾನವಿಭಕ್ತಕರ್ಣರಸನೋತ್ಸಂಗಾದಿರುದ್ಯನ್ಮದ।
ಘ್ರಾಣಃ ಸರ್ವಗುಣಾನ್ವಿತೋ ದೃಢರಣಃ ಸುಸ್ನಿಗ್ಧರೋಮಚ್ಛವಿಃ ।
ಕ್ಷೀಬಾಕ್ಷಃ ಪ್ರಿಯದರ್ಶ ನೋಽಕ್ಷವಿಲಸದ್ ವೃದ್ಧಿಃ ಸುಧೀಃ ಕೋಪನೋ।
ಹಂತಾ ಧಾತುಸಮಃ ಸ ಏವ ಜವನೋ ಯಾತಸ್ತೃತೀಯಾಂ ದಶಾಮ್ ॥
(ಮಾತಂಗ. ೫–೧೩): ಜವನ ಮೆನಿಸಿರ್ದ ನಿಜದಶೆ ಜವನನಧಃಕರಿಸೆ (ಪಾರ್ಶ್ವಪು. ೪–೧೧೦).

ಸರ್ವಗುಣಗಳಿಂದ ಕೂಡಿದ, ಯುದ್ಧದಲ್ಲಿ ದೃಢವಾಗಿ ನಿಲ್ಲುವ, ಸ್ನಿಗ್ಧವಾದ ರೋಮಕಾಂತಿಯನ್ನುಳ್ಳ, ಸೊಕ್ಕಿದ ಕಣ್ಣುಗಳ, ನೋಡಲು ಪ್ರಿಯವಾಗುವ, ಚೆಲುವಾದ ನೋಟವುಳ್ಳ, ಒಳ್ಳೆಯ ಬುದ್ಧಿಯುಳ್ಳ, ಕೆರಳುವ ಹಾಗೂ ಕೊಲ್ಲುವ ಸ್ವಭಾವದ, ಸಮಬಲದ ಆಕಾರ ಮತ್ತು ಸ್ವಭಾವಗಳನ್ನು ಪ್ರಕಟಿಸುವ ಆನೆ."[೨೩]

**ನಾಲ್ಕನೆಯ ಘಟ್ಟದಲ್ಲಿರುವ ವಯಸ್ಕ ಆನೆ**

"ಸಂದಾನಾದಿಷು ಜಾತ ಸುಸ್ಥಿರವಲಿರ್ ಗೃಹ್ಣಾತಿ ಯುಕ್ತಂ ಮದಂ ।
ನಿದ್ರಾದ್ವಿಟ್ ಪ್ರತಿದಂತಿವೈರಿ ಮನಸಾ ಭೀತೋಽನಲೇ ಧೂಪನಾತ್ ।
ಗರ್ಜನ್ನುದ್ಧತ ಗಾತ್ರರೋಮನಿಚಯೋ ಯುದ್ಧಪ್ರಯೋಗಪ್ರಿಯಃ ।
ಕಲ್ಯಾಣೋ ಹ್ಯಯಮೇವ ವಾರಣಯುವಾ ಪ್ರಾಪ್ತಶ್ಚ ತುರ್ಥೀಂ ದಶಾಮ್ ॥
(ಮಾತಂಗ. ೫–೧೪).

ಸಂದಾನಾದಿ ಅಂಗಭಾಗಗಳಲ್ಲಿ ಮದಸ್ರಾವವಾಗುವ, ನಿದ್ರಾದ್ವೇಷಿಯಾದ, ಅನ್ಯಗಜವನ್ನು ಕಂಡರೆ ಕೆರಳುವ, ಬೆಂಕಿ ಹೊಗೆಗಳಿಗೆ ಹೆದರುವ, ಘೀಂಕರಿಸುವ, ಬಲಿಷ್ಠವಾದ ದೇಹ ಹಾಗೂ ಕೂದಲ ರಾಶಿಯುಳ್ಳ, ಯುದ್ಧ ಪ್ರಯೋಗಕ್ಕೆ ತಕ್ಕುದಾದ ಆನೆ."[೨೪]

**ಐದನೆಯ ಘಟ್ಟದಲ್ಲಿರುವ ಆನೆ**

"ಸಂದಾನಪ್ರಭೃತಿಪ್ರದೇಶವಿಲಸದ್ದಾನಾವಿಲೋ ದೃಡ್ವಲೀ ।
ಸಾಂದ್ರಃ ಕರ್ಣಕಟ ಕ್ಷಯೇಷು ಸಹಜಾಮಾಯಾತಿ ಚ ಶ್ರೇಷ್ಠತಾಮ್ ।
ದ್ರಾಜ್ ಮಾದ್ಯತ್ಯನಿಮಿತ್ತಮೇವ ಮುದಿತಃ ಶೂರೌಽತಿ ಸರ್ವಂಸಹೋ।
ಯೌಧೋ ನಾಮ ಸದಾ ಮದಾವಿಲಕಟಃ ಪ್ರಾಪ್ತೋ ದಶಾಂ ಪಂಚಮೀಮ್ ॥
(ಮಾತಂಗ. ೫–೧೫).

ಸಂದಾನವೇ ಮೊದಲಾದ ಅಂಗ ಭಾಗಗಳಲ್ಲಿ ಸುರಿಯುವ ದಾನೋದಕದಿಂದ ಸುಕ್ಕುಗಟ್ಟಿದ ಚರ್ಮವುಳ್ಳ, ಕರ್ಣ ಕಟಾದಿಗಳಲ್ಲಿ ಸಹಜವಾಗಿಯೇ ಉತ್ತಮಿಕೆಯುಳ್ಳ, ಸ್ವಲ್ಪ ಸೊಕ್ಕಿನಿಂದಲೇ ಅನಿಮಿತ್ತ ಹರ್ಷವನ್ನು ಅನುಭವಿಸುವ, ಬಲಶಾಲಿಯಾದ, ಸರ್ವಂಸಹ ಆದ, ಮದಾವಿಲ ಕಟಪ್ರದೇಶವನ್ನುಳ್ಳ ಆನೆ."[೨೫]

**ಹತ್ತನೆಯ ಘಟ್ಟದಲ್ಲಿರುವ ಆನೆ**

"ವಿಸ್ರಸ್ತ ಶ್ರವಣಾಂಸ ವಾಲಧಿಕರಃ ಶೀರ್ಣಾಂಗರೋಮಾ ಚಲದ್ದಂತೋ
ಮಾಂಸಬಲಕ್ಷಯೀ ಚಲತಲಃ ಪ್ರಸ್ರಸ್ತಪಾದೋ ಲ್ಪಭುಕ್ ।
ರೂಕ್ಷಾಂಗಃ ಪಟಲೀ ಸಿರಾಚಿತತನುಃ ಕೃಚ್ಛ್ರಾಚ್ಛಕೃನ್ಮೂತ್ರಮುಕ್ ।
ತೃಷ್ಣಾಲುಃ ಕೃಮಿಜಾಲ ಭಕ್ಷಿತ ನಖೋ ವೃದ್ಧೋ ದಶಮ್ಯಾಶ್ರಿತಃ ॥

(ಮಾತಂಗ. ೫–೧೦).

ಗಜಗಳ ಬೆಳವಣಿಗೆಯ ನಂತರ ವಿವಿಧ ಘಟ್ಟಗಳಲ್ಲಿ ದೈಹಿಕ ಬೆಳವಣಿಗೆಯನ್ನು ಹೊಂದಿದ ಗಜಗಳು ಆಯಾ ವಯಸ್ಸಿನಲ್ಲಿ ಮದಗುಣವನ್ನು ಹೊಂದಿದ್ದು, ಅವುಗಳ ಮದಾವಸ್ಥೆಯ ದೋಷಗಳು, ಮದಾವಸ್ಥೆಯ ಶೋಭೆಗಳು ಹಾಗೂ ಮದಾವಸ್ಥೆಯ ಉಪಚಾರಗಳನ್ನು ಗಜಶಾಸ್ತ್ರಕಾರರು ವಿಸ್ತೃತವಾಗಿ ಚರ್ಚಿಸಿದ್ದಾರೆ."[೨೬]

**ಮದಗುಣಗಳು**

ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಸೌಗಂಧಿಕಾ ಪರಿಣಯ ಎಂಬ ಕೃತಿಯಲ್ಲಿ ಗಜಗಳ ಮದಾವಸ್ಥೆಯನ್ನು ಕುರಿತು ವಿಸ್ತೃತವಾಗಿ ವಿವರಿಸಿದ್ದಾರೆ.

**ಮದಾವಸ್ಥೆ** "ಆನೆಗಳಿಗೆ ಮದೋದಕವು ಸ್ರವಿಸುವ ಸ್ಥಳಗಳು ಎಂದರೆ ಗಂಡಸ್ಥಳವು ಕರ್ಣಗಳು ನೇತ್ರಗಳು ವಕ್ಷಸ್ಥಳವು ವೃಷಣಗಳು ಸೊಂಡಿಲು ಸ್ತನವು ಪಾದವು ಸಹಾ ಈ ಎಂಟು ಸ್ಥಾನಗಳಲ್ಲಿ ಮದವು ಸ್ರವಿಸುವುದು. ವಾಸೆಯು ನಾಗರವು ಶೀಧು ಘರ್ಮ ಮದ ಶೀಕರವು ಚಿಕ್ಕೆಯು ಮಖವು ಎಂಬುದಾಗಿ ಗಜಗಳ ಮದಕ್ಕೆ ಎಂಟು ಹೆಸರುಗಳು ಮತ್ತು ಯುದ್ಧದಲ್ಲಿ ಕೊಂಬುಗಳಿಂದ ಪ್ರಹರಿಸುವ ಕ್ರಮಗಳಂ ಪೇಳುವೆನು."[೨೭] ಎಂದು ವಿವರಿಸುತ್ತಾನೆ.

"ಪ್ರಹರಿಸುವದನ್ನರಿಯದೆ ಇರುವ ಗಜವು ಯುದ್ಧಕ್ಕೆ ಯೋಗ್ಯವಲ್ಲವಾದ್ದರಿಂದ ಶತ್ರುಗಳಂ ತಿವಿಯುವಂತೆ ಗಜಗಳಿಗೆ ಅಭ್ಯಾಸವಂ ಮಾಡಿಸಬೇಕು ಸಂಪಾತವು ಉಲ್ಲೇಖವು ಪರಿಲೇಖವು ಕರ್ತರಿಯು ತಲಘಾತವು ಪಾರ್ಶ್ವಘಾತವು ಆರಾಘಾತವು ಸೂಚಿವಂತವು ತಾಡಿತವು ಸಂಧಿತವು ಸಹಾ ಇವುಗಳು ಯುದ್ಧದಲ್ಲಿ ಕೊಂಬುಗಳ ಯುದ್ಧ ಬೇಧಗಳು.

ಇವುಗಳಲ್ಲಿ ಗಜಗಳು ಪರಸ್ಪರವಾಗಿ ಮುಖಗಳಂ ತಾಡಿಸಿದರೆ ಅದು ಸಂಪಾತವೆನಿಸಿಕೊಳ್ಳುವುದು. ಕೊಂಬುಗಳಿಂದ ಮೇಲಕ್ಕೆತ್ತಿ ಹಾಕುವುದು ಉಲ್ಲೇಖವೆನಿಸಿಕೊಳ್ಳುವುದು ಅಡ್ಡಲಾಗಿಯು ಮೇಲಕ್ಕಾಗಿಯು ದಂತಗಳಿಂದ ಎತ್ತಿ ಹಾಕುವುದು ಪರಿಲೇಖನವೆನಿಸಿಕೊಳ್ಳುವುದು. ಉಭಯಪಾರ್ಶ್ವಗಳಲ್ಲಿಯೂ ಕೊಂಬುಗಳಿಂದ ತಿವಿದರೆ ಅದು ಕರ್ತರಿಯೆನಿಸಿಕೊಳ್ಳುವುದು ಕೊಂಬುಗಳ ಮಧ್ಯಪ್ರದೇಶದಲ್ಲಿ ಮುಖದಿಂ ತಿವಿದರೆ ಅದು ತಲಾಘಾತವೆನಿಸಿಕೊಳ್ಳುವುದು. ಪಾದಮೂಲದಿಂದ ಅಡ್ಡಲಾಗಿ ತಿರಿಗಾಡೋಣವೆ ಪಾರ್ಶ್ವಘಾತವೆನಿಸಿಕೊಳ್ಳುವುದು. ಪರಸ್ಪರ ಅಭಿಮುಖಗಳಾಗಿ ಸಮೀಪದಲ್ಲಿ ಪ್ರಹರಿಸೋಣವೆ ಆರಾಘಾತವೆನಿಸಿಕೊಂಬುದು. ಸೊಂಡಿಲ ಮಧ್ಯಪ್ರದೇಶದಲ್ಲಿ ತಿವಿಯೋಣವೆ ಸೂಚಿಘಾತವೆನಿಸಿಕೊಳ್ಳುವುದು. ಪರಸ್ಪರವಾಗಿ ಕೊಂಬುಗಳಂ ಮಸಿಯೋಣದರಿಂದ ಪುಟ್ಟಿದ ಪ್ರಹಾರವು ತಾಡಿತವೆನಿಸಿಕೊಂಬುದು. ಮೇಲೆ ಮೇಲೆ ಪರಸ್ಪರವಾಗಿ ತಿವಿಯೋಣವೆ ಸಂಧಿತವೆನಿಸಿಕೊಂಬುದು."[೨೮]

**ಮದರಸ ಅಥವಾ ಹಸ್ತಿಮಜ್ಜನ**

ಮದರಸವನ್ನು ಹಿಂದಿಯಲ್ಲಿ ಮಸ್ತ್ ಎಂದು ಕರೆಯಲಾಗುತ್ತದೆ. ಸಂಸ್ಕೃತದಲ್ಲಿ ಈ ರಸವನ್ನು ಹಸ್ತಿಮಜ್ಜನವೆನ್ನಲಾಗುತ್ತದೆ. ವಯಸ್ಸಿಗೆ ಬಂದ ಆನೆಗೆ ಈ ಮದರಸವು ತಲೆಯ ಮೆಲುಕಿನ ಹತ್ತಿರದಿಂದ ಸೋರುವ ನೀರಿನಂತಿರುವ ದ್ರವವೇ ಈ ಮದರಸ. 'ಆನೆಗಳ ತಲೆ ಭಾಗದಲ್ಲಿ ಎಡ ಬಲಗಳೆರಡೂ ಕಡೆಗೆ ಕಣ್ಣು ಮತ್ತು ಕಿವಿಗಳ ಮಧ್ಯ ಇರುವ ಗ್ರಂಥಿ ಕೋಶಗಳಿಂದ ಮದವು ಒಸರುವುದು.'[೨೯] ಈ ಗ್ರಂಥಿಕೋಶದ ಸ್ವರೂಪ, ಕಾರ್ಯ ವಿಧಾನ ಮತ್ತು ಸಂಬಂಧಿಸಿದ ಪ್ರಕ್ರಿಯೆಗಳ ಕುರಿತು ವಿಜ್ಞಾನ ಲೋಕ ಯಾವ ರೀತಿಯ ವಿವರಗಳನ್ನು ನೀಡಿದೆ ಎಂಬುದು ತಿಳಿದುಬಂದಿಲ್ಲ. 'ಆನೆಗಳಲ್ಲಿ 'ಮೂವತ್ತರಿಂದ ಮೂವತ್ತೈದನೇ ವಯಸ್ಸಿನವರೆಗೆ ಆನೆಯ ಬಾಯಿಯ ನೇರದಲ್ಲಿ, ಮೇಲೆ ಕಣ್ಣಿನ ಪಕ್ಕದಲ್ಲಿರುವ ಮದ ಗ್ರಂಥಿಗಳಿಂದ ಒಂದು ಬಗೆಯ ತೀಕ್ಷ್ಣ ವಾಸನೆಯ ದ್ರವವಾಗಿ ಸೋರುತ್ತ ಮದರಸ ಕಾಣಿಸಿಕೊಳ್ಳುತ್ತದೆ. ಒಳ್ಳೆ ಆರೋಗ್ಯವಂತವಾದ ಸಲಗದಲ್ಲಿ, ಪ್ರತಿ ವರ್ಷ ಪ್ರಣಯಕಾಲವಾದ ಬೇಸಿಗೆಯ ತಿಂಗಳಲ್ಲಿ ಈ ಮದ ಉಂಟಾಗುತ್ತದೆ. ಇದು ಸುಮಾರು ಎರಡು ವಾರ ನಡೆಯಬಹುದು. ಆ ಕಾಲದಲ್ಲಿ ಆನೆಯ ಪ್ರವೃತ್ತಿ ಬಹಳ ಚಂಚಲವಾಗಿರುತ್ತದೆ.'[೩೦] ಮೂವತ್ತೈದರಿಂದ ನಲವತ್ತೈದನೇ ವಯಸ್ಸಿನವರೆಗೆ ಈ ದ್ರವದ ಸೋರುವಿಕೆಯು ಹೆಚ್ಚಾಗಿರುತ್ತದೆ. 'ಮದರಸ ಹರಿಯುತ್ತ ಆನೆಯ ಬಾಯಿ ತೊಟ್ಟಿಕ್ಕುತ್ತದೆ. ಅದರ ರುಚಿ ಆನೆಯನ್ನು ಕೆರಳಿಸಿ ಮತ್ತಷ್ಟು ಉಗ್ರವಾಗುವಂತೆ ಮಾಡುತ್ತದೆ.'[೩೧] ನಲವತ್ತೈದ

ರಿಂದ ಐವತ್ತರ ವಯಸ್ಸಿನೊಳಗೆ ಈ ಮದರಸದ ಸೋರುವಿಕೆಯು ಕ್ರಮೇಣವಾಗಿ ಕಡಿಮೆಯಾಗುತ್ತ ಅರವತ್ತರ ವಯಸ್ಸಿನ ತರುವಾಯ ಪೂರ್ಣವಾಗಿ ಸ್ಖಲನಗೊಳ್ಳುವುದು ನಿಲ್ಲುತ್ತದೆ. ಆಫ್ರಿಕಾದ ಹಾಗೂ ಏಷಿಯಾದ ಆನೆಗಳಲ್ಲಿ ಮದರಸವು ಕಂಡುಬರುವುದಾದರೂ ಅದನ್ನು ಒಸರುವ ಬಗೆಯಲ್ಲಿ ಈ ಎರಡು ಖಂಡಗಳ ಆನೆಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ ಎಂದು ಹೇಳಲಾಗುತ್ತದೆ. 'ಬಹುಶಃ ಆಫ್ರಿಕಾದ ಆನೆಗಳಲ್ಲಿ ಸಾಮಾನ್ಯ ಸ್ಥಿತಿಯನ್ನೂ ಏಷಿಯಾದ ಆನೆಗಳಲ್ಲಿ ವಿಶಿಷ್ಟ ಪ್ರಕ್ರಿಯೆ, ಅಂದರೆ ವೀರ್ಯಾಣು ಉತ್ಪಾದನೆ ಸಂಬಂಧದ ದೈಹಿಕ ಬದಲಾವಣೆಯನ್ನು ಸೂಚಿಸುವುದು.'[೩೨]

ಆಫ್ರಿಕಾದ ಆನೆಯಲ್ಲಿ ಗಂಡು ಹಾಗೂ ಹೆಣ್ಣು ಎರಡರಲ್ಲಿಯೂ ವಯಸ್ಸಿಗೆ ಬರುವ ಪೂರ್ವದಲ್ಲಿ ಮತ್ತು ವಯಸ್ಸಿಗೆ ಬಂದ ತರುವಾಯ ಈ ಮದರಸವು ಒಸರುತ್ತದೆ. 'ಹೆಣ್ಣಾನೆ ನಸೆಯಲ್ಲಿರುವಾಗ(ಪ್ರಣಯಕ್ಕೆ ಸಜ್ಜಾದಾಗ) ಗಂಡಾನೆಯು ಸಾಮಾನ್ಯವಾದುದಕ್ಕಿಂತ ಬೇರೆ ಬಗೆಯ ಮದವನ್ನು ಒಸರುವುದು.'[೩೩] ಏಷಿಯಾದ ಆನೆಗಳಲ್ಲಿ ಗಂಡಾನೆಗಳು ಮಾತ್ರ ವಯಸ್ಸಿಗೆ ಬಂದ ತರುವಾಯ ಅಂದರೆ ಹದಿನೈದು ವರ್ಷಕ್ಕೆ ಮೇಲ್ಪಟ್ಟು ಮದ ರಸವನ್ನು ಒಸರತೊಡಗುತ್ತದೆ. ಈ ಒಸರುವಿಕೆಯು ಐವತ್ತೈದು ಅರವತ್ತನೇ ವಯಸ್ಸಿನವರೆಗೆ ಮುಂದುವರಿಯುತ್ತದೆ. 'ಈ ಒಸರುವಿಕೆಯು ವರ್ಷದಲ್ಲಿ ಸರಾಸರಿ ಎರಡು ಮೂರು ತಿಂಗಳಿರುತ್ತದೆ. ಕೆಲವೊಮ್ಮೆ ನಾಲ್ಕು ತಿಂಗಳವರೆಗೆ ಮದರಸದ ಒಸರುವಿಕೆ ನಡೆಯುವುದೂ ಉಂಟು. 'ಈ ಮದದ ಒಸರುವಿಕೆಗೂ ವೃಷಣ ಕೋಶಗಳಿಂದ ಉತ್ಪತ್ತಿಯಾಗುವ ವೀರ್ಯಾಣುಗಳ ಪ್ರಮಾಣಕ್ಕೂ ಪರಸ್ಪರ ಸಂಬಂಧವಿದೆ ಎಂದು ಹೇಳಲಾಗುತ್ತದೆ. ಗಂಡಾನೆಗಳ ಮದದ ಒಸರುವಿಕೆಯು ಲೈಂಗಿಕಾವಸ್ಥೆಯನ್ನು ಸೂಚಿಸುತ್ತದೆ. ಹಾಗೆಯೇ ಹೆಣ್ಣಾನೆಗಳ ಮದದ ಒಸರುವಿಕೆಯು ಋತುವಿನ(ಬಹಿಷ್ಠೆಯಾಗುವ ಕಾಲ) ಸಮಯದಲ್ಲಿ ಮಾತ್ರ ಮದ ದ್ರವವನ್ನು ಸ್ರವಿಸುತ್ತದೆ ಎಂಬ ಅಭಿಪ್ರಾಯವೂ ಇದೆ. ಆದರೆ ಅದನ್ನು ಸ್ಪಷ್ಟಪಡಿಸುವ ನಿರ್ದಿಷ್ಟ ಕಾರಣಗಳು ಮಾತ್ರ ತಿಳಿದುಬಂದಿಲ್ಲ.

ಗಂಡಾನೆಗಳ ಮದದ್ರವದ ಸ್ರವಿಕೆಯಲ್ಲಿ ಆನೆಯಲ್ಲಿ ಉಂಟಾಗುವ ದೈಹಿಕ ಬದಲಾವಣೆಯನ್ನು ಗಜತಜ್ಞರು ಹೀಗೆ ತಿಳಿಸುತ್ತಾರೆ.

'ಗ್ರಂಥಿಕೋಶದ ಬಾಯಿಯು ಉಬ್ಬಿ ಅಗಲವಾಗುವುದು. ಮೊದಲ ಕೆಲವು ದಿನ ಸ್ರವಿಸುವ ದ್ರವವು ಸ್ವಚ್ಛವಾಗಿ ಇದ್ದು ಅದು ಕಣ್ಣೀರೆಂದು ತಪ್ಪುಕಲ್ಪನೆ ಸೃಷ್ಟಿಸುವುದುಂಟು. ಸ್ವಚ್ಛ ನೀರಿನಂತಿದ್ದ ಮದದ್ರವವು ತರುವಾಯ ಕ್ರಮೇಣ ಕಪ್ಪು ಮತ್ತು ಗಟ್ಟಿಯಾದಂತೆ

ರಾಣ್ಯದ ಗಂಡಾನೆಗಳಲ್ಲಿ ದಾಳಿ ಅಥವಾ ಆಕ್ರಮಣ ಮಾಡುವ ಸ್ವಭಾವವು ಹೆಚ್ಚುತ್ತದೆ'[೩೪] ಗಂಡಾನೆಗಳು ಕೋಪೋದ್ರೇಕದಲ್ಲಿದ್ದಾಗ ಈ ಮದದ್ರವದ ಸ್ರವಿಸಿಕೆಯು ಹೆಚ್ಚುವುದನ್ನು ಕಂಡವರಿದ್ದಾರೆ. ಈ ದ್ರವದ ರುಚಿಯು ಅತಿ ಕಾರ ಹಾಗೂ ಕಹಿಯುಕ್ತವಾಗಿರುತ್ತದೆಂದು ಹಾಗೂ ಸಹಿಸಿಕೊಳ್ಳಲು ಸಾಧ್ಯವಾಗದಷ್ಟು ಘಾಟಿನಿಂದ ಕೂಡಿರುತ್ತದೆ ಎಂದು ಹೇಳಲಾಗುತ್ತದೆ. 'ಆನೆಗಳಲ್ಲಿ ಮದದ್ರವದ ಸ್ರವಿಸುವಿಕೆಯ ಪೂರ್ವದಲ್ಲಿ ಸುಮಾರು ನಲವತ್ತು ದಿನಗಳ ಮೊದಲು ಆನೆಯ ಸ್ವಭಾವದಲ್ಲಿ ಬದಲಾವಣೆ ಕಂಡು ಬರುವುದು.'[೩೫] ಸ್ಯಾಂಡರ್‌ಸನ್ ಪ್ರಕಾರ ಮದಾವಸ್ಥೆಯಲ್ಲಿರುವ ಆನೆಗಳು ಹಲವು ಸಲ ಸ್ಪಷ್ಟವಾಗಿ ಆಲಸ್ಯವನ್ನು ತೋರುವವು. ಈ ಆಲಸ್ಯವು ಚಲನವಲನ ನಿಂತಾಗ ಇಲ್ಲವೇ ನಿಧಾನವಾದ ನಡಿಗೆಯ ರೂಪದಲ್ಲಿ ಕಾಣುತ್ತದೆ. ಕೋರೆ ಆನೆಗಳಲ್ಲಿ ಮದದ ಅವಸ್ಥೆಯನ್ನು ಅರ್ಧ ಕುಡಿದ ಸ್ಥಿತಿಗೆ ಹೋಲಿಸಬಹುದು. ಮನುಷ್ಯನಲ್ಲಿ ಮಾದಕ ಪಾನೀಯ ಕುಡಿತವು ಬಯಕೆಯನ್ನು ಕೆರಳಿಸುವಂತೆ ಮದವು ಆನೆಗಳಲ್ಲಿ ಬಯಕೆಯನ್ನು ಕೆರಳಿಸುವುದು.'[೩೬] ಸಾಮಾನ್ಯವಾಗಿ ಮದಾವಸ್ಥೆಯಲ್ಲಿರುವ ಕೋರೆ ಆನೆಗಳು ನದಿ ದಡ ಅಥವಾ ನೀರಿನ ಪಸೆ ಇರುವ ಸ್ಥಳದಲ್ಲಿ ತಮ್ಮ ಕೋರೆಗಳಿಂದ ಮಣ್ಣನ್ನು ಬಗೆಯುತ್ತವೆ. 'ಭೂಮಿಯನ್ನು ತಿವಿದು ಅಗೆಯುವ ಕೆಲಸವನ್ನು ಆನೆಯು ಕೋಪಾವೇಶದಲ್ಲಿ ಮಾಡಿದುದಲ್ಲ. ತಿವಿದ ಒತ್ತಡದಿಂದ ಕಪೋಲದಲ್ಲಿದ್ದ ಉಬ್ಬಿದ ಗ್ರಂಥಿಗಳಿಂದ ಮದವು ಧಾರಾಕಾರವಾಗಿ ಹರಿಯುವಂತೆ ಮಾಡಲು ನಡೆಸುವ ಈ ತಂತ್ರ ಸಹಜ ಪ್ರವೃತ್ತಿಯಿಂದ ಬಂದುದಾಗಿದೆ'[೩೭] ಎಂದು ಹೇಳಲಾಗುತ್ತದೆ. ಆನೆ ಪಳಗಿಸುವವರಲ್ಲಿ ಕೆಲವರು ಈ ಸ್ರವಿಸುವಿಕೆಯನ್ನು ಮೈಲಿಗೆ ಎಂದು ಕರೆದ ಉದಾಹರಣೆಗಳೂ ಇವೆ. ಮಹಿಳೆಯರು ಬಹಿಷ್ಠೆಯಾದಾಗ ಮೈಲಿಗೆ ಉಂಟಾಗುತ್ತದೆಂದು ಭಾವಿಸುವ ಮನುಷ್ಯರು ಆನೆಯೊಳಗೆ ನಡೆಯುವ ಈ ಕ್ರಿಯೆಯನ್ನೂ ಮೈಲಿಗೆ ಎಂದು ಭಾವಿಸಿದಂತೆ ಕಾಣುತ್ತದೆ. ಒಟ್ಟಾರೆಯಾಗಿ ಮದದ್ರವ ಅಥವಾ ಮದದರಸದ ಸ್ರವಿಕೆಯ ಕುರಿತು ಮನುಷ್ಯನಲ್ಲಿ ಹಲವು ಊಹಾಪೋಹಗಳಿದ್ದರೂ ಆನೆಗಳ ದೈಹಿಕ ಸ್ಥಿತಿಯಲ್ಲಿ ಉಂಟಾಗುವ ಒಂದು ಜೈವಿಕ ಕ್ರಿಯೆ ಇದಾಗಿದೆ ಎಂದು ಹೇಳಬಹುದು.

**ಗಜಗಳ ಮದಾವಸ್ಥೆಯ ಹಂತಗಳು**

"ಪ್ರಹರ್ಷಂ ಶೀಘ್ರತಾ ಗಂಧೋ ಗತಿರ್ದೇಹಸ್ಯ ಗಂಧತಾ ।
ಕ್ರೋಧೋ ವೀರ್ಯಮಭೀರುತ್ವಂ ಅಷ್ಟೌ ಮದಗುಣಾಃ ಸ್ಮೃತಾ ॥
(ಮಾತಂಗ. ೯-೬).

**ಆನೆಯ ಮದಾವಸ್ಥೆಯನ್ನು ದ್ಯೋತಿಸುವ ೮ ಗುಣಗಳು:** ಪ್ರಹರ್ಷ, ಶೀಘ್ರತಾ, ಗಂಧ, ಗತಿ, ದೇಹದ ಗಂಧತೆ, ಕ್ರೋಧ, ವೀರ್ಯ, ಅಭೀರುತ್ವ"[೩೮] ಇವು ಗಜಗಳ ದೈಹಿಕ ಸ್ಥಿತಿಯಲ್ಲಿ ಉಂಟಾಗುವ ಜೈವಿಕ ಕ್ರಿಯೆಯಾದ್ದರಿಂದ ಮದಾವಸ್ಥೆಯ ಎಂಟು ಹಂತಗಳು. ಮದಗಳ ಗುಣಗಳು ಮದಾವಸ್ಥೆಯ ಘಟ್ಟಗಳನ್ನು ಗಜಶಾಸ್ತ್ರ ಶಬ್ದಕೋಶ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

**ಮದ ಪರ್ಯಾಯಶಬ್ದ**

"ಕಟಾತ್ ಸ್ರುತೋ ಭವೇದ್ದಾನಂ ಸೀಧುರ್ನೇತ್ರಸ್ರುತೋ ಮದಃ।

ಕೋಶಸ್ರುತೋ ಜ್ಞೇಯಃ ಸೀಕರಂ ಚ ಕರಸ್ರುತಂ

(ಯಶಸ್ತಿ. ಟೀ ೩-೪೯೫) (ಅಲ್ಲದೆ ನೋಡಿ: ಶಿವತ. ೭-೧೧-೨೦೪).

**ಆನೆಯ ೮ ಪ್ರಕಾರದ ಮದಗಳು:** ಉಗುವೆಂಟುಂ ಮದಧಾರೆ ಬಲ್ಸರಿಗಳಂ (ಪಂಪರಾ. ೧೩-೭೬); ದಾನ(ಕಂಕುಳು), ಸೀಧು(ಕಣ್ಣುಗಳು), ಸಾಗರ(ಕಿವಿಗಳು), ಶೀಕರ(ಸೊಂಡಿಲ ತುದಿ), ಶಿಕ್ಯ(ಸ್ತನಾಗ್ರ), ಮದ(ಮೇಹನ), ಘರ್ಮ(ಹೃದಯ), ಮೇಘ (ಚರಣಗಳು) (ಶಬ್ದರ. ೮೪೦), ನಾಲ್ಕು ಪ್ರಕಾರದ ಆನೆಯ ಮದಗಳು: ದಾನ(ಕಟ), ಸೀಧು(ನೇತ್ರ), ಮದ(ಕೋಶ), ಸೀಕರ(ಕರ)."[೩೯]

**ಮದಾವಸ್ಥೆ**

"ಪಾಂಸುಕ್ರೀಡನ ಲೋಲಸ್ಸ್ಯಾದ ಕಾಲೇ ಧ್ಯಾನತತ್ಪರಃ ಪ್ರಥಮಾ ತಾಂ ಮದಾವಸ್ಥಾಂ

ಪ್ರಾಪ್ತಃ ಸ ವಿತ್ತಿನಾಮ ಕಾಮ್... ಏವಂ ನಿರಂಕುಶೋ ಯಸ್ಯಾಮವಸ್ಥಾ ಸಾತಿವರ್ತಿನೀ ॥ (ಗಜಶಾ. ೧೦-೮೩ ೧೦೩).

**ಆನೆಯ ಮದದ ಅವಸ್ಥೆಯ ಏಳು ಘಟ್ಟಗಳು:** ವಿತ್ತಿ, ಕೋಪಾವಸ್ಥಾ(ತಿಲಕಿತ, ನಿರ್ಭಯಾ, ದಾನವಾನ್, ದೂಷಿತಾ), ಅಧೋನುಬಂಧಿನೀ, ಆರೂಢ ವಶಾನುಗ, ಕ್ರೋಧಿನೀ, ಚಲಿತಾ, ಅತಿವರ್ತಿನೀ."[೪೦]

"ಸಂಜಾತತಿಲಕಾ ಪೂರ್ವಾ ದ್ವಿತೀಯಾರ್ದ್ರ ಕಪೋಲಿಕಾ ।

ತೃತೀಯಧೋನಿಬದ್ಧಾ ತು ಚತುರ್ಥೀ ಗಂಧಚಾರಿಣೀ ॥

ಪಂಚಮೀ ಕ್ರೋಧಿನೀ ಜ್ಞೇಯಾ ಷಷ್ಠೀ ಚೈವ ಪ್ರವರ್ತಿಕಾ ।

ಸ್ಯಾತ್ಸಂಭಿನ್ನಕಪೋಲಾಶ್ಚ ಸಪ್ತಮೀ ಸರ್ವಕಾಲಿಕಾ ॥

ಪ್ರಾಹುಃ ಸಪ್ತಮದಾವಸ್ಥಾಃ ಮದವಿಜ್ಞಾನಕೋವಿದಾಃ ।

(ಯಶಸ್ತಿ. ಟೀ ೪೯೪-೪೯೫); ಸಂ[ಜಾ]ತತಿಲಕಿತ, [ಆರ್ದ್ರ] ಕಪೋಳಿ[ಕ], ಅಧೋನಿಬಂಧಿನಿ, [ಗಂಧಚಾರಿಣಿ], ಕ್ರೋಧಿನಿ, [ಅತಿವರ್ತಿನಿ, ಸಂಭಿನ್ನಮದಮರ್ಯಾದೆ] ಎಂಬ ಸಪ್ತಾವಸ್ಥೆಯ ಮದದಿಂ (ನಂಬಿರ. ೨-೨೦)."[೪೧]

"ವಲ್ಮೀಕ ಸ್ಥಾಣು ಗುಲ್ಮ ಕ್ಷುಪ ತರುಮಥನಃ ಸ್ವೇಚ್ಛಯಾ ಹೃಷ್ಟದೃಷ್ಟಿಃ ।
ಯತ್ರಾನು ಲೋಮಃ ತ್ವರಿತಪದಗತಿಃ ವಕ್ತ್ರಮುನ್ನಾಮ್ಯಚೋಚ್ಚೈಃ ।
ಕಕ್ಷ್ಯಾಸನ್ನಾಹ ಕಾಲೇ ಜನಯತಿ ಚ ಮುಹುಃ ಶೀಕರಂ ಬೃಂಹಿತಂ ವಾ ।
ತತ್ಕಾಲಂ ವಾ ಮದಾಪ್ತಿರ್ಜಯ ಕೃದಥ ರದಂ ವೇಷ್ಟಯನ್ ದಕ್ಷಿಣಂ ಚ ।
(ಮಾತಂಗ. ೯-೧೦).

**ಮೊದಲನೆಯ ಮದಗುಣವನ್ನು ಹೊಂದಿರುವ ಆನೆಯ ಅವಸ್ಥೆ:** ಸ್ವೇಚ್ಛೆ ಹರ್ಷದೃಷ್ಟಿಗಳಿಂದ ಹುತ್ತ, ಮೋಟುಮರ, ಹೊದರು ಗಿಡಮರಗಳನ್ನೆಲ್ಲ ಕಿತ್ತು ಬಿಸುಡುವ, ಮುಖವನ್ನು ಮೇಲೆತ್ತಿ ಶೀಘ್ರವಾಗಿ ಮುಂದೆ ಹೆಜ್ಜೆ ಹಾಕುವ, ತೊಗಲ ಪಟ್ಟಿಯನ್ನು ಅಳವಡಿಸುವ ಕಾಲದಲ್ಲಿ ಘೀಳಿಡುವ, ಬಲಬದಿಯ ದಂತವನ್ನು ತಿಕ್ಕುವ ಆನೆ."[೪೨] ಈ ಮದಗುಣ ಹೊಂದಿರುವ ಆನೆಯ ಅವಸ್ಥೆಯನ್ನು **ಪ್ರಹರ್ಷ** ಎಂದು ಕರೆಯುತ್ತಾರೆ.

"ಸ್ಖಲಿತ ಗತಿರಕಸ್ಮಾತ್ ಸ್ರಸ್ತಕಂಠೋತಿದೀನಃ ।
ಶ್ವಸತಿ ಮೃದು ಸುದೀರ್ಘಂ ನ್ಯಸ್ತಹಸ್ತಃ ಪೃಥಿವ್ಯಾಂ ।
ದ್ರುತಮುಕುಲಿತದೃಷ್ಟಿಃ ಸ್ವಪ್ನಶೀಲೋಽಲಸಾಂಗಃ ।
ಭಯಕೃದ ಮಿತಭಕ್ಷೀ ನೈಕಶೋ ಮೂತ್ರಕೃಚ್ಛ ॥ (ಮಾತಂಗ. ೯-೧೧).

**ಆನೆಯ ಎರಡನೆಯ ಮದಗುಣ:** ಸ್ಖಲಿತಗತಿಯ, ಕುಸಿದ ಕುತ್ತಿಗೆಯ, ಅತಿದೀನವಾದ, ಮೆಲ್ಲಗೆ ನಿಟ್ಟುಸಿರಿಡುವ, ನೆಲಕ್ಕೆ ಸೊಂಡಿಲಿಳಿಸಿದ, ನಸುತೆರೆದ ನೋಟದ, ಸ್ವಪ್ನಶೀಲವಾದ, ಅಲಸಾಂಗದ, ಭಯವುಂಟುಮಾಡುವ, ಹೆಚ್ಚು ತಿನ್ನುವ, ಪದೇ ಪದೇ ಮೂತ್ರ ವಿಸರ್ಜನೆ ಮಾಡುವ ಆನೆಯ ಅವಸ್ಥೆ."[೪೩] ಈ ಮದಗುಣ ಹೊಂದಿರುವ ಆನೆಯ ಅವಸ್ಥೆಯನ್ನು **ಶೀಘ್ರತಾ** ಎಂದು ಕರೆಯುತ್ತಾರೆ.

"ಮಧುರುಚಿ ನಖದಂತಪ್ರೇಕ್ಷಣೋ ನೀಲಮೇಘಚ್ಛವಿ ।
ರರುಣದೃಗಂತಃ ಪದ್ಮಕಿಂಜಲ್ಕ ಬಿಂದುಃ।
ಅಪರಗಜವಿರೋಧೀ ಪಾಂಸುಪಾಥೋ ವಿಹಾರ್ಯೈ।
ರ್ಭವತಿ ಚ ಕಟ ಪೂರ್ಣಃ ಸುಂದರೋ ವಾರಣೇಂದ್ರಃ ॥ (ಮಾತಂಗ. ೯-೧೨).

**ಗಂಧ ಎಂಬ ಮೂರನೆಯ ಮದಗುಣವನ್ನುಳ್ಳ ಆನೆಯ ಅವಸ್ಥೆ:** ಕಟ ಪೂರ್ಣಾ ಎಂಬ ಜಾತಿಯ ಮದ್ದಾನೆಯ ಮೊದಲ ಮದಾವಸ್ಥೆ; ಜೇನು ಕಾಂತಿಯ ನಖದಂತನೇತ್ರಗಳನ್ನುಳ್ಳ, ನೀಲಮೇಘಚ್ಛವಿಯ, ಕೆಂಪಾದ ಕಡೆಗಣ್ಣುಳ್ಳ, ಪದ್ಮಕಿಂಜಲ್ಕದಂತಹ ಚಿಬ್ಬನ್ನುಳ್ಳ, ಅನ್ಯಗಜವನ್ನು ದ್ವೇಷಿಸುವ, ದೂಳುಮಣ್ಣಿನಲ್ಲಿ ವಿಹರಿಸುವ, ಕಟಪೂರ್ಣವೆಂಬ ಜಾತಿಯ ಮದ್ದಾನೆಯ ಮೊದಲ ಮದಾವಸ್ಥೆ."[೪೪] ಈ ಮದಗುಣ ಹೊಂದಿರುವ ಆನೆಯ ಅವಸ್ಥೆಯನ್ನು **ಪೂರ್ಣಕಟತಾ** ಎಂದು ಕರೆಯುತ್ತಾರೆ.

"ತಿರ್ಯಕ್ತಿ ರ್ಯಜ್ಞಯ ನಮುಸಕೃತ್ ಪಕ್ಷಯೋರ್ವಿಕ್ಷಮಾಣೋ ।
ಬಿಂದುಂ ಬಿಂದುಂ ವಿಸೃಜತಿಂ ಮದಂ ಕೋಶದಂಡೇನ ನಾಗಃ ।
ಪಶ್ಚಾದ್ ಗಂತುಂ ವ್ಯವಸ್ಥಿತಮನಾ ಬೃಂಹತೇ ಭೂರಿದಾನಃ ।
ಸ್ತಂಭದ್ವೇಷೀ ಚತುರಗಮನೋ ಲಕ್ಷ್ಯತೇ ಯೋಽನಿಬಂಧಾತ್ ॥ (ಮಾತಂಗ. ೯–೧೪).

**ಭೂರಿದಾನವೆಂಬ ಮೂರನೆಯ ಮದದ ಅವಸ್ಥೆ:** ಈ ಅವಸ್ಥೆಯಲ್ಲಿರುವ ಆನೆಯ ಸ್ಥಿತಿ ಎಂದರೆ: ಕಣ್ಣುಗಳನ್ನು ಪದೇ ಪದೇ ಅತ್ತಿತ್ತ ಹೊರಳಿಸುತ್ತದೆ; ಓರೆನೋಟದಲ್ಲಿ ನೋಡುತ್ತದೆ; ಕೋಶದಂಡದಿಂದ ಹನಿಹನಿಯಾಗಿ ಮದವನ್ನು ಸ್ರವಿಸುತ್ತದೆ; ಮುಂದೆ ಸಾಗಲು ಇಚ್ಛೆಯುಳ್ಳುದಾಗಿ ಜೋರಾಗಿ ಘೀಳಿಡುತ್ತದೆ; ಆಲಾನಸ್ತಂಭವನ್ನು ದ್ವೇಷಿಸುತ್ತದೆ; ನಿರ್ಬಂಧವಿಲ್ಲದೆ ಧಾವಿಸುತ್ತದೆ."[೪೫] ಈ ಮದಗುಣ ಹೊಂದಿರುವ ಆನೆಯ ಅವಸ್ಥೆಯನ್ನು **ಅನಿಬಂಧಾ** ಎಂದು ಕರೆಯುತ್ತಾರೆ.

ನಂದನಂತರ ದೊಳುದ್ಯನ್ಮಾಲತೀಗಂಧಮಂ ।
ಮದಗಂಧಂ ಗೆಲೆ [ಗಂಧ] ಚಾರಿಣಿಯಿಂ...
(ಪಾರ್ಶ್ವಪು. ೪–೧೨೭: ಮದರಾಸು ವಿ.ವಿ.ದ ಪರಿಷ್ಕರಣದಲ್ಲಿ ಗಂಧಚಾರಿಣಿ ಎಂಬುದನ್ನು ಮೂಲಪಾಠವಾಗಿಯೇ ಗುರುತಿಸಿದೆ).

**ಆನೆಯ ನಾಲ್ಕನೆಯ ಮದಾವಸ್ಥೆ:** ನೋ. ಗಂಧಚರಾ."[೪೬] ಈ ಮದಗುಣ ಹೊಂದಿರುವ ಆನೆಯ ಅವಸ್ಥೆಯನ್ನು **ಗಂಧಚಾರಿಣಿ** ಎಂದು ಕರೆಯುತ್ತಾರೆ.

"ಧಾರಾಲದಾನಜಲಧೌತಕಪೋಲಭಾಗಃ ।
ಸಂವರ್ತ್ತಮೇಘ ಸದೃಶಸ್ತನಿತಾಭಿ ಪೂರ್ಣಃ ।
ದೂರಸ್ಥಿತಾನಪಿ ನಿಹಂತುಮನಾಃ ಪ್ರಧಾವ ।
ನ್ನುಕ್ತೋ ಗಜಾಧಿಪತಿರಾರ್ದ್ರ ಕಪೋಲಿತೋ ಯಃ ॥ (ಮಾತಂಗ. ೯–೧೩).

ಒಂದೇ ಸಮನೆ ಸುರಿಯುವ ಸಂವರ್ತಕಮೇಘದ ಹಾಗೆ ಸ್ವಲ್ಪವೇ ನೀರಾಗಿರುವ ಮದಜಲದಿಂದ ಒದ್ದೆಯಾಗಿರುವ ಕಪೋಲಭಾಗವನ್ನುಳ್ಳ, ದೂರ ಸ್ಥಿತರನ್ನು ಕೊಲ್ಲುವ ಇಚ್ಛೆಯಿಂದ ಓಡಿ ಬರುತ್ತಿರುವ ಆನೆ; ಗತಿ ಎಂಬ ನಾಲ್ಕನೆಯ ಮದಗುಣವನ್ನು ಹೊಂದಿದ ಆನೆ. ಅರ್ದ್ರಕಪೋಲತಾ ಎಂಬ ಮದಾವಸ್ಥೆಯ ಆನೆ."[೪೭]

"ಅಭಿಲಷತಿ ನಗರ್ಯಾಮನ್ನಪಾನಂ ಚ ಚಾಟೂನ್ ।
ನಿಶಿ ಚ ತಮಸಿ ತಿಷ್ಠೇದ ಪ್ರಗೃಹ್ಯೋ ನಿಯಂತುಃ ।
ಕರಿ ತುರಗ ಪದಾತೀನ್ ಪ್ರಾಪ್ಯ ಕಿಂಚಿನ್ನ ಮುಂಚೇದ್ ।
ಗುಣಿತರುಷಮುಪೇತಃ ಕ್ರೋಧನೀ ಕುಂಜರೇಂದ್ರಃ ॥ (ಮಾತಂಗ. ೯–೧೬).

**ಆನೆಯ ಐದನೆಯ ಮದಾವಸ್ಥೆ:** ನಗರದಲ್ಲಿ ಅನ್ನಪಾನಗಳನ್ನೂ ಚಾಟೂಕ್ತಿಗಳನ್ನೂ ಇಷ್ಟಪಡುವ, ರಾತ್ರಿ ಮತ್ತು ಕತ್ತಲೆಗಳಲ್ಲಿ ನಿಲ್ಲುತ್ತ, ಮಾವುತನಿಂದ ಅಂಕೆಗೆ ತರಲಾಗದ, ಅನ್ಯ ಕರಿ ತುರಗ ಪದಾತಿಗಳನ್ನು ಸಮೀಪಿಸಿ ಅತಿಸಿಟ್ಟಿನಿಂದ ಗಾಸಿಗೊಳಿಸುವ ಅವಸ್ಥೆಯ ಆನೆ."[೪೮] ಈ ಮದಗುಣ ಹೊಂದಿರುವ ಆನೆಯ ಅವಸ್ಥೆಯನ್ನು **ಕ್ರೋಧನೀ** ಎಂದು ಕರೆಯುತ್ತಾರೆ.

"ಸಪ್ತಚ್ಛದಾಂಭೋಜಸಮಾನ ಗಂಧಃ ಕ್ರುದ್ಧಃ ಸದಾ ಕುಂಕಮವರ್ಣದಾನಃ ।
ಆಚೋದಿತೋ ಹಸ್ತಿರಥಾಶ್ವ ಸಂಘಾನ್ನಾ ಸಾದಿತೋ ಗಂಧಚರಾಮವಸ್ಥಾಮ್ ॥
(ಮಾತಂಗ. ೯–೧೫).

**ಆನೆಯ ಗಂಧತಾ ಎಂಬ ಐದನೆಯ ಮದಗುಣವನ್ನು ಹೊಂದಿರುವ ಆನೆ;** ಏಳೆಲೆಬಾಳೆ ತಾವರೆಗಳಿಗೆ ಸಮಾನವಾದ ಪರಿಮಳವನ್ನುಳ್ಳ, ಸದಾ ಕೋಪದಿಂದಿರುವ, ಕೆಂಬಣ್ಣದ ಮದಜಲವನ್ನು ಸ್ರವಿಸುವ, ಆನೆ ರಥ ಕುದುರೆಗಳ ಸಮೂಹದೊಂದಿಗೆ ಕೂಡಿಕೊಂಡಿರುವ ಆನೆ."[೪೯] ಈ ಮದಗುಣ ಹೊಂದಿರುವ ಆನೆಯ ಅವಸ್ಥೆಯನ್ನು **ಗಂಧಚರಾ** ಎಂದು ಕರೆಯುತ್ತಾರೆ.

"ಅತಿಕ್ರಾಂತಾವಸ್ಥೋ ಗಜಪತಿರಿದಂ ಸ್ಥಾವರಚರಂ ।
ಜಗತ್‌ಸರ್ವಂ ಹಂತುಂ ಸಮಭಿಲಷತಿ ಕ್ರೋಧಕಲುಷಃ ।
ನ ಚೈಕತ್ರ ಸ್ಥಾಯೀ ಪರಕರಟಿಘಂಟಾಂ ನ ಸಹತೇ ।
ನಿಜಚ್ಛಾಯಾದ್ವೇಷೀ ಭವತಿ ಸತತಂ ಧಾವನಪರಃ॥ (ಮಾತಂಗ. ೯–೧೭).

**ವೀರ್ಯವೆಂಬ ಏಳನೆಯ ಮದಗುಣವನ್ನು ಹೊಂದಿರುವ ಆನೆಯ ಅವಸ್ಥೆ:** ಈ ಅವಸ್ಥೆಯ ಆನೆಯ ಲಕ್ಷಣವೆಂದರೆ: ಸ್ಥಾವರಚರರೂಪವಾದ ಸರ್ವ ಜಗತ್ತನ್ನೂ ನಾಶ

ಪಡಿಸಲು ಅಪೇಕ್ಷಿಸುವಂತಹುದು; ತನ್ನ ಕೋಪದಿಂದ ಕೆರಳಿರುವಂತಹುದು; ಒಂದೇ ಕಡೆ ಎಲ್ಲಿಯೂ ನಿಲ್ಲದಿರುವಂತಹುದು; ಬೇರೆ ಆನೆಯ ಘಂಟೆಯ ಸದ್ದನ್ನು ಕೇಳದಿರುವಂತಹುದು; ತನ್ನ ನೆರಳನ್ನು ಸಹ ದ್ವೇಷಿಸುತ್ತ ಯಾವಾಗಲೂ ಓಡುತ್ತಲೇ ಇರುವಂತಹುದು."[೫೦] ಈ ಮದಗುಣ ಹೊಂದಿರುವ ಆನೆಯ ಅವಸ್ಥೆಯನ್ನು **ಅತಿಕ್ರಾಂತಾ** ಎಂದು ಕರೆಯುತ್ತಾರೆ.

"ನಿವೃತ್ತಮದಸಂಚಯೋ ವಿಗತವೇಗ ಕೋಪೋದ್ಧೃತಿಃ ।
ಪ್ರವೃತ್ತಮೃದುಗಾತ್ರ ಸಂಚರಣಕೇಳಿ ಭಾಸ್ವದ್ವಪುಃ ।
ವಿಮುಕ್ತಗಜಮತ್ಸರೋ ಮದನಿರ್ವತನೇ ಹ್ರಾಸನೇ ।
ಪಯೋದ ಇವ ರಾಜತೇ ಪರಿವಿಮುಕ್ತತೋಯಾಗಮಃ ॥ (ಮಾತಂಗ. ೯–೧೮).

**ಆನೆಯ ಕೊನೆಯ ಮದಾವಸ್ಥೆ:** ಅಭೀರುತ್ವ ಎಂಬ ಎಂಟನೆಯ ಮದಗುಣವನ್ನು ಹೊಂದಿರುವ ಆನೆಯ ಅವಸ್ಥೆ; ಮದಸಂಗ್ರಹವನ್ನು ಕಳೆದುಕೊಂಡಿರುವ, ವಿಗತವೇಗವೂ ಕ್ರೋಧಯುಕ್ತವೂ ಆಗಿರುವ, ಶರೀರಮಾರ್ದವವಿರುವ, ಕ್ರೀಡಾಲೋಲವಾದ, ಸುಂದರಾಂಗವಾದ, ಅನ್ಯಗಜಗಳೊಂದಿಗೆ ನಿರ್ಮತ್ಸರವಾಗಿರುವ, ನೀರಿಲ್ಲದ ಮೋಡದಂತೆ ವಿರಾಜಿಸುವ ಆನೆಯ ಅವಸ್ಥೆ."[೫೧] ಈ ಮದಗುಣ ಹೊಂದಿರುವ ಆನೆಯ ಅವಸ್ಥೆಯನ್ನು **ಹ್ರಾಸನಾ** ಎಂದು ಕರೆಯುತ್ತಾರೆ.

**ಮದಾವಸ್ಥೆಯ ದೋಷಗಳು**

"ನಿದ್ರಾ ನಿಘಾತೋ ಮೃಕ್ತಾ ಗ್ರಾಸದ್ವೇಷೋ ಬಲಕ್ಷಯಃ ।
ಮೂಢತಾ ಚಾಭಿವರ್ತಿತ್ವಂ ಷಡ್ದೋಷಾಃ ಕೀರ್ತಿತಾಃ ಮದೇ ॥
(ಯಶಸ್ತಿ. ಟೀ. ೩–೪೯೫).

ನಿದ್ರಾಹೀನತೆ, ಮೃಕ್ತಾ, ಆಹಾರದ್ವೇಷ, ಬಲಕ್ಷಯ, ಮೂಢತೆ, ಅಭಿವರ್ತಿತ್ವ"[೫೨] ಇವು ಆನೆಯ ಆರು ಪ್ರಮುಖ ಮದದೋಷಗಳಾಗಿವೆ.

**ಮದಾವಸ್ಥೆಯ ಶೋಭೆಗಳು**

"ಈಷದ್ವ್ಯಕ್ತಿಂ ಸಮಾಯಾತಿ ಪ್ರತ್ಯಹಂ ವರ್ಧತೇ ಕ್ರಮಾತ್ ।
ಸುಚ್ಛಾಯಾ ರಕ್ತವೃತ್ತಾ ಚ ಸಂಘಾತರುಧಿರಾ ಮತಾ ॥...
ನಿಮಗ್ನಃ ಷಷ್ಠವಂಶಶ್ಚ ಕದಳ್ಯುತ್ತಾನಪತ್ರವತ್ ।
ಯತ್ರ ಸಾ ದ್ರೋಣಿಕಾ ನಾಮ ಶೋಭೇಯಂ ಸಪ್ತಮೀ ಮತಾ ॥
(ಗಜಶಾ. ೧೦–೭೩–೮೨).

ಸಂಘಾತರುಧಿರ, ಪ್ರತಿಚ್ಛನ್ನಾ, ಪಕ್ಷಲೇಪಿನೀ, ಧಾತು ಸಾಮ್ಯಾಂಶಕಾ, ಸಮಕಕ್ಷಾ, ಚಲಿತಾ, ದ್ರೋಣಿಕಾ."[೫೩] ಇವು ಆನೆಯ ಏಳು ಪ್ರಮುಖ ಮದಾವಸ್ಥೆಯ ಶೋಭೆಗಳಾಗಿವೆ.

**ಮದಾವಸ್ಥೆಯ ಉಪಚಾರಗಳು**

"ಬೃಂಹಣ್ಯೈಃ ಕಬಳೈರ್ವೃಷ್ಯೈಸ್ತಥಾ ಸಂಚಯಕಾರಕೈಃ ॥
ವಿಸ್ತಾರಕಾರಕೈಶ್ಚಾನ್ಯೈರ್ಮುಖವರ್ಧನಕೈರಪಿ ।
ಕರವೃದ್ಧಿಕರೈ ರ್ಯೋಗ್ಯೈಃ ಕಟವೃದ್ಧಿಕರೈರಪಿ ॥
ಪ್ರಭೇದನೈರ್ಬಂಧನೈಶ್ಚ ಗಂಧವರ್ಣಕರೈಸ್ತಥಾ ।
ದೋಷೋತ್ಪಾದನಕೈಃ ಪಿಂಡೈರ್ಜಾತಿ ಧಾತ್ವನುಸಾರತಃ॥
ಗಜಾನುಪರಚರೇದ್ರಾಜಾ ಪ್ರಯತ್ನಾದನ್ನಪಾನಕೈಃ ॥
(ಗಜಶಾ. ಅನು. ಪು ೧೫೪, ಪ. ೧೨–೧೫).

ಪುಷ್ಟಿಗೊಳಿಸುವುದು; ವೀರ್ಯವೃದ್ಧಿಕಾರಕವಾದ ಆಹಾರದ ತುತ್ತು ಕೊಡುವುದು; ದೃಢಗೊಳಿಸುವ, ಬೆಳವಣಿಗೆಯುಂಟುಮಾಡುವ, ಮುಖವನ್ನು ಅಗಲಗೊಳಿಸುವ, ಸೊಂಡಿಲನ್ನು ನಿಡಿದುಮಾಡುವ, ಕಟವಾಯಿಯನ್ನು ದೊಡ್ಡದು ಮಾಡುವ, ಕುಂಭಸ್ಥಲದಲ್ಲಿ ಮದವುಕ್ಕುವಂತೆ ಮಾಡುವ, ಉಚಿತವಾದ ವಾಸನೆ ಬಣ್ಣಗಳನ್ನು ತಂದುಕೊಡುವ ಅನ್ನಪಾನಗಳನ್ನು ಆಯಾ ಜಾತಿಯನ್ನೂ ಧಾತುವನ್ನೂ ನೋಡಿಕೊಂಡು ಆನೆಗೆ ಕೊಡುವುದು. ಸೋತ್ತಾಲ ಬೃಂಹಣ, ಸಂಚಯ, ವ್ಯಸ್ತಾರ, ಮುಖವರ್ಧನ, ಕಟವರ್ಧನ, ಕಟ ಶೋಧನ, ಪ್ರತಿಭೇದನ, ಪ್ರವರ್ಧನ, ವರ್ಣಕರ, ಗಂಧಕರ, ಉದ್ದೀಪನ, ಹ್ರಾಸನ, ವಿನಿವರ್ತನ, ಪ್ರಭೇದಕರಣ(ಯಶಸ್ತಿ. ಟೀ. ೪೯೪, ೪೯೫).

ವಿಸ್ತಾರ ಕಾರಕೈಶ್ಚಾನ್ಯೈರ್ಮುಖವರ್ಧನಕೈರಪಿ ॥ (ಗಜಶಾ. ಪು. ೧೫೪–೧೩).

ಆನೆಯು ಮದಾವಸ್ಥೆಯಲ್ಲಿದ್ದಾಗ ಮಾಡುವ ಒಂದು ಬಗೆಯ ಉಪಚಾರ: ಮುಖವು ವಿಕಾಸವಾಗುವ ಹಾಗೆ ಅನ್ನಪಾನಾದಿಗಳನ್ನು ನೀಡುವುದು."[೫೪] ಈ ರೀತಿ ಉಪಚಾರ ಮಾಡುವುದರಿಂದ ಮದವಸ್ಥೆಯ ಅನೆಗಳು ಕ್ರಮವಾಗಿ ಉಪಚಾರಕ್ಕೆ ಒಳಪಡುವುದೆಂದು ಗಜಶಾಸ್ತ್ರಕಾರರು ವಿವರಿಸುತ್ತಾರೆ.

## ೪.೧.೨. ಆನೆಗಳ ಜಾತಿ ಮತ್ತು ಪ್ರಬೇಧ

"ಕುಲ ಜಾತಿ ವಯೋರೂಪೈಶ್ಚಾರ ವರ್ಷ್ಮಬಲಾಯು ಷಾಮ್।
ಸತ್ತ್ವ ಪ್ರಚಾರ ಸಂಸ್ಥಾನ ದೇಶ ಲಕ್ಷಣರಂಹಸಾ ॥
ಏಷಾಂ ಚತುರ್ದಶಾನಾಂ ತು ಯೋ ಗುಣಾನಾಂ ಸಮಾಶ್ರಯಃ ।
ಸ ರಾಜ್ಞೋ ಯಾಗನಾಗಃ ಸ್ಯಾದ್ ಭೂರಿಭೂತಿಸಮೃದ್ಧಯೇ ॥ (ಗಜಶಾ. ೬೩?).

ಉತ್ಪತ್ತಿಸ್ಥಾನ, ಕುಲ(ಐರಾವತಾದಿ), ಪ್ರಚಾರ(ಸಮ, ವಿಷಮ), ದೇಶ, ಜಾತಿ(ಭದ್ರ, ಮೃಗ, ಮಂದ), ಸಂಸ್ಥಾನ(ಶರೀರಸೌಷ್ಠವ), ಉತ್ಸೇಧ(ಎತ್ತರ), ಆಯಾಮ(ಉದ್ದ), ಪರಿಣಾಹ(ದಪ್ಪ), ಆಯು(೧೨ ಅವಸ್ಥೆ ಗಳಲ್ಲಿ ಒಂದು), ಛವಿ, ವರ್ಣ(ಶುದ್ಧ, ವ್ಯಾಮಿಶ್ರ ಅಂತರ್ವರ್ಣ), ಪ್ರಭೆ, ಛಾಯೆ(ಪಾರ್ಥವೀ, ಔದಕೀ, ಆಗ್ನೇಯೀ, ವಾಯವ್ಯ, ತಾಮಸೀ), ಆಚಾರ, ಶೀಲ, ಶೋಭೆ(ಲೋಹಿತ, ಪ್ರತಿಚ್ಛನ್ನ, ಪಕ್ಷಲೇಪನ, ಸಮಕಕ್ಷೆ, ಸಮತಲ್ಪ, ವ್ಯತಿಕರ್ಣ, ದ್ರೋಣಿಕಾ), ಆವೇದಿತಾ(ಅರ್ಥವೇದನ; ಸಂವೇದನೆ), ಲಕ್ಷಣ, ವ್ಯಂಜನ(ಕರ ರದನಾದಿಗಳ ಬಿಂದು ಸ್ವಸ್ತಿಕಾದಿ ಚಿಹ್ನೆಗಳು), ಬಲ, ಧರ್ಮ, ವಯಸ್ಸು, ಜವ, ಅಂಶ(ಬ್ರಹ್ಮಾದಿ), ಗತಿ, ರೂಪ, ಸತ್ತ್ವ, ಸ್ವರ, ಅನೂಕ (ಯಶಸ್ತಿ. ಟೀ. ೨-೨೯೨, ೨೯೩) ಅಲ್ಲದೆ ನೋಡಿ."[೫೫] ಇವು ಗಜಗಳ ಜಾತಿ ಹಾಗೂ ಅವುಗಳ ಅವಸ್ಥೆಯನ್ನು ಕುರಿತು ತಿಳಿಸುತ್ತದೆ. ಅಲ್ಲದೇ ಗಜಶಾಸ್ತ್ರ ರಚನಕಾರರು ೨೮ ವಿಧದ ಗಜಜಾತಿಗಳನ್ನು ಈ ಕೆಳಕಂಡಂತೆ ಉಲ್ಲೇಖಿಸಿರುತ್ತಾರೆ.

**ಗಜಜಾತಿಯ ೨೮ ವಿಧಗಳು:** ಇಂದ್ರಾಂಶ, ಅಗ್ನ್ಯಂಶ, ಯಮಾಂಶ, ವರುಣಾಂಶ, ಪವಮಾನಾಂಶ, ಕುಬೇರಾಂಶ, ಶಂಕರಾಂಶ, ಯಕ್ಷಾಂಶ, ಗಂಧರ್ವಾಂಶ, ಕಿನ್ನರಾಂಶ, ವಿಷ್ಣ್ವಂಶ, ಬ್ರಹ್ಮಾಂಶ, ಚಂದ್ರಾಂಶ, ತಾಪಸಾಂಶ, ಭೂಪಾಲಾಂಶ, ಮಾನುಷಾಂಶ, ಪಿತಾಮಹಾಂಶ, ವಿಹಗಾಂಶ, ಮತ್ಸ್ಯಾಂಶ, ಲತಾಂಶ, ಕುಸುಮಾಂಶ, ಧೇನ್ವಂಶ, ರಾಕ್ಷಸಾಂಶ, ಅಸುರಾಂಶ, ಪಿಶಾಚಾಂಶ, ಸಿಂಹಾಂಶ, ಶಾರ್ದೂಲಾಂಶ, ವಾನರಾಂಶ ಇರುವ ಗಜಗಳು, ಇವುಗಳ ಗುಣಲಕ್ಷಣಗಳಿಗೆ ಮೂಲವನ್ನು ನೋಡಬಹುದು. ಇವುಗಳಲ್ಲಿ ಮಾನುಷಾಂಶದವರೆಗೆ ೧೬ ಉತ್ತಮವೆಂದೂ ಧೇನ್ವಂಶದವರೆಗೆ ೬ ಮಧ್ಯಮವೆಂದೂ ವಾನರಾಂಶದವರೆಗೆ ೬ ಅಧಮವೆಂದೂ ಹೇಳಲ್ಪಟ್ಟಿದೆ(ಗಜಶಿ. ಪ.೨).[೫೬]

"ಭದ್ರೋ ಮಂದ್ರೋ ಮೃಗಶ್ಚೇತಿ ಜ್ಞೇಯಾಸ್ತೇ ತ್ರಿವಿಧಾ ಗಜಾಃ ।
ಪಂಚೋನ್ನತಿಃ ಸಪ್ತಮೃಗಸ್ಯ ದೈರ್ಘ್ಯಮಷ್ಟೌ ಚ ಹಸ್ತಾಃ ಪರಿಣಾಹಮಾನಮ್।
ಏಕದ್ವಿವೃದ್ಧಾವಥ ಭದ್ರಮಂದ್ರೌ ಸಂಕೀರ್ಣನಾಗ್ಯೋನಿಯತ ಪ್ರಮಾಣಃ ॥

ಭದ್ರ, ಮಂದ್ರ ಮೃಗ ಎಂಬುದಾಗಿ ಆನೆಗಳಲ್ಲಿ ಮೂರು ವಿಧ. ಐದು ಮೊಳಗಳ ಎತ್ತರ, ಏಳು ಮೊಳಗಳ ಉದ್ದ ಹಾಗೂ ಎಂಟು ಮೊಳಗಳ ಸುತ್ತಳತೆ ಇದ್ದರೆ ಅದು ಮೃಗವೆಂಬ ಜಾತಿಯ ಆನೆ. ಮೇಲೆ ಹೇಳಿದ ಅಳತೆಗಿಂತ ಒಂದು ಮೊಳ ಹೆಚ್ಚಾಗಿದ್ದಾರೆ ಅದು ಭದ್ರವೆಂಬ ಆನೆ. ಎರಡು ಮೊಳ ಹೆಚ್ಚಾಗಿದ್ದಾರೆ ಅದು ಮಂದ್ರವೆಂಬ ಜಾತಿಯ ಆನೆ. ಆದರೆ ಇವುಗಳ ಸಂಕರ ಜಾತಿಯ ಆಳತೆ ನಿಯತವಾಗಿರುವುದಿಲ್ಲ.”[೫೭]

**ಆನೆಗಳನ್ನು ಪ್ರಮುಖವಾಗಿ ೩ ಜಾಲೆಯೆಂದು ವಿಂಗಡಿಸಿದ್ದಾರೆ. ಅವುಗಳ ಲಕ್ಷಣಗಳನ್ನು ಈ ಕೆಳಕಂಡಂತೆ ಚರ್ಚಿಸಲಾಗಿದೆ.**

**ಭದ್ರ**

“ಮುಖಾದಾ ತೇಜಕಂ ಧೈರ್ಘಂ ಪೃಷ್ಟಪಾರ್ಶ್ವೋದರಾಂತರಾವತ್ ।
ಆನಾಃ ಉಚ್ಚಯಃ ಪಾದಾದ್ವಿಜ್ಞೇಯೊ ಯಾವದಾಸನಮಂ ॥

ಮುಖಕ್ಕಿಂತ ಬಾಲ ಉದ್ದವಾಗಿದ್ದು, ಬೆನ್ನು ಪಾರ್ಶ್ವ(ಸೊಂಡಿಲಿನ ಆಗ್ರಹಸ್ತವೆಂಬ ಭಾಗದ ಅನಂತರದ ಭಾಗ)ವು ಮತ್ತು ಹೊಟ್ಟೆಯು ಉದ್ದವಾಗಿರುತ್ತದೆ. ಪಾದಗಳಿಗಿಂತಲೂ ಆಸನ(ಹೆಗಲು) ಎತ್ತರವಾಗಿರುತ್ತದೆ.

ಭದ್ರ ದ್ವಿಪ ಪರ್ವತಚಾರಿಣಸ್ತೇ ರಕ್ಷಾಂಡಕೋಶೇಶು ಸಮ ಘನಶ್ಚ ।
ಕೂರ್ಮಾಭ ಪಾರ್ಷ್ಣಿಶ್ಚ ನಖಾಂತರೇಷು ಮುಕ್ತಾಶ್ಚ ಮಾಂಸೈಶ್ಚ ತನೂರುಹೈಶ್ಚ॥
ಪಾದೈಃ ಪ್ರಶಸ್ತೈಃ ನಖೈಶ್ಚ ಸಾಂದ್ರಾಃ ಸಮಂತತಃ ಪದ್ಮಕಲಾಂಚಿತಾಶ್ಚ ।
ನಕೃಶಾ ನ ಚಾತಿವೃದ್ಧ ಮಧುನಿಭದಂತೇಕ್ಷಣಾ ಧನುರ್ವಂಶಾಃ
ಸುವೃತ್ತಗಾತ್ರಾಃ ಪರಾ ಭದ್ರಃ ॥

ಭದ್ರಗಜಗಳು ಬೆಟ್ಟಗಳಲ್ಲಿ ಸಂಚರಿಸುತ್ತವೆ. ಇವು ಕಪ್ಪಾಗಿದ್ದು, ಕಕ್ಷಾ(ಆನೆಯ ಶರೀರದ ಮದ್ಯಭಾಗ) ಮತ್ತು ಅಂಡಕೋಶ ಶಿಶ್ನದ ತೆಳಗಿನ ಭಾಗವು ಸಮವಾಗಿರುತ್ತವೆ. ಆಮೆಯಂತಹ ಹಿಮ್ಮಡಿ, ಉಗುರುಗಳ ಮದ್ಯದಲ್ಲಿ ಮಾಂಸ ಮತ್ತು ಕೂದಲು ಇರುವುದಿಲ್ಲ. ಧನುರ್ವಂಶದ ಭದ್ರವೆಂಬ ಗಜಗಳಿಗೆ ಪ್ರಶಸ್ತವಾದ ಪಾದಗಳು, ದಪ್ಪಗಿನ ಉಗುರುಗಳುಳ್ಳ ಹಾಗೂ ಶರೀರದ ಮೇಲೆ ಚುಕ್ಕೆಗಳನ್ನು ಹೊಂದಿರುತ್ತವೆ. ಇವು ಕೃಶವಲ್ಲದ ಅತಿ ಉದ್ದವಲ್ಲದ ದೇಹ, ಜೇನಿನ ಕಾಂತಿಯುಳ್ಳ ದಂತಗಳು, ಕಣ್ಣುಗಳು ಒಪ್ಪವಾಗಿರುವ ಆವಯವಗಳು ಹಾಗೂ ದುಂಡನೆಯ ದೇಹವನ್ನು ಪಡೆದಿರುತ್ತವೆ.

ಆರೋಹಣಂ ಭದ್ರನಾಮ್ನೋ ಮಾತಂಗಸ್ಯ ಯಶಸ್ಕರಃ
ಆಯುಷ್ಕರಂ ಪಾಪಹರಂ ಬಲತೇಜೋ ವಿವರ್ಧನಮಂ ॥

ಮತಂಗನ ಸಂತಾನ 'ಭದ್ರ'ವೆಂಬ ಆನೆಯ ಸವಾರಿಯು ತುಂಬಾ ಕೀರ್ತಿಕರ, ಆಯುವರ್ಧಕ, ಪಾಪಗಳನ್ನು ನಾಶ ಮಾಡುತ್ತದೆ. ಹಾಗೂ ಇದರ ಸವಾರಿ ಬಲ ಮತ್ತು ತೇಜೋವರ್ಧಕ."[೫೮]

"ಧೈರ್ಯೇ ಶೌರ್ಯೇ ಪಟುತ್ವಂ ಚ ವಿನೀತತ್ವಂ ಸುಕರ್ಮತಾ ।
ಅನ್ವರ್ಥವೇದಿನಾ ಚೈವ ಭಯರೂಪೇಷ್ವಮೂಢತಾ ॥
ಸುಭಗತ್ವಂ ಚ ವೀರತ್ವಂ ಭದ್ರಸ್ಯೈತೇ ಗುಣಾಸ್ಸ್ಮೃತಾಃ ॥ (ಗಜಶಾ. ೬೩-೧, ೨).

ಶುಭಲಕ್ಷಣಗಳನ್ನುಳ್ಳ ಆನೆ; ಮೂರು ವಿಧದ ಆನೆಗಳಲ್ಲಿ ಅತ್ಯಂತ ಶ್ರೇಷ್ಠವಾದುದು: ಭದ್ರೋ ಮಂದೋ ಮೃಗಶ್ಚೇತಿ ವಿಜ್ಞೇಯಾಸ್ತ್ರಿವಿಧಾ ಗಜಾಃ(ಅಭಿಧಾ. ೨-೬೨); ಮಂದಂ ಮೃಗಂ ಭದ್ರಮೆನಲು ಗಜಜಾತಿ ಮೂಱಿಂದಮಕ್ಕು(ಮಂಗನಿ. ಮೃ ೨); ಭದ್ರಃ ಮಂದಃ ಮೃಗಃ ಎಂದಿಂತು ಆನೆಗಳ್ ಮೂಱು ತೆಱನಕ್ಕುಂ(ಅಭಿಧಾ. ೨-೬೨ ಟೀ); ಹಿಮವತ್ಪರ್ವತದ ಆನೆ(ಚಾಮುಂಡಾ. ೨-೪೦).

**ಭದ್ರಗಜದ ಲಕ್ಷಣ** ೧. ನಾತಿಸ್ಥೂಲಾಖಿಲಾಂಗಃ ಪ್ರಥಮ ಯುಗವಸಂತೋದ್ಭವಃ ಪಾಟಲಾಭೋ ।

ನಾಹಾಯಾಮಿ ಸಹಿಷ್ಣುರ್ಧರಣಿಧರಚರಃ ಸಾರ್ಥಿಕೋಽನ್ವರ್ಥವೇದೀ ।
ಧೀರಸ್ತೇಜಸ್ವ್ಯುದಗ್ರೋ ಜಲಧರನಿನದಃ ಕಾಂಕ್ಷಿತೋ ಧೇನುಕಾಭಿಃ ।
ಶೂರಃ ಪಿಂಗಾಕ್ಷಿದಂತೋ ಭವತಿ ಚ ಸಮದೋಷಃ ಶುಭೋ ಭದ್ರನಾಮಾ ॥
(ಮಾತಂಗ. ೧-೨೭).

ಧೈರ್ಯ, ಶೌರ್ಯ, ಪಟುತ್ವ, ವಿನೀತತ್ವ, ಸುಕರ್ಮತೆ, ಅನ್ವರ್ಥವೇದಿತ್ವ, ಭಯ ರೂಪಗಳಲ್ಲಿ ಅಮೂಢತ್ವ, ಸುಭಗತ್ವ, ವೀರತ್ವ ಈ ಗುಣಗಳನ್ನುಳ್ಳ ಆನೆ.

೨. ತೀರ ದಪ್ಪವಲ್ಲದ ಅಂಗಾಂಗಗಳಿಂದ ಕೂಡಿದ, ವಸಂತಕಾಲದ ಪಾದರಿ ಹೂವಿನ ಬಣ್ಣವಾಗಿರುವ, ಒಂದೇ ಕಡೆ ಇರದೆ ಇರುವ, ಬೆಟ್ಟಪ್ರದೇಶಗಳಲ್ಲಿ ಸುಳಿದಾಡುವ, ಮಾವಟಿಗನ ಸನ್ನೆಗಳನ್ನು ತಿಳಿಯುವ, ಧೀರ ತೇಜಸ್ವಿ ಪ್ರಸನ್ನ ಆದ, ಗುಡುಗಿನಂತೆ ದನಿಯುಳ್ಳ, ಹೆಣ್ಣಾನೆಯ ಸಹವಾಸವನ್ನು ಬಯಸುವ, ಶೌರ್ಯ ಗುಣವುಳ್ಳ, ಪಿಂಗಲವರ್ಣದ ಕಣ್ಣು ಮತ್ತು ದಂತಗಳನ್ನು ಹೊಂದಿದ, ದೋಷಗಳ ಬಗೆಗೆ ತಾಟಸ್ಥ್ಯವನ್ನುಳ್ಳ ಶುಭಲಕ್ಷಣದ ಆನೆ.

೩. ವ್ಯೂಡೋರಸ್ಕಃ ಪ್ರಭೂತಾಂತರ ಮಣಿರತನುಃ ಸುಪ್ರತಿಷ್ಠಾಂಗ ಬಂಧಃ ।
ಸ್ವಾಚಾರೋನ್ವರ್ಥವೇದೀ ಸುರಭಿಮುಖ ಮರುತ್, ದೀರ್ಘ ಹಸ್ತಃ ಸುಕೋಶಃ।

ಆತಾಮ್ರೋಷ್ಠಃ ಸುಜಾತಃ ಪ್ರತಿರವಮುದಿತಶ್ಚಾರು ಶೀರ್ಷೋದ್ಗಮಶ್ರೀಃ।
ಕ್ಷಾಂತಸ್ತತ್ಕಾಂತಲಕ್ಷ್ಮೀಃ ಶಮಿತವಲಿಮದಃ ಶೋಭತೇ ಭೂಪ ಭದ್ರಃ ॥
(ಯಶಸ್ತಿ. ಪೂ. ೪೯೨).

ವಿಶಾಲವಾದ ಎದೆಯ ಭಾಗವನ್ನುಳ್ಳ, ಸ್ಫುಟವಾದ ಅಂತರ್ಮಣಿಯಿಂದ ಕೂಡಿದ, ಪುಷ್ಟವಾದ ಶರೀರದ, ನಿಶ್ಚಲವಾದ ದೇಹಸೌಷ್ಠವದ, ಒಳ್ಳೆಯ ಪ್ರಚಾರವುಳ್ಳ, ಅನ್ವರ್ಥ ವೇದಿಯಾದ, ಸುಗಂಧಿತ ಶ್ವಾಸೋಚ್ಛ್ವಾಸದ, ನಿಡಿದಾದ ಸೊಂಡಿಲಿನ, ಸುಕೋಶದ, ಕೆಂದುಟಿಯ, ಕುಲೀನ ಜಾತಿಯ, ತನ್ನದೇ ಪ್ರತಿಧ್ವನಿಗೊಳ್ಳುವ ಘೀಂಕೃತಿಗೆ ಹರ್ಷಿಸುವ, ಸುಂದರಶಿರಸ್ಸಿನ, ಕ್ಷಮಾಶೀಲವಾದ, ಶೋಭಾಯಮಾನವಾದ, ಶಮಿತವಲಿಮದವೆನಿಸಿದ ಆನೆ."[೫೯] ಎಂದು ಭದ್ರಗಜದ ಜಾತಿ ಮತ್ತು ಲಕ್ಷಣಗಳನ್ನು ಕುರಿತು ಉಲ್ಲೇಖಿಸಿದ್ದಾರೆ.

**ಮಂದ**

"ಮಂದ್ರಾ ಗಜಾಃ ಶೈವಲಿನೀ ಸುಚಾರಾಃ ಸಮುನ್ನತಾಶ್ಚಾನತಪೂರ್ವಕಾಯಃ।
ಸುನಿರ್ವಲಿಭಿಸ್ತನುಭಿಸ್ತನುಭಿಸ್ತಥಾಂಸ್ಯೈಃ ಸಹಿಷ್ಣವಃ ಸಂಹರಣಪ್ರಿಯಾಶ್ಚ ॥
ವಿಪುಲಕರಕರ್ಣವದನಾ ಮಹೋದರಾಃ ಸ್ಥೂಲತೇಜಕವಿಷಣಾಃ ।
ಚಲಬಹುಲಲಂಬ ಮಾಂಸಾ ಹರ್ಯಕ್ಷಾಃ ಕುಂಜರಾ ಮಂದಾ ॥

ಮಂದ್ರಗಜಗಳು, ಪಾಚಿಕಟ್ಟಿದ ಕೊಳಗಳಲ್ಲಿ ದಡದ ಪ್ರದೇಶಗಳಲ್ಲಿ ಸಂಚರಿಸುತ್ತವೆ. ಈ ಆನೆಗಳು ಎತ್ತರವಾಗಿದ್ದು, ಶರೀರದ ಹಿಂದಿನ ಭಾಗವು ಸ್ವಲ್ಪ ಕುಗ್ಗಿರುತ್ತವೆ. ಇವುಗಳ ದೇಹ ಮತ್ತು ಭುಜಗಳ ಪ್ರದೇಶಗಳಲ್ಲಿ ಚರ್ಮವು ಮಡಿಕೆಗಳಿಂದ ಕೂಡಿರುತ್ತವೆ. ಇವು ಕ್ಲೇಶವನ್ನು ಸಹಿಸುವ ಸಾಮರ್ಥ್ಯವನ್ನು ಹೊಂದಿದ್ದು, ನಾಶ ಮಾಡುವುದರಲ್ಲಿ ಆಸಕ್ತಿ ಯನ್ನು ಹೊಂದಿರುತ್ತವೆ. ಮಂದ್ರವೆಂಬ ಆನೆಗಳ ಮುಖ ಮತ್ತು ಕಿವಿಗಳು ಅಗಲ ವಾಗಿದ್ದು, ಭಾರಿ ಹೊಟ್ಟೆ, ದಪ್ಪವಾದ ಬಾಲ ಮತ್ತು ದಂತಗಳನ್ನು ಹೊಂದಿರುತ್ತವೆ. ಇವುಗಳ ಚಲನಕ್ಕೆ ಅಲುಗಾಡುವ ಮಾಂಸಖಂಡಗಳನ್ನು ಹೊಂದಿದ್ದು, ರುದ್ರಾಕ್ಷಿಯಂತೆ ಕಂದು ಬಣ್ಣದ ಕಣ್ಣುಗಳನ್ನು ಹೊಂದಿರುತ್ತವೆ."[೬೦]

"ಮಂದ್ರಾ ಆನೆಯ ಜಾತಿಗಳಲ್ಲಿ ಒಂದು ಬಗೆ: ಮಧ್ಯಮಜಾತಿಯ ಆನೆ: ಭದ್ರೋ ಮಂದೋ ಮೃಗಶ್ಚೇತಿ ವಿಜ್ಞೇಯಾಸ್ತ್ರಿವಿಧಾ ಗಜಾಃ ॥ (ಅಭಿಧಾ. ೨-೬೨); ಮಂದಂ ಮೃಗಂ ಭದ್ರಮೆನಲು ಗಜಜಾತಿ ಮೂಱಿಂದಮಕ್ಕು(ಮಂಗನಿ. ಮೃ ೧); ಭದ್ರಃ ಮಂದಃ ಮೃಗಃ ಎಂದಿತು ಆನೆಗಳ್ ಮೂಱು ತೆಱನಕ್ಕುಂ(ಅಭಿಧಾ. ೨-೬೨ ಟೀ); ವಿಂಧ್ಯಪರ್ವತದ ಆನೆ(ಚಾಮುಂಡಾ. ೨-೪೦).

ವಿಪುಲತರ ಕರ್ಣವದನಾಃ ಮಹೋದರಾಃ ಸ್ಥೂಲಪೇಚಕವಿಷಾಣಾಃ ।
ಬಹುಬಲಲಂಬ ಮಾಂಸಾ ಹರ್ಯಕ್ಷಾಃ ಕುಂಜರಾ ಮಂದಾಃ ॥ (ಗಜಶಾ. ೬೭–೧೯)

**ಮಂದಗಜದ ಲಕ್ಷಣ** ವಿಶಾಲವಾದ ಕಿವಿಗಳು ಮತ್ತು ಮುಖವನ್ನುಳ್ಳ, ದೊಡ್ಡ ಹೊಟ್ಟೆಯನ್ನುಳ್ಳ, ದಪ್ಪ ಬಾಲದ ಬುಡ ಮತ್ತು ದಂತಗಳನ್ನುಳ್ಳ, ಬಹುಬಲವಾದ ಜೋಲುಮಾಂಸದ, ಹಳದಿ ಕಣ್ಣುಗಳ ಆನೆ.

೧. ತ್ರೇತಾಯಾಂ ಶೀತಕಾಲೋದ್ಭವ ಉಭಯ ಚರೋ ದುರ್ಮನಾ ಹ್ರಸ್ವಕರ್ಣೋ।
ನಾಯಾಮೀ ಮಂದಗಾಮೀ ಹರಿರುಚಿ ನಯನಸ್ತಾಮಸಃ ಕೃಷ್ಣಶೋಭಃ ।
ನಾಗಃ ಶ್ಲೇಷ್ಮಪ್ರಧಾನೋ ನತವಿಪುಲರದಃ ಸ್ಥೂಲವೃತ್ತಾಂಗಶೋಭೀ ।
ಕಾಮೀ ಗಂಭೀರ ವೇದೀ ಕಥಿತ ಇತಿ ಬುಧೈರ್ಮಂದ ನಾಮಾ ಗಜೇಂದ್ರಃ॥
(ಮಾತಂಗ. ೧–೨೮)

ತ್ರೇತೆಯ ಚಳಿಗಾಲದಲ್ಲಿ ಉಂಟಾದ, ಉಭಯಚರ(ನದೀಚರ, ಗಿರಿಚರ) ಆದ, ಕೆಟ್ಟ ಮನಸ್ಸಿನ, ಚಿಕ್ಕ ಕಿವಿಯ, ತಿರುಗಾಡಲು ಇಷ್ಟಪಡದ, ಮಂದಗಾಮಿಯಾದ, ಹೊಂಬಣ್ಣದ ಕಣ್ಣುಗಳ, ತಾಮಸಸ್ವಭಾವದ, ಕಪ್ಪು ಮೈಕಾಂತಿಯ, ಶ್ಲೇಷ್ಮಪ್ರಕೃತಿ ಪ್ರಧಾನವಾದ, ಕೆಳ ಬಗ್ಗಿದ ಭಾರಿ ದಂತವುಳ್ಳ, ಕೊಬ್ಬಿದ ಮೈಯ, ಕಾಮಿಯಾದ, ಗಂಭೀರ ವೇದನಸ್ಥಿತಿಯ ಆನೆ.

೨. ಯೋಽಚ್ಛೇದ್ರಸ್ತ್ವಯಿ ವೀರ ಭೀರವನತಃ ಪಶ್ಚಾತ್ಪ್ರಸಾದಾತ್ಪುನಃ ।
ಕಿಂಚಿತ್ತೇ ಪುರತಃ ಸಮುಚ್ಛ್ರಿತಶಿರಾಃ ಕಾರ್ಯೇಷು ಭಾರಕ್ಷಮಃ ।
ಸೋಽತ್ಯಶ್ರಮ ಏವ ಮಂಡಲಯುತೋ ಗಂಭೀರ ವೇದೀ ಪೃಥುಃ ।
ಮಂದೇ ಭಾನುಕೃತಿರ್ಬಲೀರಿತವಪುಃ ಸ್ಯಾತ್ಸಾಂದ್ರಪರ್ವಾ ನೃಪಃ ॥ (ಯಶಸ್ತಿ. ಪೂ. ೪೯೩).

ನಿಬಿಡಬಂಧ, ವೀತಭೀರು, ಕೆಳಬಾಗಿದ, ಎತ್ತಿದ ತಲೆಯ, ಕಾರ್ಯಭಾರಕ್ಷಮ ಆದ, ಅತ್ಯಲ್ಪಪ್ರಮಾಣದಲ್ಲಿ ಆಯಾಸವಾಗುವ, ಮಂಡಲಯುತ, ಗಂಭೀರವೇದಿ, ವಿಶಾಲವಾದ ಮಡಿಕೆಗಳುಳ್ಳ ದಟ್ಟವಾದ ಗಿಣ್ಣುಗಳ ಆನೆ."[೬೧]

**ಮೃಗ**

"ಮೃಗೇ ವನೇ ಸಂಚರಣಾ ಭವಂತಿ ಸಮನ್ವಿತಾಸ್ತೇ ಶೀತಿಲೈಶ್ಚ ಮಾಂಸೈಃ ।
ಮೃದೀಕ್ಷಣಾ ಧೀರ್ಘವಿಷಾಣಗಾತ್ರಾಃ ಸುಸ್ನಿಗ್ಧವರ್ಣಾಃ ಸುಭ್ರುಹದ್ವಲೀಕಾಃ ॥

ಸುಸ್ನಿಗ್ಧ ಪಕ್ಷಾಕ್ಷಿ ನಖಾಸ್ಯ ಫಾಲಾ ಅತೀವವಕ್ರಾಃ ಸುಕುಮಾರ ಕೇಶಾಃ ।
ಕೃಶಕರಚರಣಗ್ರೀವಾಃ ಸ್ಥೂಲಾ ಹ್ರಸ್ವಾಶ್ಚ ವಾಲಮೇಢ್ರೋಷ್ಠಾಃ ॥

ಮೃಗವೆಂಬ ಆನೆಗಳು ಕಾಡಿನಲ್ಲಿ ಸಂಚರಿಸುತ್ತವೆ. ಇವು ಸಡಿಲವಾದ ಮಾಂಸಖಂಡಗಳನ್ನು ಹೊಂದಿರುತ್ತವೆ. ಮೃದುವಾದ ಕಣ್ಣುಗಳು, ಉದ್ದವಾದ ದಂತಗಳನ್ನು ಇವು ಹೊಂದಿರುತ್ತವೆ. ಆಹ್ಲಾದಕರವಾದ ಬಣ್ಣ ಮತ್ತು ದೊಡ್ಡ ಮಡಿಕೆಗಳುಳ್ಳ ಚರ್ಮವನ್ನು ಹೊಂದಿರುತ್ತವೆ. ಆಕರ್ಷಕವಾದ ಪಕ್ಕೆ, ಕಣ್ಣು, ಮುಖ ಮತ್ತು ಕುಂಭಸ್ಥಳಗಳನ್ನು ಹೊಂದಿರುತ್ತವೆ. ಇವುಗಳ ರೋಮಗಳು ವಕ್ರವಾಗಿ ಮತ್ತು ನವಿರಾಗಿರುತ್ತವೆ. ಇವು ತೆಳುವಾದ ಸೊಂಡಿಲು ದಪ್ಪವಾದ ಕತ್ತು ಮತ್ತು ಕಾಲುಗಳನ್ನು ಹೊಂದಿರುತ್ತವೆ. ಚಿಕ್ಕದಾದ ಬಾಲ ಶಿಶ್ನ ಮತ್ತು ತುಟಿಗಳನ್ನು ಹೊಂದಿರುತ್ತವೆ. ಮೃಗ ಗಜಗಳಿಗೆ ಕಿರಿದಾದ ಬೆನ್ನು, ತೆಳುವಾದ ದಂತ ಮತ್ತು ಮುಖವಿರುತ್ತದೆ."[೮]

ಮೃಗ ಆನೆಯ ಮೂರು ಜಾತಿಗಳಲ್ಲಿ ಒಂದು. ಕನಿಷ್ಠವಾದ ಆನೆ. ಭದ್ರೋ ಮಂದೋ ಮೃಗಶ್ಚೇತಿ ವಿಜ್ಞೇಯಾಸ್ತ್ರಿವಿಧಾ ಗಜಾಃ ॥ (ಅಭಿಧಾ. ೨-೬೨); ಮಂದಂ ಮೃಗಂ ಭದ್ರಮೆನಲು ಗಜಜಾತಿ ಮೂಱಿಂದಮಕ್ಕು(ಮಂಗನಿ. ಮೃ. ೨); ಭದ್ರಃ ಮಂದಃ ಮೃಗಃ ಎಂದಿಂತು ಆನೆಗಳ್ ಮೂಱುತೆಱನಕ್ಕುಂ(ಅಭಿಧಾ. ೨-೬೨ ಟೀ). ಸಹ್ಯ ಪರ್ವತ ಕರ್ನಾಟಕದೇಶದ ಆನೆ(ಚಾಮುಂಡಾ. ೨-೫); ಮೃಗಜಾತಿಯ ಗಜದ ಲಕ್ಷಣವೆಂದರೆ:

೧. ಕೃಶಾಂಗುಲೀ ವಾಲಧಿ ವಕ್ತ್ರಮೇಢ್ರೋ ಲಘೂದರಃ ಕ್ಷಾಮಕಪೋಲಕಂಠಃ ।
ವಿಸ್ತೀರ್ಣಕರ್ಣಸ್ತನು ದೀರ್ಘದಂತಃ ಸ್ಥೂಲೇಕ್ಷಣೋ ಯಸ್ಯ ಗಜೋ ಮೃಗಾಖ್ಯಃ॥
(ಪಾಲಕಾಪ್ಯೇ-ಗಜಶಾ. ೬-೩೬). ಅಲ್ಲದೆ ನೋಡಿ: ಕೃಶಕರಚರಣಗ್ರೀವಾಃ ಸ್ಥೂಲಾಕ್ಷಾ ಹ್ರಸ್ವವಾಲ ಮೇಢ್ರೋಷ್ಠಾಃ । ಸಂಕ್ಷಿಪ್ತ ಪೃಷ್ಠವಂಶಾಃ ತನುಮುಖದಂತಾ ಮೃಗಾ ಜ್ಞೇಯಾಃ (ಗಜಶಾ. ೬-೩೨).

ಕೃಶವಾದ ಅಂಗುಲಿ, ಬಾಲ, ಮುಖ ಮತ್ತು ಮೇಢ್ರಗಳನ್ನುಳ್ಳುದು, ತೆಳ್ಳನೆಯ ಹೊಟ್ಟೆಯನ್ನೂ ಸೊರಗಿದ ಕಪೋಲ ಕಂಠಗಳನ್ನೂ ಉಳ್ಳುದು, ವಿಶಾಲವಾದ ಕಿವಿಗಳನ್ನು ಉಳ್ಳುದು, ತೆಳುವೂ ನಿಡಿದಾದುದೂ ಆದ ದಂತವನ್ನು ಹೊಂದಿದುದು, ಸ್ಥೂಲವಾದ ಕಣ್ಣುಗಳಿಂದ ಕೂಡಿದುದು ಆದ ಆನೆ.

೨. ನಾಹಾಯಾಮಪ್ರಹೀಣಃ ಕೃಶನಿಖಿಲತನುರ್ಧೂಸರಚ್ಛಾಯಕಾಯೋ।
ಬಹ್ವಾಶ್ಯು ತ್ತಾನವೇದೀ ಚಪಲಮತಿರತಿಕ್ರೋಧನಃ ಸಿಂಧುಚಾರೀ ।

ಸ್ಥೂಲಾಕ್ಷೋ ಹ್ರಸ್ವ ವಾಲಶ್ಚರಮಯುಗಪಯೋವಾಹಕಾಲಪ್ರಜಾತ ।
ಶ್ಚಂಡಃ ಪಿತ್ತ ಪ್ರಧಾನೋ ಮೃಗ ಇತಿ ಕಥಿತೋ ವಾರಣೋಸೌ ಕನೀಯಾನ್ ॥
(ಮಾತಂಗ. ೧-೩೦) (ಮೂರನೆಯ ಪಾದದ ಪಾಠ ಗಜಶಾಸ್ತ್ರದ ೬-೩೩ರಲ್ಲಿ ಸ್ಥೂಲಾಸ್ಯೋ ದ್ವಾಪರಸ್ಥಃ ಶುಭಜ ನಿರಲಸೋ ರಾಜಸೋ ಹ್ರಸ್ವವಾಲಃ ಎಂದಿದ್ದು ಇದು ಗಮನಾರ್ಹವಾದ್ದು.)

ವ್ಯವಸ್ಥಿತವಾದ ನಡಗೆಯಿಲ್ಲದಿರುವ, ಸಕಲಾಂಗಗಳೂ ಕೃಶವಾಗಿರುವ, ದೂಳಿನ ಬಣ್ಣಕ್ಕಿರುವ, ಅತಿಯಾಗಿ ತಿನ್ನುವ, ಉತ್ತಾನವೇದಿಯಾಗಿರುವ, ಚಪಲ ಬುದ್ಧಿಯ, ಬಹುಕೋಪಿಯಾದ, ಸಿಂಧುಚಾರಿಯಾದ, ದೊಡ್ಡ ಕಣ್ಣುಳ್ಳ, ಚಿಕ್ಕ ಬಾಲದ, ಕಲಿಯುಗ ದಲ್ಲಿ ಹುಟ್ಟಿದ, ಉಗ್ರವೂ ಪಿತ್ತಪ್ರಧಾನವೂ ಆದ ಜಾತಿಯ ಆನೆ.

೩. ಯೇ ವೀರ ತ್ವಯಿ ಬಹ್ವಲೀಕರಮನಸಃ ಸೇವಾಸು ದುರ್ಮೇಧಸೋ ।
ಹ್ರಸ್ವೋರೋಮಣಯಃ ಕರೇಷು ತನವಃ ಸ್ಥೂಲೇಕ್ಷಣಾಃ ಶತ್ರವಃ ।
ತೈರ್ನಾಥಾಲ್ಪತನುಚ್ಛವಿಪ್ರಭೃತಿಭಿಃ ಶೋಕಾಲುಭಿರ್ದುರ್ಭರೈಃ ।
ಸಂಕ್ಷಿಪ್ತೈರಣುವಂಶ ಕೈರ್ಮೃಗಸಮಂ ಪ್ರಾಯಃ ಸಮಾಚರ್ಯತೇ ॥
(ಯಶಸ್ತಿ. ಪೂ. ೪೯೪).

ಸಣ್ಣ ಉರೋಮಣಿ, ತೆಳ್ಳಗಿನ ಸೊಂಡಿಲು, ದಪ್ಪಕಣ್ಣು, ಕ್ಷೀಣವಾದ ಮೈಕಾಂತಿ, ಮಂಕಾಗಿರುವಿಕೆ, ಅಂಕೆಯಲ್ಲಿಡುವುದು ಕಷ್ಟವಾಗಿರುವುದು, ಚಿಕ್ಕದಾಗಿರುವ ಬೆನ್ನು ಮೂಳೆ ಈ ಲಕ್ಷಣದ ಆನೆ."[೬೩]

ಮುಂದುವರಿದಂತೆ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಸೌಗಂಧಿಕಾ ಪರಿಣಯ ಸಂಪಾದಿತ ಕೃತಿಯಲ್ಲಿ ೧೪ನೇ ಅಶ್ವಾಸದ ಪ್ರಾರಂಭದ ಗಜಪಣದಲ್ಲಿ ಉಲ್ಲೇಖಿಸಿರುವಂತೆ ಗಜಗಳ ಜಾತಿ ಕುರಿತು ಈ ಕೆಳಗಿನಂತೆ ವಿವರಿಸಲಾಗಿದೆ.

"ಗಜಗಳಿಗೆ ಮುಖ್ಯವಾಗಿ ಭದ್ರವೆಂಬುದಾಗಿಯೂ ಮಂದ್ರವೆಂಬುದಾಗಿಯೂ ಮೃಗ ಎಂಬುದಾಗಿಯೂ ಮೂರು ಜಾತಿಗಳಿರುವವು. ಈ ಮುಖ್ಯ ಜಾತಿಗಳಲ್ಲಿ ಭೇದಗಳಂ ಪಡೆದ ಭದ್ರಮಂದ್ರ, ಭದ್ರಮೃಗ, ಭದ್ರಮಂದ್ರಮೃಗ, ಮಂದ್ರಭದ್ರ, ಮಂದ್ರಮೃಗ, ಮಂದ್ರಭದ್ರಮೃಗ, ಮೃಗಮಂದ್ರ, ಮೃಗಭದ್ರ, ಮೃಗಭದ್ರಮಂದ್ರಗಳೆಂಬುದಾಗಿ ಒಂಬತ್ತು ಜಾತಿಗಳಿರುವವು. ಇವುಗಳ ಶರೀರಗಳಲ್ಲಿ ಪೂರ್ವಾರ್ಧ ಭೇದಂಗಳಿಂದಲೂ ಉತ್ತಮಾರ್ಧಭೇದಂಗಳಿಂದಲೂ ಪೂರ್ವಾರ್ಧಭದ್ರಮಂದ್ರ ಮೊದಲಾಗಿ ಒಂಬತ್ತು ಜಾತಿಗಳೂ ಉತ್ತರಾರ್ಧಭದ್ರಮಂದ್ರ ಮೊದಲಾಗಿ ಒಂಬತ್ತು ಜಾತಿಗಳು ಸಹ ಹದಿನೆಂಟು ವಿಧಗಳಾಗುವುವು. ಇವು ಸಂಕೀರ್ಣ

ಜಾತಿಗಳು. ಹದಿನೆಂಟನೇ ಪರಿಯೆಂದು ಕಾಶ್ಯಪನು ಹೇಳಿರುವನು ಮತ್ತೂ ಈ ಆನೆಗಳ ಪ್ರಮಾಣವಂ ಹೇಳುವೆನು: ಐದು ಆರತ್ನಿ ಪ್ರಮಾಣ ಉನ್ನತತ್ವವು ಏಳು ಆರತ್ನಿ ಪ್ರಮಾಣ ದೈರ್ಘ್ಯವು ಎಂಟು ಆರತ್ನಿ ಪ್ರಮಾಣ ವಿಸ್ತಾರವು ಉಳ್ಳಗಜಗಳು ಮೃಗಜಾತಿಗಳೆನಿಸಿ ಕೊಳ್ಳುವವು. ಈ ಮೃಗಜಾತಿಗಳಿಗಿಂತಲೂ ಒಂದು ಆರತ್ನಿ ಪ್ರಮಾಣ ಅಧಿಕವಾದ ಉನ್ನತತ್ವವು ದೈರ್ಘ್ಯವು ವಿಸ್ತಾರವುಳ್ಳ ಗಜಗಳು ಮಂದ್ರ ಜಾತಿಗಳೆನಿಸಿಕೊಳ್ಳುವವು ಈ ಮಂದ್ರಜಾತಿ ಗಜಗಳಿಗೆ ಪ್ರಮಾಣವು ನಿಯಮವಿಲ್ಲದೆ ನ್ಯೂನಾಧಿಕವಾಗಿರುವುದು ಎಲೈ ಸುಗಂಧಮಹಾರಾಜನೆ ಈ ಗಜಗಳ ಲಕ್ಷಣಗಳಂ ಪೇಳುವೆನು."[೬೪]

**ಭದ್ರಜಾತಿಯ ಲಕ್ಷಣ**

"ಕೇಳು ಭದ್ರಜಾತಿಗಳ ಲಕ್ಷಣವೆಂತೆಂದರೆ ಪರ್ವತಗಳಲ್ಲಿ ಸಂಚಾರವಂ ಮಾಡುತ ಕಂಕುಳುಗಳಲ್ಲಿಯೂ ಅಂಡಕೋಶಗಳಲ್ಲಿಯೂ ಸಮಪ್ರಮಾಣವುಳ್ಳವಾಗಿ ದೃಢವಾದ ಶರೀರವು ಕೂರ್ಮದಂತೆ ತುಂಡಾದ ಅಂಗಾಲುಗಳು ಉಗುರುಗಳ ಮಧ್ಯದಲ್ಲಿ ರೋಮಗಳೂ ಅಧಿಕವಾದ ಮಾಂಸವು ಉಳ್ಳವಾಗಿ ಪ್ರಶಸ್ತವಾದ ಪಾದಗಳಿಂದಲೂ ನಖಗಳಿಂದಲೂ ಶರೀರದಲ್ಲಿ ಬಿಂದುಗಳಿಂದಲೂ ಮನೋಹರವಾಗಿ ಕೃಶವೂ ಅಲ್ಲದೆ ಅತ್ಯಂತ ಸ್ಥೂಲವು ಅಲ್ಲದೆ ಇರುವುದಾಗಿ ಜೇನುತುಪ್ಪದಂತೆ ವರ್ಣವುಳ್ಳನೇತ್ರಗಳೂ ಎರಡು ಕೊಂಬುಗಳೂ ಉಳ್ಳದ್ದಾಗಿ ಧನುಸ್ಸಿನಂತೆ ಬೊಗ್ಗಿರುವ ಬೆನ್ನುಮೂಳೆಯಿಂ ಕೂಡಿರುವ ಅಂಗಪ್ರತ್ಯಂಗಗಳಲ್ಲಿಯೂ ವಿಶದಮಾಗಿ ಕಾಣುತ ಶುಭಕರಗಳಾದ ಆನೆಗಳು ಭದ್ರಜಾತಿಗಳೆನಿಸಿಕೊಳ್ಳುವವು. ಈ ಆನೆಗಳ ಆರೋಹಣವು ಯಶಸ್ಸಂ ಬಲವಂ ಪರಾಕ್ರಮವಂ ಸಹಾ ಉಂಟುಮಾಡುವುದು ಮತ್ತೂ ಪಾಪವಂ ಪರಿಹರಿಸುವುದು."[೬೫]

**ಮಂದ್ರಜಾತಿಯ ಲಕ್ಷಣ**

"ಇಂತಲ್ಲದೆ ಮಂದ್ರಜಾತಿ ಗಜಗಳ ಲಕ್ಷಣವೆಂತೆಂದರೆ ನದಿಗಳಲ್ಲಿ ಸಂಚಾರವು ಉನ್ನತವಾದ ಪ್ರಮಾಣವು ಶರೀರದ ಪೂರ್ವಾರ್ಧದಲ್ಲಿ ಬೊಗ್ಗಿರೋಣವು ಶರೀರದಲ್ಲಿ ಸುಕ್ಕಿಲ್ಲದೆ ಇರೋಣವು ಕ್ಷಮೆಯು ಯುದ್ಧದಲ್ಲಿ ಆಸಕ್ತಿಯು ವಿಸ್ತಾರವಾದ ಸೊಂಡಿಲು ಕಿವಿಗಳು ಮುಖವು ಭವ್ಯವಾದ ಹೊಟ್ಟೆಯು ಪುಚ್ಛಮೂಲವು ಎರಡು ಕೊಂಬುಗಳೂ ಶರೀರದಲ್ಲಿ ದಾರ್ಢ್ಯವಿಲ್ಲದಿದ್ದರಿಂ ಸ್ವಲ್ಪ ಜೋಲುವ ಚರ್ಮ ಮಾಂಸಗಳು ಉಳ್ಳದ್ದಾಗಿ ಶಾಮವರ್ಣವಾದ ನೇತ್ರಗಳುಳ್ಳ ಗಜಗಳು ಮಂದ್ರಜಾತಿಗಳೆನಿಸಿಕೊಳ್ಳುವವು ಇವು ಮಧ್ಯಮ ಗಜಗಳು."[೬೬]

## ಮೃಗಜಾತಿಯ ಲಕ್ಷಣ

"ಮೃಗಜಾತಿ ಗಜಗಳ ಲಕ್ಷಣವೆಂತೆಂದರೆ ವನದಲ್ಲಿ ಸಂಚಾರವು ಶಿಥಿಲವಾದ ಚರ್ಮ ಮಾಂಸಗಳು ದೀರ್ಘಗಳಾಗಿ ಕೃಶಗಳಾಗಿರುವ ಎರಡು ಕೊಂಬುಗಳು ಮನೋಹರವಾದ ವರ್ಣವು ಶರೀರದಲ್ಲಿ ದಪ್ಪವಾದ ಸುಕ್ಕುಗಳು ಮನೋಹರವಾದ ರೆಪ್ಪೆಗಳೊಡಗೂಡಿದ ನೇತ್ರಗಳು ನಖಗಳು ಮುಖವು ಬಾಲವು ಹಣೆಯು ಉಳ್ಳದ್ದಾಗಿ ಶರೀರದಲ್ಲಿ ವಕ್ರುಳ್ಳದ್ದಾಗಿ ಮೃದುವಾದ ರೋಮಗಳು ಕೃಶವಾದ ಸೊಂಡಿಲು ಪಾಗಲು ಕಂಠವು ದಪ್ಪವಾದ ಬಾಲವು ಕಿರಿದಾದ ಗುಹ್ಯವು ಬೆನ್ನುಮೂಳೆಯೂ ಉಳ್ಳ ಆನೆಗಳು ಮೃಗಜಾತಿಗಳೆನಿಸಿಕೊಳ್ಳುವವು. ಇವು ಅಧರ್ಮಗಜಗಳು. ಇದಲ್ಲದೆ ಸಂಕೀರ್ಣ ಜಾತಿ ಆನೆಗಳ ಶರೀರದಲ್ಲಿ ಯಾವ ಲಕ್ಷಣಂಗಳಂ ತಿಳಿದು ಸಂಕೀರ್ಣ ಜಾತಿ ಭೇದಗಳಂ ತಿಳಿಯತಕ್ಕದ್ದು ಮತ್ತೂ ಎಲ್ಯೆ ಸುಗಂಧಮಹಾರಾಯನೆ."[೬]

## ಆನೆಗಳ ಪ್ರಭೇದ

"ಸ್ಫುಟವಾದ ಬಿಂದುಗಳಿಂದೊಡಗೂಡಿದ(ದೇಹದ ಮೇಲಿನ ಬಣ್ಣದ ಚಿಕ್ಕೆ) ಮನೋಹರವಾದ ಗೌರವರ್ಣವುಳ್ಳ, ಕೆಂಪು ವರ್ಣದ ನಯನಕಾಂತಿಯನ್ನು ಹೊಂದಿದ ಸಿಗ್ಧವಾದ ಹಾಗೂ ಬಲವಾದ ಕೋರೆಗಳುಳ್ಳ. ಈ ರೀತಿಯ ಲಕ್ಷಣಗಳುಳ್ಳ ಆನೆಯು **ಬ್ರಹ್ಮಾಂಶವುಳ್ಳದ್ದು** ಎಂದು ತಿಳಿಯಲ್ಪಡುತ್ತದೆ.

ರಾಜರ ವಿಜಯ ಹಾಗೂ ಆರೋಗ್ಯವರ್ಧನೆಗಳಿಗೆ ಕಾರಣವಾದ ಈ ಆನೆ ಪೂಜಾರ್ಹವಾಗಿದೆ. ಹೆಗಲಿನ ಸುತ್ತಳತೆಯಲ್ಲಿ ಹಾಗೂ ಕಂಠಭಾಗದಲ್ಲಿ ಸಮವಾದ ದಪ್ಪವುಳ್ಳ, ದೊಡ್ಡದಾದ ಆಸನ ಭಾಗವುಳ್ಳ, ಮುಖದಲ್ಲಿ ಕೆಂಪು ಕಮಲದ ಛಾಯೆಯುಳ್ಳ ರೋಮಯುಗ್ಮ ಗಳಿಂದ ಶೋಭಿಸುವ, ಬಹಳ ಹೊತ್ತು ಮದವೇರಿದ ಸ್ಥಿತಿಯಲ್ಲಿರಬಲ್ಲ, ಮೇಘನಾದದಿಂದ ಹರ್ಷಿಸುವ ಆನೆಯು **ಪ್ರಜಾಪತಿಯ ಅಂಶವುಳ್ಳದಾಗಿದೆ**. ಇದು ಸಂತಾನವೃದ್ಧಿಯನ್ನು ಮಾಡುತ್ತದೆ.

ಸ್ವಸ್ತಿಕದ ಚಿಹ್ನೆಗಳಂತೆ ಅರಳುತ್ತಿರುವ ಕಮಲಗಳಂತೆ ವರ್ತುಳಾಕಾರಗಳಂತೆ ಇರುವ ಬಿಂದುಗಳನ್ನು, ಸುಳಿಗಳನ್ನು ಹೊಂದಿರುವ ಶರೀರವುಳ. ಕೆಂಪು ಕಮಲದಂತಹ ಕಣ್ಣುಗಳುಳ್ಳ ಆನೆಯ **ಇಂದ್ರಾಂಶ**ಕವಾದ ಆನೆಯಾಗಿದೆ. ಶ್ರೇಷ್ಠ ರಾಜರ ಆಸ್ತಿಯಾಗಿರುವ ಈ ಆನೆಯು ಸಮರದಲ್ಲಿ ವಿಜಯವನ್ನು ತಂದುಕೊಡುತ್ತದೆ.

ತಾಮ್ರವರ್ಣದ ತುಟಿಗಳುಳ್ಳ, ನೆಲ್ಲಿಕಾಯಿಯ ಕಾಂತಿಯುಳ್ಳ ನಾಲಗೆಯನ್ನು ಹೊಂದಿದ, ಕಂಡ ಸಂಪಗೆಯಂಥ ಕಣ್ಣುಗಳಿರುವ ಹಾಗೂ ಇಂಥದೇ ಕೋಣೆಗಳನ್ನು ಹೊಂದಿರುವ

ಆನೆಯು **ಕುಬೇರನ ಅಂಶ**ದಿಂದ ಹುಟ್ಟಿದ್ದು, ಧನ-ಧಾನ್ಯ ಸಮೃದ್ಧಿಯನ್ನುಂಟುಮಾಡುತ್ತದೆ. ರಾಜಭವನದಲ್ಲಿದ್ದು ಈ ಆನೆಯು ಪೂಜಿತವಾಗುತ್ತದೆ.

ಕಪ್ಪು ಮೋಡದಂತಹ ಬಣ್ಣವುಳ್ಳ, ಮೆಲುನಡಿಗೆಯುಳ್ಳ, ಏಕಾಕಿಯಾಗಿ ಚಲಿಸುವ, ಹೆಗಲು ಮತ್ತು ಶಿರಸ್ಸಿನ ಭಾಗದಲ್ಲಿ ಸುಂದರವಾಗಿರುವ, ಗಂಭೀರವಾಗಿ ಮೋಡದಂತೆ ಗರ್ಜಿಸುವ, ವಿಪುಲವಾಗಿ ಮದೋದಜಕವನ್ನು ಸ್ರವಿಸುವ ಆನೆಯು **ವರುಣಾಂಶ**ದಿಂದ ಹುಟ್ಟಿದುದಾಗಿದೆ. ಯುದ್ಧದಲ್ಲಿ ವೈರಿಗಳನ್ನು ನಾಶ ಮಾಡಿ, ಇದು ತನ್ನ ಒಡೆಯನಿಗೆ ಜಯವನ್ನು ತಂದುಕೊಡುತ್ತದೆ."[೬೮]

"ಯಾವ ಗಜವು ಕಂಠದಲ್ಲಿ ತ್ರಿವಳಿಗಳುಳ್ಳ, ಕಂದುಬಣ್ಣದ ಕಣ್ಣುಗಳುಳ್ಳ, ಕೇದಗೆ ಛಾಯೆಯ ದಂತಗಳುಳ್ಳ, ದಟ್ಟ ಕೆಂಪಿನ ಸೊಂಡಿಲ ಮುಂಭಾಗವುಳ್ಳ. ಬಿಂದುಗಳುಳ್ಳ, ಬಿಳಿ ಬಣ್ಣದ ಆನೆಯು **ಚಂದ್ರಾಂಶ**ಕವಾಗಿದೆ. ಸಮರಾಂಗಣದಲ್ಲಿ ಈ ಆನೆಯು ರಾಜನಿಗೆ ಜಯವನ್ನು ತಂದುಕೊಡುತ್ತದೆ.

ಅಗ್ನಿಯ ಜ್ವಾಲೆಗಳಂತಿರುವ ರೋಮಗಳುಳ್ಳ, ಬಾಲದಲ್ಲಿ ಕಂದು ಕೂದಲುಳ್ಳ ಕಂದು ಬಣ್ಣದ ಕಣ್ಣುಗಳುಳ್ಳ ಕಂದು ಬಣ್ಣದ ನಾಲಗೆಯುಳ್ಳ, ಕಂದು ಬಣ್ಣದ ತುದಿ ಸೊಂಡಿಲುಳ್ಳ ಆನೆಯು **ಅಗ್ನಿಯ ಅಂಶ**ದಿಂದ ಹುಟ್ಟಿದ್ದು, ಯುದ್ಧದಲ್ಲಿ ಸಾಕ್ಷಾತ್ ಅಗ್ನಿಯಂತೆ ಸುಳಿದು, ಸದಾ ವೈರಿಗಳ ಸೈನ್ಯವನ್ನು ಸಂಪೂರ್ಣವಾಗಿ ಭಸ್ಮ ಮಾಡುತ್ತದೆ.

ಕೃಷ್ಣ ವರ್ಣದ ತನುಚ್ಛಾಯೆಯುಳ್ಳ, ಕಿವಿಗಳಲ್ಲಿ ಮತ್ತು ಕಣ್ಣುಗಳಲ್ಲಿ ಗೌರಛಾಯೆಯನ್ನು ಹೊಂದಿದ, ದೀಪಶಿಖೆಯಂತೆ ಹೊಳೆಯುವ ನಖಗಳುಳ್ಳ ಪುಷ್ಟವಾದ ಮಾಂಸಲ ದೇಹವುಳ್ಳ ಆನೆಯು **ಅಗ್ನಿ-ಮಾರುತರ ಅಂಶ**ದಿಂದ ಜನಿಸಿರುತ್ತದೆ. ಕೋಪಿಷ್ಠವೂ ವೇಗವುಳ್ಳದ್ದೂ ಆಗಿದ್ದು ಅಂಕುಶಕ್ಕೆ ಬಗ್ಗಲಾರದು ಎಂಬುದೇ ಇದರ ದೋಷವಾಗಿದೆ. ಆದರೆ ಯುದ್ಧವು ಸಂಭವಿಸಿದಾಗ ಇದರ ಈ ದೋಷವೇ ಗುಣವಾಗಿ ಪರಿಣಮಿಸುತ್ತದೆ. ವೈರಿಗಳ ಸೈನ್ಯದಲ್ಲಿ ಈ ಆನೆ ಪ್ರಚಂಡವಾದ ಭಯವನ್ನು ಉಂಟುಮಾಡುತ್ತದೆ."[೬೯]

"ಕೋರೆಗಳೆರಡರ ಮಧ್ಯದಿಂದ ಪ್ರಾರಂಭಿಸಿ, ಕ್ರಮೇಣ ಕೆಂಪು ತುದಿಯ ತನಕ ಸೊಂಡಿಲು ಉದ್ದವಾಗುತ್ತ ಹೋಗಿರುವ, ಪ್ರಮಾಣಬದ್ಧವಾದ-ಆಯತವಾದ ಅಂಗುಲಿಗಳನ್ನು ಹೊಂದಿದ, ಸುಗಂಧಭರಿತ ಮದೋದಕದ ಹನಿಗಳನ್ನು ಸೂಸುವ ಧೀರ್ಘವಾದ ನಿಶ್ವಾಸವನ್ನು ಹೊಮ್ಮಿಸುವ, ಮೋಡದ ಗಡುಗಿನಂತೆ ಧ್ವನಿ ಮಾಡುವ, ನಿರಿಗೆಗಳೇ ಇಲ್ಲದ ಸದೃಢ ಶರೀರವನ್ನು ಹೊಂದಿದ, ಮೃದುವಾದ, ತಿಳಿಯಾದ ಕಾಡಿಗೆಯಂಥ ಕಪ್ಪು ವರ್ಣವುಳ್ಳ,

ಸರ್ವಾಂಗಗಳಲ್ಲಿ ತುಂಬು ಕೂದಲುಗಳುಳ್ಳ, ಸರ್ವಾಂಗಗಳಲ್ಲೂ ನೀಲಕಮಲದ ಛಾಯೆಯುಳ್ಳ, ಕೇದಗೆ ಹೊಡೆಯ ಬಂಗಾರವರ್ಣದ, ದೃಢವಾದ ವರ್ತುಲಾಕಾರದ ಕೋರೆಗಳುಳ್ಳ, ಆಯತ, ಉನ್ನತ, ಆದರೆ ಮಧ್ಯದಲ್ಲಿ ತಗ್ಗಾಗಿರುವ ಗಂಡಸ್ಥಳವುಳ್ಳ, ರೋಮರಹಿತವಾದ ತುಟಿಗಳುಳ್ಳ, ಗದೆಯಾಕಾರದ-ಸಮವಾದ-ಶುಭವಾದ ತುಟಿಯ ಭಾಗಗಳುಳ್ಳ, ಅತ್ಯಂತ ರಮ್ಯವಾದ-ನೋಡಲು ಮನೋರಮವಾದ ಮುಖಮಂಡಲವುಳ್ಳ, ಜೇನುಬಣ್ಣದ ನೇತ್ರಗಳುಳ್ಳ, ಲೋಹಿತವರ್ಣದ ಎಳೆಗಳುಳ್ಳ, ಬಲಿಷ್ಠವಾದ ಮೃದುವಾದ-ವಿಸ್ತೀರ್ಣವಾದ-ಸಮವಾದ, ಸೀಳುಗಳಿಲ್ಲದ, ನರಗಳಿಲ್ಲದ ಕಿವಿಗಳುಳ್ಳ, ದುಂದುಂಭಿ ಧ್ವನಿಯುಳ್ಳ, ವರ್ತುಲಾಕಾರದ ಉನ್ನತವಾದ ಸಮವಾದ ಲಕ್ಷ್ಮೀಕುಚ ಸದೃಶವಾದ ಕುಂಭಗುಳ್ಳ, ರಮ್ಯವಾದ ಲಲಾಟ ಪ್ರದೇಶವುಳ್ಳ, ಮಾಂಸಲವಾದ ಹಾಗೂ ದೀರ್ಘವಾದ ಹೆಗಲುಗಳುಳ್ಳ ನೇರವಾದ, ದೀರ್ಘವಾದ, ದಪ್ಪನಾದ, ಕೆಳಗೆ ಹೋದಂತೆ ಸ್ವಲ್ಪ ಕೃಶವಾಗುತ್ತ ಹೋದ ಮುಂಗಾಲುಗಳುಳ್ಳ, ಕೂರ್ಮಾಕಾರದ ಪಾದಗಳಲ್ಲಿ ಅರ್ಧಚಂದ್ರಾಸಾರದ ನಖಗಳುಳ್ಳ, ಸುಂದರವಾದ ಇಂಥ ಇಪ್ಪತ್ತು ಅಥವಾ ಹದಿನೆಂಟು ನಖಗಳುಳ್ಳ, ವಿಶಾಲವಾದ ಉರಸ್ಥಳವುಳ್ಳ, ಉಬ್ಬಿದ ಹೊಟ್ಟೆಯುಳ್ಳ, ಉಬ್ಬಿದ ಕುಚಗಳುಳ್ಳ, ಜೋಲು ಬಿದ್ದಿರದ, ದೃಢವಾದ ಶಿಶ್ನವುಳ್ಳ, ಶ್ರೇಷ್ಠವಾದ ವರಾಹ ಜಘನದಂತೆ ಕಜಘನವುಳ್ಳ, ಬಿಲ್ಲಿನಂತೆ ಬಾಗಿದ ಬೆನ್ನುಳ್ಳ, ಕೃಶವಾದ ಉದ್ದನೆಯ ಬಾಲವುಳ್ಳ, ಶಂಖ, ಚಕ್ರ, ಗದಾಕಾರವಾದ ಬಿಂದು(ಚಿಹ್ನೆ) ಅಥವಾ ಸುಳಿಗಳನ್ನು ಹೊಂದಿದ **ಆನೆಯು ವಿಷ್ಣುವಿನ ಅಂಶದ್ದೂ** ಎಂದು ತಿಳಿಯಲ್ಪಡುತ್ತದೆ. ಇದು ಅಭಿಷೇಕ ಮಾಡಲು ಯೋಗ್ಯವಾಗಿದ್ದು, ಪೂಜ್ಯವೂ ಸರ್ವಕಾರ್ಯ ಸಾಧಕವೂ ಆಗಿದೆ. ಧನ ಧಾನ್ಯ ಸಮೃದ್ಧಿಯನ್ನುಂಟು ಮಾಡಿ, ರತ್ನವನ್ನು ನೀಡುವ ಈ ಆನೆಯು ರಾಷ್ಟ್ರದಲ್ಲಿ ಮಂಗಳವನ್ನುಂಟುಮಾಡುತ್ತದೆ."[೭೦]

ಯಾವ ಗಜವು "ನಿತ್ಯವೂ ಶುಚಿಯಾದ ಆಹಾರವನ್ನು ಸೇವಿಸುವ, ನಿರಿಗೆಗಳಿಲ್ಲದ, ನಿರೋಗಿಯಾದ, ಸ್ಥೈರ್ಯವುಳ್ಳ, ಪರಾಕ್ರಮಿಯಾದ ಆನೆಯು **ದೇವಸತ್ವವುಳ್ಳದ್ದಾಗಿರುತ್ತದೆ.** ಯಾವ ಗಜವು ಮೇಧಾವಿಯೂ, ಕಾರ್ಯದಕ್ಷವೂ, ಕಾಮುಕವೂ, ಚಪಲವೂ, ಚತುರವೂ, ಹಸಿರನ್ನು ವೀಕ್ಷಿಸುವುದರಲ್ಲಿ ಪ್ರಶಸ್ತವೂ ಆದ ಆನೆಯು **ಗಂಧರ್ವಸತ್ವವುಳ್ಳುದ್ದಿರುತ್ತದೆ.** ನೀರಲ್ಲಿ ಮುಳುಗು ಹಾಕುವುದರಲ್ಲಿ ಅಸಕ್ತವಾದ, ಕೋಪಿಷ್ಟವಾದ, ಬಹಳ ಕಾತರತೆಯುಳ್ಳ, ನಿತ್ಯ ಭೋಜನಲಂಪಟವಾದ ಆನೆಯು **ವಿಪ್ರಸತ್ವವುಳ್ಳದ್ದಾಗಿರುತ್ತದೆ.** ಸಹನ ಶಕ್ತಿಯುಳ್ಳದ್ದೂ, ಉತ್ಸಾಹಿಯೂ, ಬಲಿಷ್ಠವೂ, ಯುದ್ಧ ವಿಶಾರದವೂ, ನಿರ್ಭೀತವೂ, ಧೀರವೂ ಆದ ಆನೆಯು **ಕ್ಷತ್ರಸತ್ವವುಳ್ಳುದಾಗಿರುತ್ತದೆ.** ಯಾವ ಗಜವು ವಿಪರೀತ ಶಿಕ್ಷೆಗೆ ಮತ್ತು ದಂಡನೆಗೆ ಮಾತ್ರ ಬಗ್ಗುವಂತಹ, ನೀಚ, ಮೂರ್ಖ, ಮಲಿನವಾದದ್ದನ್ನು ತಿನ್ನುವ ಹೊಡೆದಾಟದಲ್ಲಿ

ತೊಡಗಿಕೊಂಡಿರುವ, ಶೂರವಾದ ಆನೆಯು **ಶೂದ್ರ ಸತ್ತ್ವ**ವುಳ್ಳದಾಗಿರುತ್ತದೆ ಎಂದು ಕರೆಯುತ್ತಾರೆ. ಯಾವ ಗಜವು ವಿಶ್ವಾಸಘಾತಕವಾದ, ಕ್ರೂರವಾದ, ಕುಟಿಲವಾಗಿ ಸಂಚರಿಸುವ, ಹೆಚ್ಚಿಗೆ ತಿನ್ನದೆ, ಮದವೇರದೆ ಇರುವ ಆನೆಯು **ಸರ್ಪಸತ್ತ್ವ**ವುಳ್ಳುದಾಗಿದೆ. ಈ ಮೂರು ಸತ್ತ್ವಗಳು ರಾಜಸದ ಗುಣಗಳಾಗಿವೆ. **ರಾಜಸ ಸತ್ತ್ವ**ದ ಆನೆಯು ಪಿತ್ತಭೂಯಿಷ್ಠವೂ ಉಗ್ರತೆಯುಳ್ಳುದೂ ಆಗಿದೆ. ಜೊತೆಗೆ ವಿವೇಕವಿಲ್ಲದೆ ಅಡ್ಡಾದಿಡ್ಡಿಯಾಗಿ ಸಂಚರಿಸುವ, ಉನ್ಮತ್ತವಾಗಿ ವರ್ತಿಸುವ ಆನೆಯು **ಪೈಶಾಚಸತ್ತ್ವ**ವುಳ್ಳದಾಗಿದೆ. ರಾತ್ರಿಯಲ್ಲಿ ಸ್ವಚ್ಛಂದವಾಗಿ ಸಂಚರಿಸುತ್ತ, ಮನುಷ್ಯರನ್ನು ಕೊಲ್ಲುವ, ಬಲಿಷ್ಠವಾದ ವೇಗವುಳ್ಳ ಆನೆಯು **ರಾಕ್ಷಸ ಸತ್ತ್ವ**ವುಳ್ಳುದಾಗಿದೆ. ಈ ಎರಡು ತಾಮಸ ಸತ್ತ್ವಗಳುಳ್ಳ ಆನೆಗಳು, ತಾಮಸೀ ಗುಣದವುಗಳೂ ಬಿರುಗಾಳಿಯಂತೆ ನುಗ್ಗುವಂಥವುಗಳೂ ಆಗಿವೆ. ಇಂಥ ಆನೆ ನಿರ್ದಯವೂ ನಿದ್ರಾಳುವೂ, ಚಪಲವೂ, ವೇಗವುಳ್ಳುದು ಆಗಿರುತ್ತದೆ."[೭೧]

"ಯಾವ ಆನೆಯು ಬಾಲದಲ್ಲಿ ಬಿಳಿದಾದ ರೋಮಗಳುಳ್ಳದ್ದಾಗಿರುತ್ತದೆಯೋ ಕಣ್ಣುಗಳು ಬಣ್ಣ ಬಿಳಿದಾಗಿರುತ್ತದೆಯೋ ಅದು **ವರಾವತ ವಂಶ**ದ ಆನೆಯಾಗಿರುತ್ತದೆ. ಯುದ್ಧದಲ್ಲಿ ಸಾಮರ್ಥ್ಯವುಳ್ಳ, ಸಾರಸ ಪಕ್ಷಿಯಂತೆ ಕಣ್ಣುಗಳುಳ್ಳ, ಕೋಪಿಷ್ಠವಾದ, ಯುದ್ಧದಲ್ಲಿ ಪರಿಣತಿಯುಳ್ಳ, ಗಿಡ್ಡ ಕೂದಲುಗಳುಳ್ಳ, ದಪ್ಪನಾದ ತಲೆಯುಳ್ಳ ಆನೆ **ಪುಂಡರೀಕ ವಂಶ**ದ್ದಾಗಿದೆ. ಶ್ಯಾಮವರ್ಣದ, ಸುಂದರವಾದ ದೇಹದ, ಕಪ್ಪು ಕೇಶಗಳ, ತೆಳ್ಳಗಿನ ಹೊಟ್ಟೆಯ, ದಪ್ಪ ಚಿಕ್ಕೆಗಳ, ಹತ್ತು ಮೊಳ ಸುತ್ತಳತೆಯ ಆನೆಯು **ಪುಷ್ಪದಂತ ವಂಶ**ದ ಆನೆಯಾಗಿದೆ. ಗರುಡನ ಹಾಗೆ ತೀಕ್ಷ್ಣವಾದ ಹಾಗೂ ಅಗ್ನಿವರ್ಣದ ಕಣ್ಣುಗಳುಳ್ಳ ವೇಗವುಳ್ಳ ಜಲಲಂಪಟವಾದ ಅತ್ಯಂತ ವಿಸ್ತಾರವೂ, ಆಯತವೂ ಆದ ದೇಹವುಳ್ಳ ಆನೆಯು **ವಾಮನ ವಂಶ**ದ ಆನೆಯಾಗಿದೆ. ಪ್ರಚಂಡವಾದ ಹಾಗೂ ಕೆಂಪು ಕಮಲದ ಛಾಯೆಯುಳ್ಳ, ಪಾರಿವಾಳದಂತಹ ಕಣ್ಣುಗಳುಳ್ಳ, ಶಾಂತವಾದ, ಮೇಧಾವಿಯಾದ, ರೋಮಮೃತತನುವನ್ನು ಹೊಂದಿದ ಆನೆ **ಸುಪ್ರತೀಕ ವಂಶ**ದ ಆನೆಯಾಗಿದೆ. ಸುಂದರವಾದ ಬಾಲ ಹಾಗೂ ದಂತಗಳನ್ನು ಹೊಂದಿ, ಚೇತೋಹಾರಿಯಾದ ಸೊಂಡಿಲುಳ್ಳ, ಉನ್ನತವಾದ ಸ್ಥೂಲಜಘನವುಳ್ಳ ಆನೆ, **ಅಂಜನ ವಂಶ**ದ ಆನೆಯಾಗಿದೆ. ರೌದ್ರವೂ, ದಪ್ಪವಾದ ಕುತ್ತಿಗೆಯುಳ್ಳುದೂ, ಸಣ್ಣ ಕಿವಿ ಹಾಗೂ ಸೊಂಡಿಲುಳ್ಳುದೂ, ಸಣ್ಣ ಬಾಲವುಳ್ಳುದೂ, ದಪ್ಪವಾದ ಧ್ವನಿಯುಳ್ಳದೂ ಆದ ಆನೆ **ಸಾರ್ವಭೌಮ ವಂಶ**ದ ಆನೆಯಾಗಿದೆ. ಹಾಗೂ ಕುಮುದದಂತೆ ಕಾಂತಿಯುಳ್ಳುದೂ, ದಪ್ಪವಾದ ಶರೀರವುಳ್ಳುದೂ, ಸುಂದರವಾದ ಕೆಂಪು ಬಣ್ಣಗಳನ್ನು ಹೊಂದಿದೂ, ಉದ್ದವಾದ ಕಪ್ಪು ಸೊಂಡಿಲುಳ್ಳುದೂ ಆದ ಆನೆಯು **ಕುಮುದವಂಶ**ದ ಆನೆಯಾಗಿದೆ. ಇದು ಗಜಜಾತಿ ಭೇದ ಲಕ್ಷಣ."[೭೨]

### ಮಖ್ನಾ ಆನೆ

ಗಂಡಾಗಿ ಹುಟ್ಟಿ, ಲೈಂಗಿಕ ಕ್ರಿಯೆಯಲ್ಲಿ ತೊಡಗುವ ಸಕಲ ಸಾಮರ್ಥ್ಯಗಳಿದ್ದರೂ ಪ್ರಾಕೃತಿಕ ವೈಚಿತ್ರದ ಪರಿಣಾಮದಂತೆ ಬೆಳೆಯಲಿಲ್ಲವೆಂಬ ಒಂದೇ ಕಾರಣಕ್ಕೆ ಹೆಣ್ಣಾನೆಗಳ ತಿರಸ್ಕಾರಕ್ಕೆ ಒಳಗಾಗಿ ವಿರಹ ವೇದನೆ ಅನುಭವಿಸುವ ಒಂಟಿ ಸಲಗವೇ ಈ ಮಖ್ನಾ ಆನೆ. ದಂತವಿಲ್ಲದ ಕಾರಣಕ್ಕೆ ಯಾವ ಹೆಣ್ಣಾನೆಗಳು ಅವುಗಳ ಜೊತೆ ಕಾಮಕ್ರೀಡೆಯಲ್ಲಿ ತೊಡಗಲು ಬಯಸುವುದಿಲ್ಲ. ಅಷ್ಟೇ ಅಲ್ಲ, ಉಳಿದ ಆನೆಗಳು ತಮ್ಮ ಹಿಂಡಿನೊಳಗೂ ಸೇರಿಸುವುದಿಲ್ಲ. ಇದಲ್ಲೆದರ ಪರಿಣಾಮ ಕಾದಾಟಕ್ಕೆ ನಿಂತರೆ ಎಂತಹ ಬಲಿಷ್ಠ ಸಲಗದ ದಂತಗಳನ್ನು ಮುರಿದು ಹಾಕಬಲ್ಲ ಶಕ್ತಿ ಹೊಂದಿರುವ ಮಖ್ನಾ ಆನೆಗಳು ಅನಿವಾರ್ಯ ವಿರಹ ಅನುಭವಿಸಬೇಕಾಗುತ್ತದೆ.

ಗಂಡಾನೆಯ ಎಲ್ಲಾ ದೈಹಿಕ ಲಕ್ಷಣ ಹಾಗೂ ಸಾಮರ್ಥ್ಯ ಹೊಂದಿದ್ದರೂ ದಂತವಿಲ್ಲದ ಕಾರಣಕ್ಕೆ ಬೇರೆ ಆನೆಗಳ ಗುಂಪಿನಿಂದ ಬಹಿಷ್ಕೃತನಾಗುವ, ಲೈಂಗಿಕ ಸಂಗಾತಿ ದೊರೆಯದ ಮಖ್ನಾಗಳ ಜನನ ತೀರ ಅಪರೂಪ. ವನ್ಯಜೀವಿ ತಜ್ಞರ ಪ್ರಕಾರ ಸುಮಾರು ೪೦೦ ಆನೆಗಳಿಗೆ ಒಂದು ಆನೆ ಮಖ್ನಾ ಲಕ್ಷಣಗಳೊಂದಿಗೆ ಜನ್ಮ ತಾಳುತ್ತದೆ. ಕರ್ನಾಟಕದಲ್ಲಿ ಈಗ ೪ರಿಂದ ೫ ಮಖ್ನಾ ಆನೆಗಳಿವೆ ಎಂದು ಅಂದಾಜಿಸಲಾಗಿದೆ. ಅದರಲ್ಲಿ ಅತಿ ಹೆಚ್ಚು ದಾಂದಲೆ ನಡೆಸುತ್ತಿರುವ ಮಖ್ನಾ ಆನೆ ಮಾತ್ರ ಎಂಬುದು ವಿಶೇಷ(ವಿಜಯವಾಣಿ, ೧೦.೧.೨೦೧೪, ಪು.೯).

ಮಖ್ನಾಗಳು ಯೌವನಾವಸ್ಥೆಗೆ ತಲುಪಿದ ಮೇಲೆ ಅತ್ಯಂತ ನಿಕೃಷ್ಟ ಪರಿಸ್ಥಿತಿ ಎದುರಿಸಬೇಕಾಗುತ್ತದೆ. ಇವು ಯಾವುದೇ ಆನೆಗಳ ಹಿಂಡಿನೊಳಗೆ ಸೇರಿಸುವುದಿಲ್ಲವೆಂಬ ಕಾರಣದಿಂದ ಮಖ್ನಾ ಆನೆಗಳು ಅನಿವಾರ್ಯ ವಿರಹ ಅನುಭವಿಸುತ್ತಾ ತಣಿಯದ ಕಾಮದಾಹದಿಂದ ಆಕ್ರೋಶಗೊಳ್ಳುವ ಅವು ಸಿಕ್ಕ ಸಿಕ್ಕ ಕಡೆ ದಾಂದಲೆ ಎಬ್ಬಿಸಲು ಶುರು ಮಾಡುತ್ತವೆ. ಬಲವಂತವಾಗಿ ಹೆಣ್ಣಾನೆಗಳ ಜೊತೆಗೂಡಲು ಹೋದರೆ ಮಿಕ್ಕ ಆನೆಗಳು ಒಟ್ಟಾಗಿ ಓಡಿಸುತ್ತವೆ. ನೇರವಾಗಿ ಹೇಳಬೇಕಾದರೆ ಉಳಿದ ಆನೆಗಳ ಗುಂಪಿನಿಂದ ಬಹಿಷ್ಕಾರಕ್ಕೆ ಒಳಗಾಗಿ ಮಖ್ನಾ ಆನೆಗಳು ಒಂಟಿಯಾಗಿ ಜೀವನ ಕಳೆಯಬೇಕಾಗುತ್ತದೆ (ವಿಜಯವಾಣಿ, ೧೧.೭.೨೦೧೩, ಪು.೧).

### ೪.೧.೩. ಆನೆಗಳ ಗುಣಲಕ್ಷಣಗಳು

ಆನೆಗಳ ಗುಣಲಕ್ಷಣಗಳ ಕುರಿತು ಎಚ್.ಎಸ್. ಆಯ್ಯಂಗಾರ್ ಸಂಪಾದಿಸಿರುವ ಲೋಕೋಪಕಾರ ಕೃತಿಯ ಸರ್ವಲಕ್ಷಣ ಪ್ರಕರಣದಲ್ಲಿ ಗಜಲಕ್ಷಣವನ್ನು ಕುರಿತು ಹೀಗೆ ಉಲ್ಲೇಖಿಸುತ್ತಾರೆ.

"ಮ॥ ಕರಮುದ್ದಂ ಪ್ರಿಮಾನಮಾಗದಿರೆ ಬಾಹ್ಯಸ್ಥಂ (ವಾಹಿತ್ಥಂ) ದೃಢಂ ಸ್ಥೂಲಯಾ।
ಗಿರೆ ಪೂರ್ಣಂ ಸಕಳಾಂಗಮಾಗಿರೆ ಸರೋಮಂ ನೀಳ್ಪುವೆತತೋಷ್ಠಮಾ ॥
ಗಿರೆ ಸೋತ್ತುಂಗ ಕಟಂಗಳಾಗಿರೆ ಬೃಹದ್ವಿಸ್ತೀರ್ಣ ಕುಂಭಾಗ್ರಮಾ ।
ಗಿರೆ ಸದ್ಬಿಂದು ಸುರಕ್ತಮಾಗಿರೆ ಮುಖಂ ಶ್ರೀಕಾರಣಂ ವಾರಣಂ ॥

ಟಿ॥ ಸೊಂಡಿಲುದ್ಧಮಾಗಿರುಹ, ಶರೀರಂ ಸುಂಡಿಲಿಂದಂ ಗುಡ್ಡನಾಗಿರುಹ, ಹಿಂಭಾಗಂ ದೃಢಮಾಗಿರುಹ, ಅವಯವಂಗಳೆಲ್ಲಂ ಸಪೂರ್ಣಮಾಗಿ ತುಂಬಿಕೊಂಡಿರುಹ, ರೋಮಸಹಿತ ಮಾಗಿ ಕೆಳಗಣ ತುಟಿ ನೀಳಮಾಗಿರುಹ, ಗಲ್ಲಂಗಳುನ್ನತಮಾಗಿರಹ, ಕುಂಬಸ್ಥಲಂಗಳ ತುದಿಗಳ್ ವಿಸ್ತೀರ್ಣಮಾಗಿ ದೊಡ್ಡಿತ್ತಾಗಿರುಹ, ಮುಸುಡಲ್ಲಿರ್ಪ ಚಿ(ಪ್ಪು)ಬ್ಬುಗಳ್ ಚೆನ್ನಾಗಿ ಕೆಂಪಾಗಿ ಇರುವ, ಈ ಲಕ್ಷಣಂಗಳನುಳ್ಳ ಆನೆ ಐಶ್ವರ್ಯಕ್ಕೆ ಕಾರಣಮಾಗಿರ್ಪುದು–೬೫ "[೭೩]

"ಮ॥ ನಿಡಿದಪ್ಪಂಗುಲಿ ಕೆಂಪುವೆತ್ತ ವಿಪುಳಶ್ರೋತ್ರ(ಸ್ರೋತ)ಂ ಲ(ರ)ಸತ್ಪುಷ್ಕರಂ ।
ಕಡುಗಂಪುಣ್ಮುವ ಸುಯ್ ಪೊದಲ್ದಿ ವಳಿಯುಂ ನಿರ್ಲೋಮಮುಂ ನುಣ್ಣಿತುಂ॥
ನಿಡಿದುಂ ಬಟ್ಟಿತುಮಪ್ಪ ಕೆಯ್ ಮದ(ಧು) ನಿಭ ಸಂಶ್ಲಿಷ್ಟಮ ಪೊಳ್ಮಡಂ ।
ಬಡಗಣ್ಗೊಪ್ಪುವ ದಕ್ಷಿಣೋನ್ನತರದಂ ತಾನಾಗೆ ಪೂಜ್ಯಂ ಗಜಂ ॥

ಟೀ॥ ಉನ್ನತವಹಂಥ ಕಾಲ್ಬೆರಲ್ಗಳ್, ಕೆಂಪಾಗಿ ದೊಡ್ಡತ್ತಾಗಿರ್ಪ ಕಿವಿಗಳ್. ಧ್ವನಿ ಗೆಯ್ಯುತ್ತಿರ್ಪ ಸೊಂಡಿಲ ತುದಿ, ಕಲ್ಲದಿಂ ಬಹಂಥಾ ಉಸಿರ್(ಸುವಾಸನೆ ನಾಯಿತ್ತಿದ ಉಸಿರ್?) ತೋತ್ತಿದಂಥಹ ವಳಿಗಳ್, ರೋಮಮಿಲ್ಲದೆ ನುಣ್ಣಿತ್ತಾಗಿ ಬಟ್ಟಿತ್ತಾಗಿ ಉದ್ದಮಾಗಿರ್ಪ ಸೊಂಡಿಲ್, ಮದಮನುಳ್ಳುದಾಗಿ ಒಂದನ್ನೊಂದು ಒರಸುತಿಹಂಥ ವೊಳ್ಪೊಡೆಗಳ್, ಸಣ್ಮಮಾಗಿರ್ಪ ಕಣ್ಗಳ್, ಎಡದಿಂದಲುಂ ಬಲದಂತಮುದ್ದಮಾಗಿರುಹ ಇಂತಹ ಲಕ್ಷಣ ಮುಳ್ಳ ಆನೆ ಪೂಜೆಗೆ ಯೋಗ್ಯಮಪ್ಪುದು."[೭೪]

"ಕಂ॥ ಪಾರಿವದ ಮಿನಾ ನಯನಾ ।
ಕಾರವೊಡಂಬಡೆ ಪೊದಟ್ದು ನೀಳ್ದೆಸೆವೆವೆಗಳ್ ॥
ನೇರಿದುವಾಗಿರೆ ರದನಗ ।
ಕಾರ? ಮಧುಪಿಂಗಲೋಚನಂಗಳ್ ಶುಭದಂ ॥

ಟೀ॥ ಪಾರಿವಾಳದ ಹಕ್ಕಿಯ ಮಿನಿನ ಮರ್ಯಾದೆಯ ಛಾಯೆಯನುಳ್ಳ ಕಣ್ಗಳ್, ದಟ್ಟಿದುವಾಗಿ ನೀಳಮಾಗಿರ್ಪ ಕಣ್ಣೆವೆಗಳ್, ನೀಳಮಾಗಿರ್ಪ ದಂತೆಂಗಳ್ ಆಲಿಗಳ್

ಜೇನತುಪ್ಪದ ಮರ್ಯಾದೆಯ ಪೊಂಬಣ್ಣಮಾಗಿರುಹ ಈ ಲಕ್ಷಣಂಗಳನುಳ್ಳ ಆನೆ ಉತ್ತಮಂ."[೭೫]

"ಅರುಣಾಗ್ರಪಲ್ಲವಂಗಳ್ ।
ಸೆರೆಯಿಲ್ಲದೆ ವೃತ್ತಮಲ್ಲದತಿಮೃದು ಚಿಬ್ಬುಂ ॥
ದೊರೆಕೊಳ ದುಂದುಭಿನಿನದಂ ।
ಕರಿವರ್ಣಮದಾಗೆ ಪೂರ್ಣಫಲಮಂ ಕುಡುಗುಂ ॥

ಟೀ॥ ಎಳದಳಿರಿನ ಮರ್ಯಾದೆಯಲ್ಲಿ ಕೆಂಪಾಗಿ ಸೆರೆಗಳಿಲ್ಲದೆ ಬಟ್ಟಿತ್ತಾಗಿ ಇರ್ಪ(ಇರದ) ಚಿಬ್ಬುಗಳಾಗೆ, ಭೇರೀಧ್ವನಿಯ ಮರ್ಯಾದೆಯನುಳ್ಳ ಧ್ವನಿ ಈ ಮರ್ಯಾದೆಯಲ್ಲಿ ವರ್ಣಧ್ವನಿಗಳನ್ನುಳ್ಳ ಆನೆ ಪೂರ್ಣಮಪ್ಪ ರಾಜ್ಯಪದಮಂ ಕುಡುವುದು."[೭೬]

"ಪೃಥ್ವಿ ॥ ಸಮಾನಮೆನಿಸಿರ್ದು ಮೇಗಡರ್ದು ತೋರ್ಪರೋಮಂಗಳು ।
ಳ್ಳಮಸ್ತವೆನೆ ನಿಮ್ನಮಾಗಿ ಸೊಗಯಿಪ್ಪ ನಿರ್ಯಾಣಕಂ ॥
ಸಮುನ್ನತಮೆನಿಪ್ಪವಗ್ರಹಮನೂನ ಪೀನಂ ಸಮು ।
ದ್ಧಮಾಗಿ ಕಡುಗುಜ್ಜನಪ್ಪ ಕೊರಲಾಗೆ ಪೂಜ್ಯಂ ಗಜಂ ॥

ಟೀ॥ ಸಮನಾಗಿ ಮೇಲಕ್ಕೆ ಅಡರಿ ತೋಱಿದ ರೋಮಂಗಳ್ಳುಳ ಮಸ್ತಕಂ, ಗುಜೆಯಾಗಿ ಚೆಂದವಾಗಿ ಇರ್ಪ ಗಡೆಗಣ್ಣ ಮೊದಲ್, ಉನ್ನತಮಾಗಿರ್ಪ ಪಣೆ, ಕೊರತೆಯಿಲ್ಲದೆ ಉದ್ದಮಾಗಿ ಇರ್ಪ ಮಸ್ಕದ ಹಿಂದು, ಗುಡ್ಡಮಾಗಿರ್ಪ ಕೊರಲ್ ಈ ಲಕ್ಷಣಮನುಳ್ಳ ಆನೆ ಪೂಜೆಗೆ ಯೋಗ್ಯವೆನಿಸಿಕೊಳ್ವುದು."[೭೭]

"ಮ॥ ಸ್ಥಿರದೀರ್ಘಾಸನಮೊಪ್ಪುವುನ್ನತ ಶಿರೋರ್ವೀಭಾಗ ವಿಸ್ತೀರ್ಣಮು।
ಪ್ಪುರಮಿಂಬೊಪ್ಪುವ ಕುಕ್ಷಿ ಚೆಲ್ವನೊಳಗೊಂಡಾ ಚೂಚಕಂ ದೀರ್ಘರ ॥
ಕ್ತ ರುಚಿತ್ವಂ ಸ್ಥಿರವಾಹನಂ ವಿಪುಳ ನಿರ್ಲೋಮಾಂಡಕೋಶಂ ಮನೋ ।
ಹರಸತ್ಪೇಚಕಮುದ್ಧವಾಳಧಿ ಗಜೇಂದ್ರಕ್ಕಾದೊಡತ್ಯುತ್ತಮಂ ॥

ಟೀ॥ ದೃಢಮಾಗಿ ಉದ್ದಮಾಗಿ ಇರ್ಪ ಪೆಗಲ್, ಚೆನ್ನಾಗಿ ಉನ್ನತಮಾಗಿರ್ಪ ಶಿರಸ್ಥಾನಂ, ವಿಸ್ತೀರ್ಣಮಾಗಿರ್ಪ ಉರಸ್ಸು ತೆಱನುಳ್ಳಹೊಟ್ಟೆ, ಚೆಲ್ವನಾಗಿರ್ಪ ಮೊಲೆಯ ಸ್ಥಾನಂ. ನಿಡಿದಾಗಿ ರಕ್ತವರ್ಣಮಾಗಿ ದೃಢಮಾಗಿ(ರ್ಪ)ರುಹ, ಕಱಿಸ್ಥಾನಂ. ರೋಮಮಿಲ್ಲದೆ ದೊಡ್ಡಿತ್ತಾಗಿರ್ಪ ವೃಷಣದ ಮೊದಲ್, ಚೆಂದವಪ್ಪ ಹಿಂಭಾಗಂ ಉತ್ತಮವಾಗಿರ್ಪ ಬಾಲಂ ಈ ಲಕ್ಷಣಂಗಳ್ ಆನೆಗಳ್ಗಿರ್ದೊಡೆ ಉತ್ತಮಂ."[೭೮]

"ಮ॥ ಪುದಿದೊಂದಿರ್ದಲರ್ಗಣ್ ವರಾಹಜಘನಂ ಸದ್ವೃತ್ತಮಷ್ಠಿವಮೆ ।
ಯ್ದೆ ದೃಢತ್ವಂಬಡೆದಿರ್ದ ಪಾದತಳ ಮುಂ ನಾಲ್ಗಾಲ್ಗಮಿರ್ಪತ್ತು ಮೇಣ್ ॥
ಪದಿನೆಂಟಪ್ಪ ನಖಂ ವಿರಾಜಿಪೊಡಮಯ್ದಾಱೇಮಿ ಹಸ್ತಪ್ರಮಾ ।
ಣದ ಹಸ್ತಿಪ್ರಕರಂ ಧರಾಧಿಪತಿಗಾಯುಂ ಶ್ರೀಯುಮಂ ಮಾಡುಗುಂ ॥

ಟೀ॥ ಅರ್ಧ ಅರಳಿದ ಪೂವಿನ ಮರ್ಯಾದೆಯನುಳ್ಳ ಕಣ್, ವರಾಹದ ಮರ್ಯಾದೆಯನ್ನುಳ್ಳ ಮುಂದಣ ಉರಂ, ಚೆನ್ನಾಗಿ ಬಟ್ಟಿತ್ತಾಗಿರ್ಪ ತೊಡೆ, ದೃಢಮಾಗಿ ಚೆನ್ನಾಗಿರ್ಪ ಪಾದತಳಂ, ನಿಡಿದಪ್ಪ ಪಜ್ಜೆ, ನಾಲ್ಕು ಕಾಲ್ಗೆಯುಂ ಕೂಡಿ ಇರ್ಪತ್ತಾದೊಡಂ ಪದಿನೆಂಟಾದೊಡಂ ಉಗುರ್, ಒಪ್ಪುವ ಆಯ್ದು ಹಸ್ತಂ, ಆಱುಹಸ್ತಂ, ಏಱುಹಸ್ತಂ ಪ್ರಮಾಣಮನುಳ್ಳ ಉದ್ದಂ ಈ ಲಕ್ಷಣಂಗಳನ್ನುಳ್ಳ ಆನೆ ರಾಜಯೋಗ್ಯಮೆನಿಸಿಕೊಳ್ವುದು."[೬೯]

"ಚಂ ॥ ಜಿಗುಜೆಯ ಮಾಜ್ಕೆಯಂ ತಳೆದ ಕೆಯ್
ಲಘುಪುಷ್ಕರಮಾದಮಂಡ(ಮೊಂದಿ) ವಂ ।
ದಿಗಳೆನಿಸಿರ್ದ ದಂತಯುಗಮೊಪ್ಪಿದ ಕರ್ಪಸೆವಾ ಬೃಹತ್ಕುಚಂ ॥
ಬುಗುಟೊದವಿರ್ದ ನಾಭಿ ಪೊಱಪೊಣ್ಮೆ(ಣ್ಮ)ದ ಮುಷ್ಕವೆಟಿಲ್ವ ಪೇಚಕಂ ।
ಮಿಗೆ ಪಲವುಂ ಕರಂ ಕೆಲವುಮಪ್ಪುಗುಣಗೆ ಗಜಾಳಿ ನಿಂದಿತಂ ॥

ಟೀ॥ ಜಿಗುಜೆಯ ಮರ್ಯಾದೆಯ ಆಕಾರದಂತೆ ತುದಿಮೊದಲ್ ಸಣ್ಣನಾಗಿ ನಡು ದೊಡ್ಡಿತ್ತಾಗಿಹ ಅಲ್ಲಾ ಸಣ್ಣವಾಗಿಹ ಭರಿಕೆಯ್, ಜಡಮಾಗಿ ತುದಿ ಕೊಡಿ ಇಹ ಎರಡು ದಂತಂಗಳ್, ಕಪ್ಪಾಗಿ ಒಪ್ಪುತ್ತಿ(ರ್ಪ)ರಲ್ ಮೊಲೆಗಳ್, ಮುಂದಕ್ಕೆ ಬುಗುಟಾಗಿ ಪಾಯ್ದಿರ್ಪ ಪೊರ್ಕುಳ್, ಒಳಯಿಂಕೆ ಪಾಯ್ದಿರ್ಪ ಮುಷ್ಕಂ ಬಡವಾಗಿರ್ಪ ಹಿಂಭಾಗಂ, ಕಾಲ ಕೆಯ್ಯುಗುರ್ಗಳ್ ಕಟ್ಟಳೆಯಿಲ್ಲದೆ ಕೆಟಗಿರುಹ ಈ ಲಕ್ಷಣಂಗಳನುಳ್ಳ ಆನೆ ಆ ಲೇಸಂ ಬಯಸುವಂಗೆ ನಿಂದಿತೆಮೆನಿಸಿಕೊಳ್ವುದು."[೭೦]

'ಚಾವುಂಡರಾಯನ ಲೋಕೋಪಕಾರ: ಒಂದು ಅಧ್ಯಯನ' ಎಂಬ ಕೃತಿಯಲ್ಲಿ ಡಾ. ಎ. ರಂಗಸ್ವಾಮಿ ಅವರು ಸ್ತ್ರೀ–ಪುರುಷರ ಅಂಗಾಂಗಳ ಲಕ್ಷಣ ವಿಚಾರಗಳನ್ನು ವಿಶದಪಡಿಸಿದ ಅನಂತರ ಚಾವುಂಡರಾಯ ಮಾನವನ ಸಾಕುಪ್ರಾಣಿಗಳಾದ ಕುದುರೆ, ದನ, ಆಡು, ಕೋಳಿ, ನಾಯಿ ಇವುಗಳ ಶುಭಾಶುಭ ಲಕ್ಷಣಗಳನ್ನು ವಿವರಿಸಿದ್ದಾರೆ. ಅದೇ ರೀತಿ ಗಜಗಳ ಲಕ್ಷಣವನ್ನು ಕುರಿತು ಕೆಳಗಿನಂತೆ ಉಲ್ಲೇಖಿಸಿದ್ದಾರೆ.

"ಅವಯವಗಳು ತುಂಬಿದಂತೆಯೂ ಸೊಂಡಿಲು ಉದ್ದವಾಗಿಯೂ ಕೆಳತುಟಿ ಕೋಮಲಯುಕ್ತವಾಗಿಯೂ ನೀಳವಾಗಿಯೂ ಕುಂಭಸ್ಥಳದ ತುದಿಗಳು ದೊಡ್ಡದಾಗಿಯೂ ಹುಬ್ಬುಗಳು

ಕೆಂಪಾಗಿಯೂ ಇರುವ ಆನೆ ಶ್ರೀಗೆ ನೆಲೆವಸಿಯಾಗಿರುವುದು. ಕಾಲುಗಳು ದೊಡ್ಡದಾಗಿ, ಕಿವಿಗಳು ವಿಶಾಲವಾಗಿ, ಸೊಂಡಿಲ ತುದಿ ರೋಮವಿಲ್ಲದೆ ಬಟ್ಟತ್ತಾಗಿರುವುದು. ಕಣ್ಣುಗಳು ಚಿಕ್ಕದಾಗಿ, ಕೊರಳು ಸಣ್ಣದಾಗಿ, ಮಸ್ತಕ ಅಗಲವಾಗಿ ರೋಮಸಹಿತವಾಗಿದ್ದರೆ ಆ ಆನೆ ಪೂಜೆಗೆ ಯೋಗ್ಯವೆನಿಸುವುದು.

ಆನೆಯ ಕಣ್ಣುಗಳು ಪಾರಿವಾಳ ಹಾಗೂ ಮೀನಿನ ಛಾಯೆಯಂತಿರುವುದು ಕಣ್ಣವೆ, ದಂತಗಳು, ನೀಳವಾಗಿರುವು, ಕಣ್ಣಾಲಿಗಳು ಜೇನಿ ಬಣ್ಣಗಳನ್ನು ಹೋಲುವಂತಿದ್ದರೆ ಶ್ರೇಯಸ್ಕರ.

ನವಪಲ್ಲವದಂತೆ ಕೆಂಪಾಗಿ ಮಿಂಚುತ್ತ ಸೆರೆಗಳಿಲ್ಲದೆ ಬಟ್ಟಿತ್ತಾಗಿರುವ ಚಿಬ್ಬು, ಮೇಘನಾದದಂತಿರುವ ಧ್ವನಿಯುಳ್ಳ ಹಸ್ತಿ ಪೂರ್ಣಫಲವನ್ನು ಕೊಡುವುದು.

ಉನ್ನತವಾದ ಹೆಗಲು, ಒಳ್ಳೆಯ ಶಿರಸ್ಥಾನ, ವಿಶಾಲವಾದ ಉರ ತೆಳುವಾದ ಹೊಟ್ಟೆ ಚಲುವಾದ ಮೊಲೆ, ರೋಮವಿಲ್ಲದೆ ದೊಡ್ಡದಾಗಿರುವ ವೃಷಣಗಳು ಆಕರ್ಷಕವಾದ ಹಿಂಭಾಗ, ಸುಂದರಬಾಲ ಈ ಲಕ್ಷಣ ಹೊಂದಿದ ದಂತಿ ಶುಭಪ್ರದ.

ಅರ್ಧ ಅರಳಿದ ಹೂವಿನ ಮರ್ಯಾದೆಯಲ್ಲಿರುವ ಕಣ್ಣುಗಳು, ವರಾಹದ ತೆರನ ಮುಂದಣ ಉರ, ಚೆನ್ನಾಗಿ ಬಟ್ಟತ್ತಾಗಿರುವ ತೊಡೆ, ದೃಢವಾದ ಪಾದ, ನಿಡಿದಾದ ಹೆಜ್ಜೆ, ನಾಲ್ಕು ಪಾದಗಳಿಂದ ಇಪ್ಪತ್ತು ಅಥವಾ ಹದಿನೆಂಟು ಉಗುರುಳು ಬೀರುವುದು, ಐದರಿಂದ ಏಳು ಹಸ್ತ ಪ್ರಮಾಣ ಉದ್ದವುಳ್ಳ ಹಸೆ ...ಧರಾಧಿಪತಿಗಾಯಿಉಂ ಶ್ರೀ ಯುಮಂಮಾಡುಗುಂ ಎಂದಿದ್ದಾರೆ. ಚಾವುಂಡರಾಯ(೧೧-೭೧).

ಅದೇ ಜಿಗುಳೆಯ ಆಕಾರದಂತಿರುವ ಸೊಂಡಿಲ ತುದಿ ನಡು ಸಣ್ಣದಾಗಿ ಇಲ್ಲವೇ ದೊಡ್ಡದಾಗಿ ಇರುವುದು ತುದಿ ಕೂಡಿರುವ ದಂತ ಕಪ್ಪಗಿರುವ ಮೊಲೆ ಮುಂದಕ್ಕೆ ಬುಗರಿಯಂತೆ ಬಾಗಿರುವ ಹೊಕ್ಕುಳ ಒಳಸೇರಿರುವ ಮುಷ್ಕ, ಕೃಶವಾದ ವೃಷ್ಠ, ಕಾಲಿನ ಉಂಗುರುಗಳು ವಕ್ರವಾಗಿ ಕಿರಿದಾಗಿರುವುದು ಈ ಲಕ್ಷಣವುಳ್ಳ ಇಭ ಅಶುಭದಾಯಕ."[೮೧]

ವರಾಹಮಿಹಿರನಲ್ಲಿಯೂ ಇದೇ ಬಗೆಯ ಅಭಿಪ್ರಾಯಗಳು ವ್ಯಕ್ತವಾಗಿವೆ. ಚಾವುಂಡರಾಯ ಈ ವಿಷಯದಲ್ಲಿ ವರಾಹಮಿಹಿರನನ್ನು ಚಾಚೂ ತಪ್ಪದೆ ಅನುಕರಿದ್ದಾನೆ.

"ಆನೆ ಬೆಲೆಯುಳ್ಳ ಪ್ರಾಣಿ. ಹಿಂದಿನ ಕಾಲದಲ್ಲಿ ಆನೆಗಳನ್ನು ಪ್ರಮುಖವಾಗಿ ಯುದ್ಧಗಳಲ್ಲಿ ಬಳಸುವುದಕ್ಕೆ ಸಾಕಲಾಗುತ್ತಿತ್ತು. ಹಾಗೆ ನೋಡಿದರೆ ಆ ಕಾಲದಲ್ಲಿ ಕರಿ ತುರಗಗಳೇ ಬಲಾಢ್ಯ ಸೈನ್ಯದ ಪ್ರತೀಕವಾಗಿದ್ದವು. ಆದಕಾರಣ ಶುಭಲಕ್ಷಣವುಳ್ಳ ಆನೆಗಳನ್ನು

ಹೊಂದುವುದರ ಕಡೆಗೆ ರಾಜರುಗಳು ಹೆಚ್ಚು ಆಸ್ಥೆ ತೋರುತ್ತಿದ್ದರು. ಆದ್ದರಿಂದ ಈ ಬಗೆಯ ಶಾಸ್ತ್ರದ ಪ್ರಯೋಜನ ಅಂದಿನರಿಗೆ ತೀರ ಹೆಚ್ಚಿತ್ತು."[೮೨]

"ಆಯಾಯ ವಂಶಗಳಲ್ಲಿ ಹುಟ್ಟಿದ ಆನೆಗಳ ಲಕ್ಷಣಂಗಳಂ ಪೇಳುವೆನು ಯಾವ ಗಜಕ್ಕೆ ಶಿರಸ್ಸಿನ ಕೇಶಗಳೂ ಶರೀರದ ರೋಮಗಳೂ ಬಾಲವೂ ನೇತ್ರದ ಕೊನೆಗಳೂ ಶುಭ್ರಮಾಗಿರುವದೊ ಆ ಆನೆಯು **ಐರಾವತ**ವೆಂಬ ಆನೆಯ ವಂಶದಲ್ಲಿ ಹುಟ್ಟಿದ್ದು.

ಕಮಲಂಗಳಂ ಕೀಳುವುದರಲ್ಲೆ ಇಚ್ಛೆವುಳ್ಳಳದ್ದಾಗಿ ದಪ್ಪವಾದ ಶಿರಸ್ಸು ಯುದ್ಧದಲ್ಲಿ ಆಸಕ್ತಿಯು ಉಳ್ಳ ಆನೆಯು **ಪುಂಡರೀಕ** ಆನೆಯ ವಂಶದಲ್ಲಿ ಜನಿಸಿದ್ದು.

ನೀಲರೂಪವು ಕಪ್ಪಾದ ರೋಮಗಳು ದಪ್ಪವಾದ ದೇಹವು ಕೃಶವಾದ ಹೊಟ್ಟೆಯು ಬಿಂದುಗಳೊಡಗೂಡಿದ ಘಟ್ಟಿಯಾದ ಭುಜ ಶಿರಸ್ಸುಗಳು ಉಳ್ಳ ಆನೆಯು **ಪುಷ್ಪದಂತ** ಆನೆಯ ವಂಶದಲ್ಲಿ ಹುಟ್ಟಿದ್ದು.

ಅಗ್ನಿಯಂತೆ ಕೆಂಪುವರ್ಣವು ಹೊಂಬಣ್ಣವುಳ್ಳ ನೇತ್ರಗಳು ಅತ್ಯಂತ ವೇಗವು ಶರೀರದ ವರ್ಣವು ಪಾರಾವತ ಪಕ್ಷಿಗಳ ನೇತ್ರದಂತೆ ನೇತ್ರವರ್ಣವು ಒಳ್ಳೆಬುದ್ಧಿಯು ಕೃಶಗಳಾದ ರೋಮಗಳು ಉಳ್ಳ ಆನೆಗಳು **ಸುಪ್ರತೀಕ** ಆನೆಯ ವಂಶದಲ್ಲಿ ಹುಟ್ಟಿದ್ದೆಂದು ತಿಳಿಯುವುದು.

ಮನೋಹರವಾದ ಬಾಲವು ದವಡೆಗಳು ಶುಭ್ರವಾದ ಹೊಟ್ಟೆಯು ಸೊಂಡಿಲು ದಪ್ಪವಾದ ತೊಡೆಗಳು ಉಳ್ಳದ್ದಾಗಿ ಉನ್ನತವಾದ ಆನೆಯು **ಅಂಜನವಂಶ**ದಲ್ಲಿ ಪುಟ್ಟಿದ್ದೆಂದು ತಿಳಿಯತಕ್ಕದ್ದು.

ಶುಭ್ರವಾದ ಸೊಂಡಿಲು ಕಿರಿದಾದ ಕಿವಿಯು ಪೃಷ್ಠವೂ ಉಳ್ಳ ಬೃಹದ್ಗಜಗಳು **ಸಾರ್ವಭೌಮ** ಆನೆಯ ವಂಶದಲ್ಲಿ ಹುಟ್ಟಿದ್ದು.

ಶರೀರದಲ್ಲಿ ಶುಭ್ರವಾದ ಕಾಂತಿಯು ದಪ್ಪನಾದ ಶರೀರವು ಕೆಂಪಾದ ಕಣ್ಣುಗಳು ಕಪ್ಪಾಗಿ ಉದ್ದವಾದ ಸೊಂಡಿಲ ಕೊನೆಯು ಉಳ್ಳ ಆನೆಯು **ಕುಮುದ** ಆನೆಯ ವಂಶದಲ್ಲಿ ಹುಟ್ಟಿದ್ದು."[೮೩]

**ಆನೆಗಳ ಅವಯವ ಲಕ್ಷಣಗಳು**

ಮುಮ್ಮಡಿ ಕೃಷ್ಣರಾಜ ಒಡೆಯರ ಸೌಂಗಧಿಕಾ ಪರಿಣಯ ಕೃತಿಯಲ್ಲಿ ಸುಗಂಧ ಮಹಾರಾಜನಿಗೆ ತನ್ನ ಗುರುವಾದ ವಿದ್ಯಾಸಾಗರನು ಉತ್ತಮ ಅವಯವ ಲಕ್ಷಣವುಳ್ಳ

ಗಜಗಳ ದೈಹಿಕ ಲಕ್ಷಣವನ್ನು ಈ ರೀತಿ ವಿವರಿಸುತ್ತಾನೆ. "ಮೃದುವಾಗಿ ಬಟುವಾಗಿ ಸೂಕ್ಷ್ಮಣಗಳಾದ ಬಿಂದುಗಳು ಸುಕ್ಕುಗಳು ಮೇಘದಂತೆ ಧ್ವನಿಯು ಚಿಗರಿನಂತೆ ಕಾಂತಿಯು ರೋಮಕೂಪಗಳಲ್ಲಿ ಎರಡೆರಡು ರೋಮಗಳು ಉಳ್ಳದ್ದಾಗಿ ಪರಿಮಳಯುಕ್ತವಾದ ನಿಶ್ವಾಸದಿಂ ಕೂಡಿರುವ ಕೊಂಬುಗಳಿಂದ ಕೆಳಕ್ಕೆ ಕ್ರಮವಾಗಿ ಸಣ್ಣನಾಗಿರುವ ಘಟ್ಟಿಯಾದ ಕೊನೆಯುಳ್ಳ ಸೊಂಡಿಲಿದ್ದರೆ ಆ ಗಜವು ಉತ್ತಮವೆನಿಸಿಕೊಂಬುದು.

ಈ ಗಜವು ಸ್ವಾಮಿಗೆ ಧನವೃದ್ಧಿಯಂ ಪುತ್ರಪ್ರಾಪ್ತಿಯಂ ಧಾನ್ಯಕೋಶಗಳ ವೃದ್ಧಿಯಂ ಶತ್ರುನಾಶವಂ ಕೂಡಾ ಉಂಟು ಮಾಡುವುದು. ಕುಂದಣ ತಾಳೆಹೂವು ತುಪ್ಪ ಜೇನುತುಪ್ಪ ಚಂದ್ರ ಕಾಡುಮಲ್ಲಿಗೆಯ ಹೂವು ಇವುಗಳಿಗೆ ಸಮಾನವಾಗಿರುವ ಕಾಂತಿಯುಳ್ಳದ್ದಾಗಿ ಸ್ಥೌಲ್ಯವು ರೇಖೆಗಳಿಲ್ಲದೆ ಇರೋಣವು ನುಣುಪು ಮಂಡಲಾಕಾರವಾದ ರೇಖೆಯಿಂದೊಡ ಗೂಡಿದ ಮೂಲ ಪ್ರದೇಶವುಳ್ಳದ್ದಾಗಿ ಸಮವಾಗಿ ದೃಢಗಳಾಗಿ ದೀರ್ಘಗಳಾಗಿ ಶತ್ರುಗಳಂ ಸಂಹರಿಸುವುದರಲ್ಲಿ ಸಮರ್ಥಗಳಾದ ಕೊಂಬುಗಳುಳ್ಳ ಗಜವು ಉತ್ತಮವು ಎಂದು ತಿಳಿಸುತ್ತಾರೆ. ಯಾವ ಗಜವು ಕೊಂಬುಗಳ ಮಧ್ಯದಲ್ಲಿ ಬಿಲ್ವ ವೃಕ್ಷದಂತೆಯು ವರ್ಧಮಾನ ಛತ್ರ ಚಾಮರ ಧ್ವಜ ಇವುಗಳಿಗೆ ಸಮಾನಗಳಾದ ರೇಖೆಗಳಿದ್ದರೆ ಶುಭವು ಮತ್ತು ದಂಡ ಹಂಟೆಗೊದ್ದ ಗೃಧ್ರ ಗೂಬೆ ಮೊದಲಾದ್ದಕ್ಕೆ ಸಮಾನವಾದ ರೇಖೆಗಳಿದ್ದರೆ ಶುಭವಲ್ಲವೆಂದು ಹಾಗೂ ಕುಂಭಸ್ಥಳದ ಮೂಲವು ಬಿಂದುಗಳಿಂದ ಸಹಿತಮಾಗಿ ನುಣುಪಾಗಿ ಕಾಂತಿಯುಕ್ತ ವಾಗಿದ್ದರೆ ಶುಭವು ಮುಖವು ನೀಟವಾಗಿ ಪಾಟಲಿಪುಷ್ಪದಂತೆ ಪರಿಮಳಯುಕ್ತವಾಗಿದ್ದರೆ ಅಂತಹ ಗಜವು ಶುಭಕರವಾದುದು ಎಂದು ಹೇಳುವರು. ಗಜಗಳ ನೇತ್ರಗಳು ಕೊನೆಗಳಲ್ಲಿ ಕೆಂಪಾಗಿ ಸುತ್ತಲೂ ಬಿಳುಪಾಗಿ ಮಧ್ಯದಲ್ಲಿ ನೀಲವರ್ಣವಾಗಿಯು ಮತ್ತು ಮಂಡಲಾಕೃತಿಯುಳ್ಳದ್ದಾಗಿ ಮೃದುವಾದ ರೋಮಗಳುಳ್ಳ ರೆಪ್ಪೆಗಳಿಂದೊಡಗೂಡಿದ್ದರೆ ಶುಭಕರವಾಗಿರುತ್ತದೆ. ಯಾವ ಗಜಗಳು ದುಂದುಭಿಗಳಂತೆ ಧ್ವನಿಯು ಮೃದುವಾದ ಚರ್ಮವು ಮಚ್ಚೆಗಳು ಛಿದ್ರವಿಲ್ಲದೆ ಇರೋಣವು ಉಳ್ಳದ್ದಾಗಿ ಸರ್ವದಾ ಚಲಿಸುತಲಿರುವ ಕರ್ಣಗಳು ಶುಭಕರಗಳು. ಇಂತಹ ಗಜಗಳು ಸ್ವಾಮಿಗೆ ಜಯವನ್ನುಂಟುಮಾಡುವುವು. ಉಬ್ಬಿಕೊಂಡು ರೋಮಯುಕ್ತಗಳಾಗಿ ವ್ಯಕ್ತಗಳಾದ ಕುಂಭಸ್ಥಳಗಳು ಮತ್ತು ಉನ್ನತವಾದ ಇಂಥಾ ಕುಂಭಸ್ಥಳಗಳುಳ್ಳ ಶಿರಸ್ಸು ಉತ್ತಮವು. ಕೃಶವಾಗಿ ದೀರ್ಘವಾಗಿ ವಿಸ್ತಾರವಾಗಿ ಜೋರುವ ಕತ್ತು ಬಗ್ಗಿದ ಹೆಗಲು ಉಳ್ಳದ್ದಾಗಿದ್ದರೆ ಶುಭವಲ್ಲವೆಂದು ತಿಳಿಸುತ್ತಾರೆ.

ಅದಕ್ಕೆ ವ್ಯತಿರಿಕ್ತವಾದರೆ ಶುಭವನ್ನುಂಟುಮಾಡುವುದು. ಹಿಂಭಾಗವು ಸಮವಾಗಿ ಗಟ್ಟಿಯಾಗಿ ವಕ್ರವಿಲ್ಲದೆ ಇದ್ದರೆ ಶುಭವು ಮತ್ತು ಉತ್ತಮವಾದವು ಎಂದು ತಿಳಿಸುತ್ತಾರೆ.

ಅದೇ ರೀತಿ ಯಾವ ಗಜ ಬಾಳೆಯೆಲೆಯ ಮೂಲದ ದಿಂಡಿನಂತೆ ಮನೋಹರವಾಗಿ ಧನುಸ್ಸಿನಂತೆ ಬಗ್ಗಿದ ಬೆನ್ನುಮೂಳೆಯು ಶುಭಕರವಾದ್ದು. ವಿಸ್ತಾರವಾಗಿ ರುಜುವಾದ ಹೆಗಲು ಶುಭಕರವು. ಇಂಥ ಹೆಗಲು ಸ್ವಾಮಿಗೆ ಬಹುಕಾಲ ಸಿಂಹಾಸನ ಸ್ಥಿತಿಯನ್ನುಂಟು ಮಾಡುವುದು. ಶರೀರ ಕಾಂತಿಗೆ ಸಮಾನವಾದ ಕಾಂತಿಯುಳ್ಳ ಸೂಕ್ಷ್ಮವಾದ ರೋಮಗಳು ಒಂದೊಂದು ರೋಮಕೂಪಗಳಲ್ಲಿ ಎರಡೆರಡಾಗಿದ್ದರೆ ಶುಭಕರವು. ಯಾವ ಗಜದ ಆಸನದಲ್ಲಿ ಹೆಗಲಿನಲ್ಲಿ ಕಂಕುಳುಗಳಲ್ಲಿ ರೋಮಗಳಲ್ಲಿ ಶಿಶ್ನದಲ್ಲಿ ಕೂಡಾ ಕೆಂಪು ವರ್ಣವುಳ್ಳ ಆನೆಯು ರೋಮಕೂಪಗಳಲ್ಲಿ ಎರಡೆರಡು ರೋಮಗಳಿಂದೊಡಗೂಡಿ ಯಿದ್ದರೆ ಸ್ವಾಮಿಗೆ ಕುಲನಾಶವಂ ಮಾಡುವುದು ಎಂದು ತಿಳಿಸುತ್ತಾನೆ.

ಯಾವ ಗಜವು ಶುಭ್ರವರ್ಣವು ಹೊಂಬಣ್ಣವು ಕಮಲದಂತೆ ವರ್ಣವುಳ್ಳ ಮಚ್ಚೆ ಗಳಿಂದೊಡಗೂಡಿಯಿದ್ದರೆ ಸ್ವಾಮಿಗೆ ಕುಲನಾಶವಂ ಮಾಡುವುದು ಎಂದು ಹೇಳುತ್ತಾನೆ. ಅದೇ ರೀತಿ ಶುಭ್ರವರ್ಣವು ಹೊಂಬಣ್ಣವು ಕಮಲದಂತೆ ವರ್ಣವೂವುಳ್ಳ ಮಚ್ಚೆಗಳಿಂದೊಡ ಗೂಡಿದ ಆನೆಯು ಸ್ವಾಮಿಗೆ ವಂಶಾಭಿವೃದ್ಧಿಯಂ ಕೊಡುವುದು. ನವಿಲಿನಂತೆಯು ಗಾರ್ದಭದಂತೆಯು ಕಪಿಯಂತೆ ಕಾಗೆಯಂತೆ ಹದ್ದಿನಂತೆ ಬಿಂದು ಉಳ್ಳ ಆನೆಯಂ ದೂರದಲ್ಲಿ ಬಿಟ್ಟುಬಿಡಬೇಕು ಎಂದು ತಿಳಿಸುತ್ತಾನೆ.

ಸರ್ವ ಲಕ್ಷಣಗಳಿಂದಲೂ ಒಡಗೂಡಿದಂತೆ ಹೀನವಾದ ಆನೆಯು ಮೋಕಳಿಯೆನಿಸಿ ಕೊಳ್ಳುವುದು. ಆ ಆನೆಯು ಯುದ್ಧದಲ್ಲಿ ಪ್ರಾಣವಂ ಕೊಲ್ಲುವುದು ಯಾವ ಆನೆಗೆ ನಡೆಯುವಾಗ ಕಾಲುಗಳು ಕೂಡುವವೋ ಆ ಆನೆಯು ನಪುಂಸಕವೆಂಬ ಹೆಸರುಳ್ಳದ್ದು ಅಂತಹ ಗಜವು ಯೋಗ್ಯವಲ್ಲ. ಎಡದ ಕೊಂಬು ಒಂದೇ ಉಳ್ಳ ಆನೆಯು ಸ್ವಾಮಿಗೆ ಕುಲನಾಶವಂ ಮಾಡುವುದು ಎಂದು ಹೇಳುತ್ತಾನೆ.

ಅದೇ ರೀತಿ ಯಾವ ಗಜವು ಬಲದ ಕಡೆ ವಾರೆಯಾಗಿ ಅಧೋಮುಖಗಳಾದ ಕೊಂಬುಗಳು ಉಳ್ಳ ಆನೆಯು ಎಡದ ಕೊಂಬು ಮಾತ್ರ ಅಧೋಮುಖವಾಗಿ ಕುರಿಯ ಕೊಂಬುಗಳಂತೆ ಮೊಟಕಾದ ಕೊಂಬುಗಳುಳ್ಳ ಗಜವು ಯುದ್ಧದಲ್ಲಿ ಸ್ವಾಮಿಯನ್ನೇ ಕೊಲ್ಲುವುದು ಎಂದು ತಿಳಿಸುತ್ತಾನೆ. ಸೊಂಡಿಲಿನಲ್ಲಿ ತಿಗಣೆಯಂತೆ ದುರ್ವಾಸನೆಯುಳ್ಳ ಆನೆಯು ಸ್ವಾಮಿಯಿಂದ ಗರ್ಭಿಣಿಯಾಗಿರುವ ಸ್ತ್ರೀಯಂ ಕೊಲ್ಲುವುದು. ಕಣ್ಣು ಮೊದಲಾದ ಅವಯವಗಳಿಂದ ಹೀನಗಳಾದ ಆನೆಗಳು ವ್ಯಾಳಹಸ್ತಿಗಳೆನಿಸಿಕೊಳ್ಳುವವು.

ಇದು ಸ್ವಾಮಿಯ ನೇತ್ರವಂ ಅಪಹರಿಸುವುದು. ಒಂದು ಕಿವಿ ಒಂದು ಕಣ್ಣು ಒಂದು ಪಾರ್ಶ್ವದಿಂದಲೂ ಹೀನವಾಗಿ ಕರಿಮೇಘದಂತೆ ಶರೀರ ಕಾಂತಿಯು ಕಾವಿ ಕಲ್ಲಿನಂತೆ ಕೆಂಪಾದ ಉಗುರುಗಳು ಉಳ್ಳ ಆನೆಯು ಪೂತನ ಗಜವೆನಿಸಿಕೊಳ್ಳುವುದು.

ಈ ಆನೆಯು ಸ್ವಾಮಿಯ ಮೂಲನಾಶವಂ ಮಾಡುವುದು. ಇಂಥಾ ಆನೆಯಂ ಶತ್ರುವಿನ ಪಟ್ಟಣದ ಮಧ್ಯದಲ್ಲಿ ಬಿಡಬೇಕು. ಹ್ರಸ್ವವಾಗಿ ಸೂಕ್ಷ್ಮವಾದ ಕಿವಿಯು ಬಾಲವು ಶಿಶ್ನವು ಉದ್ದವಾದ ಸೊಂಡಿಲೂ ಸಣ್ಣವಾದ ಕತ್ತು ದುಷ್ಟವಾದ ಮನಸ್ಸು ಕಪ್ಪಾದ ಶರೀರವು ಉದ್ದ ಕಪ್ಪಾದ ನಾಲಿಗೆಯುಳ್ಳ ಗಜವು ಮಾಯಕವೆನಿಸಿಕೊಳ್ಳುವುದು.

ಈ ಗಜವು ಸೇನಾಪತಿಯಂ ರಾಜ್ಯವಂ ಕೂಡ ನಾಶ ಮಾಡುವುದು ಎಲೈ ಸುಗಂಧ ಮಹಾರಾಜನೆ ಇದುವರೆಗೆ ಉತ್ತಮ ಮಧ್ಯಮ ಅಧಮ ಗಜಗಳ ಲಕ್ಷಣವು ಪೇಳಲ್ಪಟ್ಟಿತು."[೮೪]

**ದಂತ ವ್ಯವಸ್ಥೆ:** ಆನೆಗಳ ಅಂಗರಚನೆಯಲ್ಲಿ ಹಲ್ಲುಗಳು ಮಹತ್ವದ ಸ್ಥಾನ ಪಡೆದಿವೆ. ಸಣ್ಣದಾದ ಬಾಯಲ್ಲಿರುವ ಈ ಹಲ್ಲುಗಳ ವಿಕಸನ ಅಚ್ಚರಿಯನ್ನುಂಟುಮಾಡುತ್ತವೆ. ಆಫ್ರಿಕಾ ಹಾಗೂ ಏಷಿಯಾದ ಆನೆಗಳೆರಡರಲ್ಲಿ ಬದಲಾವಣೆಗಳಿವೆ. ಸಸ್ತನಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಕೆಳಗಿನ ಬಾಚಿ ಹಲ್ಲುಗಳು ಹಾಗೂ ನೆಡುವ ಕೋರೆ ಹಲ್ಲುಗಳು ಆನೆಗಳಲ್ಲಿ ಕಂಡುಬರುವುದಿಲ್ಲ. ಆದರೆ ಉದ್ದನೆಯ ಕೋರೆ ಹಲ್ಲುಗಳು ಏಷಿಯಾದ ಗಂಡು ಆನೆಗಳಲ್ಲಿ ಕಂಡುಬರುತ್ತವೆ. ಹೆಣ್ಣಾನೆಗಳಿಗೆ ಕೋರೆಗಳಿಲ್ಲ. ಆದರೆ ಆಫ್ರಿಕಾದ ಆನೆಗಳಲ್ಲಿ ಗಂಡು ಹಾಗೂ ಹೆಣ್ಣಾನೆಗಳೆರಡರಲ್ಲಿಯೂ ಕೋರೆಗಳು ಕಂಡುಬರುತ್ತವೆ. ಮೇಲ್ಬದಿಯ ಚುಚ್ಚುವ ಹಲ್ಲುಗಳು ಮಾಡುವ ಕೆಲಸವನ್ನು ಕೋರೆಗಳು ಮಾಡುತ್ತವೆ. ಈ ಕೋರೆಗಳು ಆಹಾರ ಸಂಕಲನದಲ್ಲಿ ಸಣ್ಣ ಪಾತ್ರವನ್ನು ವಹಿಸುತ್ತವೆ. ಆದರೆ ಆಹಾರವನ್ನು ಜಗಿಯುವಲ್ಲಿ ಹಾಗೂ ನುಂಗುವಲ್ಲಿ ಈ ಕೋರೆಗಳು ಸಹಾಯ ಮಾಡಲಾರವು. ಕೋರೆ ಹಲ್ಲುಗಳು ಬಾಯಿಂದ ಹೊರಚಾಚಿರುವ ಹಲ್ಲುಗಳಾಗಿವೆ. ಅವು ಸತತವಾಗಿ ಬೆಳೆಯುತ್ತವೆ. ಇವುಗಳ ಸಹಾಯದಿಂದ ವೈರಿಗಳೊಂದಿಗೆ ಆನೆಗಳು ಹೋರಾಡುವುದುಂಟು. ಆದರೆ ಆಹಾರ ಪಚನ ಕ್ರಿಯೆಯಲ್ಲಿ ಇವುಗಳ ಪಾತ್ರ ಏನೂ ಇಲ್ಲ. ಆನೆಗಳಲ್ಲಿ ದವಡೆಯ ಮೇಲ್ಭಾಗ ಹಾಗೂ ಕೆಳಭಾಗಗಳಲ್ಲಿ ಸಮತಟ್ಟಾದ ದವಡೆ ಹಲ್ಲುಗಳಿವೆ. ಒಂದೊಂದು ದವಡೆಯಲ್ಲಿಯೂ ಆರು ದವಡೆ ಹಲ್ಲುಗಳಿರುತ್ತವೆ. ಅಂದರೆ ಆನೆಯ ಒಟ್ಟು ದವಡೆ ಹಲ್ಲುಗಳು ಇಪ್ಪತ್ನಾಲ್ಕು ಇರುತ್ತವೆ. ಇವು ಒಂದೇ ಬಾರಿಗೆ ಹುಟ್ಟಿ ಬೆಳೆಯದೆ ಒಂದಾದ ನಂತರ ಒಂದರಂತೆ ಅನುಕ್ರಮವಾಗಿ ಬೆಳೆಯುತ್ತವೆ. ಹಲ್ಲುಗಳು ಸವೆದಂತೆಲ್ಲಾ ವಯೋಸಹಜವಾಗಿ ಹೊಸ ಹಲ್ಲುಗಳು ವಸಡಿಗೆ ಹೊಂದಿಕೊಂಡಂತೆ ವಿಶಾಲವಾಗಿ ಬೆಳೆಯುತ್ತವೆ.

ಅದೇ ತಾನೆ ಹುಟ್ಟಿದ ಆನೆಮರಿಯ ನಾಲ್ಕು ದವಡೆಗಳಲ್ಲಿ ಪ್ರತಿಯೊಂದು ದವಡೆಗೆ ಎರಡು ಹಲ್ಲಿನಂತೆ ಒಟ್ಟು ಎಂಟು ಹಲ್ಲುಗಳು ಕಾಣಿಸುತ್ತವೆ. ಇವುಗಳಲ್ಲಿ ಮೊದಲಿನ

ಹಲ್ಲುಗಳು ಎರಡು ಇಂಚುಗಳಷ್ಟಿರುತ್ತವೆ. ಅದರ ಹಿಂದಿರುವ ಎರಡನೆಯವು ಮೊದಲ ಹಲ್ಲಿನ ಎರಡರಷ್ಟು ಭಾಗ ದೊಡ್ಡವಾಗಿರುತ್ತವೆ. ಹುಟ್ಟು ಹಲ್ಲುಗಳು ಆನೆ ಎರಡು ಮೂರನೇ ವಯಸ್ಸಿಗೆ ಬರುವಷ್ಟರಲ್ಲಿ ಸವೆದು ಉದುರುತ್ತವೆ. ಎರಡನೇ ಹಲ್ಲುಗಳು ದವಡೆಯ ಎಲುಬಿಗೆ ಹೊಂದಿಕೊಂಡು ಬೆಳೆಯುತ್ತವೆ. ಇವು ಹದಿಮೂರನೇ ವಯಸ್ಸಿಗೆ ಬರುವಷ್ಟರಲ್ಲಿ ಸಂಪೂರ್ಣವಾಗಿ ಬೆಳೆದು ಕಾರ್ಯ ನಿರ್ವಹಿಸುತ್ತವೆ. ಆನೆಯು ಇಪ್ಪತ್ತಾಲ್ಕನೇ ವಯಸ್ಸಿಗೆ ಬರುವಷ್ಟರಲ್ಲಿ ನಾಲ್ಕನೇ ದವಡೆ ಹಲ್ಲು ಬಂದಿರುತ್ತವೆ. ಇದಾದ ತರುವಾಯ ವಯೋಸಹಜವಾಗಿ ಐದನೇ ಹಂತದ ಹಲ್ಲುಗಳು ಬೆಳೆಯುವುದನ್ನು ಕಾಣಬಹುದು. ನಲವತ್ತನೇ ವಯಸ್ಸಿನಲ್ಲಿಯ ಆಜುಬಾಜಿಗೆ ಆನೆಯು ಆರನೇ ಹಂತದ ದಂತಪಂಕ್ತಿಯನ್ನು ಪಡೆಯುತ್ತವೆ. ಇದು ಆನೆಗಳ ಹಲ್ಲಿನ ಹುಟ್ಟಿನ ಕೊನೆಯ ಹಂತವಾಗಿರುತ್ತದೆ. ಈ ಹಲ್ಲುಗಳು ದವಡೆಯ ಮುಖಭಾಗದಲ್ಲಿ ಸುಮಾರು ಹತ್ತು ಇಂಚುಗಳವರೆಗೆ ಲಂಭವಾಗಿ ಹುಟ್ಟಿಬರಲು ಪ್ರಾರಂಭಿಸುವವು. 'ಆನೆ ಐವತ್ತನೇ ವಯಸ್ಸು ತಲುಪುವಷ್ಟೊತ್ತಿಗೆ ತನ್ನ ಕೊನೆಯ ಹಲ್ಲು ಶ್ರೇಣಿ ಹೊಂದಿರುವುದು. ಆನೆಗೆ ವಯಸ್ಸಾದಂತೆ ನಿಧಾನವಾಗಿ ಆಹಾರವನ್ನು ಜಗಿದು ತಿನ್ನುವ ಸಾಮರ್ಥ್ಯವೂ ಕಡಿಮೆಯಾಗುತ್ತಾ ಸಾಗುತ್ತದೆ. ಹಲ್ಲುಗಳು ಪದರು ಪದರಾಗಿ ಸವೆಯುತ್ತಾ ಸಾಗುತ್ತವೆ.'[೮೫] ತಿಂದ ಆಹಾರವು ಹಲ್ಲುಗಳ ಸವೆತದಿಂದಾಗಿ ಪೂರ್ಣವಾಗಿ ಜಗಿಯಲಾಗದೆ ಲದ್ದಿಯಲ್ಲಿ ಹಾಗೆಯೇ ಹೊರಬರುತ್ತದೆ. ಹೀಗಾಗಿ ಜೀರ್ಣವಾಗುವ ಚಿಗುರಿನದಾಗಿದ್ದು ಜಗಿಯಲು ಸುಲಭವಾದಂತಹ ಆಹಾರವನ್ನು ಆಯ್ಕೆ ಮಾಡಿಕೊಳ್ಳತೊಡಗುತ್ತದೆ. ಆದರೆ ಮಳೆಗಾಲದ ಹೊರತಾಗಿ ಬೇರೆ ದಿನಗಳಲ್ಲಿ ಚಿಗುರಿನ ಆಹಾರವು ದೊರೆಯುವುದು ಕಷ್ಟಸಾಧ್ಯ. ಹೀಗಾಗಿ ಆಹಾರದ ಕೊರತೆಯಿಂದ ಮುದಿ ಆನೆಗಳು ಬಳಲತೊಡಗುತ್ತವೆ. ಆನೆಗಳಲ್ಲಿ ಬೆಳೆಯುವ ಕೋರೆಗಳು ನಾನಾ ಬಣ್ಣದವಾಗಿರುತ್ತವೆ ಎಂದು ಹೇಳಲಾಗುತ್ತದೆ. ವಿಶೇಷವಾಗಿ ಹಾಲಿನ ಕೆನೆಯ ಬಣ್ಣದ ಕೋರೆಗಳು, ತಿಳಿಗೆಂಪಿನ ಬಣ್ಣದ ಕೋರೆಗಳು, ಹಳದಿ ಮಿಶ್ರಿತ ಕೋರೆಗಳು, ಹಾಲಿನಂತೆ ಬಿಳಿ ಬಣ್ಣದ ಕೋರೆಗಳಿರುತ್ತವೆ ಎಂದು ತಿಳಿದುಬರುತ್ತದೆ. ಹಾಗೆಯೇ ಉದ್ದವಾಗಿ ಬಿಲ್ಲಿನಂತೆ ಬಾಗಿದ ಅರ್ಧ ಚಂದ್ರಾಕೃತಿಯಲ್ಲಿ ಆಕಾಶಕ್ಕೆ ಮುಖ ಮಾಡಿದ ಕೋರೆಗಳು, ಭೂಮಿಯ ಕಡೆ ಮುಖ ಮಾಡಿದ ಬಾಗಿದ ಕೋರೆಗಳು ಇರುತ್ತವೆಂದು ಹೇಳಲಾಗುತ್ತದೆ. ಅದೇ ರೀತಿ ಕ್ಯಾನ್ ಜೀಟ್ ಹೆಸರಿನ ವಿಶೇಷ ಕೋರೆ ಹಲ್ಲುಗಳು ಇರುವುದಾಗಿಯೂ ತಿಳಿದುಬರುತ್ತದೆ. ಈ ಕುರಿತು ಗಜತಜ್ಞ ವಿಲಿಯಮ್ಸರ ಮಾತುಗಳನ್ನು ನೋಡಿ 'ಕ್ಯಾನ್ ಜೀಟ್ ಎಂಬುದು ಒಂದು ಬಗೆಯ ಅಪೂರ್ವವಾದ ದಂತದ ಹೆಸರು. ಉಂಗುರ ಉಂಗುರವಾಗಿ ಕಬ್ಬಿನ

ಗಣೆಯಂತೆ ವಂಕಿ ವಂಕಿಯಾಗಿರುವ ದಂತ[೪೪]ವಾಗಿರುತ್ತದೆ ಎಂದು ಹೇಳಲಾಗುತ್ತದೆ. ಹೀಗೆ ಕೋರೆಗಳಲ್ಲಿಯೇ ಹಲವು ವಿಧದ ಕೋರೆಗಳಿದ್ದು ಅವುಗಳ ಗಾತ್ರದಲ್ಲಿಯೂ ವ್ಯತ್ಯಾಸಗಳಿರುತ್ತವೆ ಎಂದು ತಿಳಿದುಬರುತ್ತದೆ.

**ಕಾಲು:** ಕಾಲುಗಳಲ್ಲಿ ವಿಶೇಷವಾಗಿ ಮುಂಗಾಲುಗಳು ಸದೃಢತೆಯನ್ನು ಹೊಂದಿದ ಉಕ್ಕಿನ ಕಂಬದಂತೆ ಆನೆಯ ಇಡೀ ದೇಹಕ್ಕೆ ಆಧಾರವನ್ನು ಕೊಡುತ್ತವೆ. ಆನೆಯು ಸಾಮಾನ್ಯವಾಗಿ ತನ್ನ ತುದಿಗಾಲ ಮೇಲೆ ನಡೆಯುತ್ತವೆ. ಪ್ರತಿ ಹೆಜ್ಜೆಗೂ ಪಾದವು ಮೆತ್ತೆಯಂತೆ ಪರಿಣಮಿಸಿ ಕಾರ್ಯವೆಸಗುವ ತಂತ್ರದಿಂದ ಕೂಡಿದೆ. ಮುಂಗಾಲ ತುದಿ ಎಲುಬುಗಳು ನೆಲದೆಡೆಗೆ ಚಾಚಿದ್ದು ಹೊರನೋಟಕ್ಕೆ ಅವು ಕಾಣುವುದಿಲ್ಲ. ಹಿಗ್ಗುವ ನಾರಿನಂತಹ ಮಾಂಸದ ಮೆತ್ತೆಯಲ್ಲಿ ಬಂಧಿಸಲ್ಪಟ್ಟು ಅವು ಅಡಗಿ ಕುಳಿತಿವೆ. ಎಲುಬು, ನರ, ಕೊಬ್ಬು ಈ ಎಲ್ಲಾ ಸಮೂಹವು ದಪ್ಪಗಿನ ಹೊರಹೊದಿಕೆಯಾದ ಚರ್ಮದಿಂದ ಮುಚ್ಚಿ ಹಿಡಿಯಲ್ಪಟ್ಟಿವೆ. ಈ ಚರ್ಮದ ಹೊದಿಕೆಯ ಹೊರಭಾಗದಲ್ಲಿ ಉಗುರುಗಳು ಅಥವಾ ಉಗುರಿನಂತಹ ಚಿಪ್ಪಿನಿಂದ ಕೂಡಿವೆ. ಆದರೆ ಅವು ಪಾದದ ಎಲುಬುಗಳಿಗೆ ಹೊಂದಿಕೊಂಡಿಲ್ಲ. ಮನುಷ್ಯನ ಉಗುರಿನಂತೆಯೇ ಪ್ರತ್ಯೇಕವಾದ ಭಾಗ ಇದಾಗಿದೆ. ಆನೆಗಳು ಓಡಾಡಿದಂತೆ ಇವು ಸವೆದುಹೋಗುವುದುಂಟು. ಈ ಉಗುರುಗಳು ಆನೆಯ ಮುಂಗಾಲಿನಲ್ಲಿ ಪ್ರತಿಕಾಲಿಗೆ ಐದರಂತೆ ಒಟ್ಟು ಹತ್ತು ಇರುತ್ತವೆ. ಹಿಂಗಾಲಿಗೆ ಪ್ರತಿ ಕಾಲಿಗೆ ನಾಲ್ಕರಂತೆ ಎಂಟು ಇರುತ್ತವೆ. ಒಟ್ಟು ಹದಿನೆಂಟು ಉಗುರುಗಳಿರುತ್ತವೆ. ಆನೆಗೆ ಅಷ್ಟು ದೊಡ್ಡಗಾತ್ರದ ದೇಹವಿದ್ದರೂ ಅವು ಓಡಾಡುವಾಗ ಸಪ್ಪಳವಾಗದಂತೆ ಅಂದರೆ ಕಳ್ಳಬೆಕ್ಕಿನ ಹೆಜ್ಜೆಯಂತೆ ನಡೆಯಬಲ್ಲವು. ಆನೆಗಳು ನಡೆಯುವಾಗ ಎಡಭಾಗದ ಎರಡೂ ಕಾಲುಗಳನ್ನು ಒಮ್ಮೆಗೆ ಏಕಕಾಲದಲ್ಲಿ ಹಾಗೂ ಬಲಭಾಗದ ಕಾಲುಗಳನ್ನು ಒಮ್ಮೆ ಏಕಕಾಲದಲ್ಲಿ ಇರಿಸಿ ನಡೆಯುತ್ತವೆ.

**ಸೊಂಡಿಲು:** ಆನೆಗಳ ವಿಶಿಷ್ಟ ಅಂಗಗಳಲ್ಲಿ ಸೊಂಡಿಲು ಒಂದು. ಆನೆಯ ಬೃಹತ್ ದೇಹಾಕೃತಿಯಂತೆ ಎಲ್ಲರನ್ನೂ ಆಕರ್ಷಿಸುವ ಅಂಗ ಇದಾಗಿದೆ. ಏಕೆಂದರೆ ಆನೆಯ ಹೊರತಾಗಿ ಬೇರೆ ಯಾವ ಪ್ರಾಣಿಯಲ್ಲಿಯೂ ಈ ರೀತಿಯ ಉದ್ದನೆಯ ಮೂಗು ಕಂಡುಬರುವುದಿಲ್ಲ. ಆನೆಯ ಈ ಸೊಂಡಿಲು ಉದ್ದವಾಗಿದ್ದು ವಾಸನೆಯನ್ನು ಗ್ರಹಿಸುವ, ಉಸಿರಾಡುವ ಕ್ರಿಯೆಯಲ್ಲಿ ನಿರತವಾಗಿರುತ್ತದೆ. ಅಷ್ಟೇ ಅಲ್ಲದೆ ಆಹಾರವನ್ನು ಬಾಯೊಳಗೆ ಇರಿಸಿಕೊಳ್ಳಲು, ಆಹಾರವನ್ನು ಕೀಳಲೂ, ನೀರನ್ನು ಕುಡಿಯಲು, ದೇಹದ ಮೇಲೆ ನೀರೆರಚಿಕೊಳ್ಳಲು, ಹುಡಿಮಣ್ಣನ್ನು ದೇಹದ ಮೇಲೆ ಸಿಂಪಡಿಸಿಕೊಳ್ಳಲೂ ಸಹ ಈ

ಸೊಂಡಿಲಿನ ಸಹಾಯವನ್ನು ಪಡೆಯುತ್ತದೆ. ಒಂದರ್ಥದಲ್ಲಿ ಮನುಷ್ಯನ ಕೈಗಳಂತೆ ಈ ಸೊಂಡಿಲು ಕಾರ್ಯವೆಸಗುತ್ತದೆ.

**ಕಿವಿ:** ಆನೆಗಳ ಮತ್ತೊಂದು ವಿಶಿಷ್ಟವಾದ ಅಂಗ ಕಿವಿ. ಆಫ್ರಿಕಾ ಹಾಗೂ ಏಷಿಯಾದ ಆನೆಗಳಲ್ಲಿ ವ್ಯತ್ಯಾಸ ಗುರುತಿಸಲು ಮುಖ್ಯವಾಗಿ ನೋಡುವುದೇ ಈ ಕಿವಿಗಳಿಂದ. ಆಫ್ರಿಕಾದ ಆನೆಯ ಕಿವಿ ಏಷಿಯಾದ ಆನೆಯ ಕಿವಿಗಳಿಗಿಂತಲೂ ವಿಶಾಲವಾಗಿರುತ್ತವೆ. 'ಆನೆಯು ತನ್ನ ಉಳಿವಿಗಾಗಿ ಅರಣ್ಯದ ಸಪ್ಪಳಗಳನ್ನು ಸೋಸಿ ಗುರ್ತಿಸಲು ಹಾಗೂ ಯಾವಾಗಲೂ ಎಚ್ಚರ ವಹಿಸಲು ಕಿವಿಗಳ ಮೇಲೆ ಸಂಪೂರ್ಣ ಅವಲಂಬಿಸಿವೆ'[೮೭] ಹಾಗೆಯೇ ಆನೆಯು ತನ್ನ ಮರಿಗೆ ಅಥವಾ ಗುಂಪಿನ ಇತರ ಆನೆಗಳಿಗೆ ಸಂಜ್ಞೆಗಳನ್ನು ತಿಳಿಸಲು ಸಹ ಕಿವಿಗಳನ್ನು ವಿಶಿಷ್ಟವಾಗಿ ಬಡಿದುಕೊಳ್ಳುತ್ತ ಎಚ್ಚರಿಸುತ್ತವೆ. ಆನೆಗಳಲ್ಲಿ ಕಿವಿಗಳು ಬೀಸಣಿಗೆಯಂತೆ ಕೆಲಸ ಮಾಡುತ್ತವೆ. ದೇಹದ ಉಷ್ಣತೆಯನ್ನು ಕಡಿಮೆ ಮಾಡಿಕೊಳ್ಳಲು ಹೊರಮೈ ಕಿವಿಗಳನ್ನು ನಿರಂತರವಾಗಿ ಬೀಸಣಿಗೆಯಂತೆ ಅಲುಗಾಡಿಸುತ್ತಲೇ ಇರುತ್ತವೆ. 'ಇಯಾನ್ ಡೊಗ್ಲಾಸ್-ಹ್ಯಾಮಿಲ್ಟನ್ ಎಂಬುವವರು ಆನೆಯ ಕಿವಿಯ ಮೂಲಕ ಹಾದುಹೋದ ರಕ್ತವು ೧೬ ಡಿಗ್ರಿ ಫ್ಯಾರನ್‌ಹೀಟ್‌ನಷ್ಟು ಉಷ್ಣತೆ ಕಡಿಮೆಯಾದುದನ್ನು ದಾಖಲಿಸಿದ್ದಾರೆ.'[೮೮] ಆನೆ ಯಾವಾಗ ಕಿವಿಗಳನ್ನು ಅಲುಗಾಡಿಸುವುದನ್ನು ನಿಲ್ಲಿಸುತ್ತದೋ ಆಗ ಅದು ಕೊನೆಯ ದಿನಗಳನ್ನು ಎಣಿಸುತ್ತದೆಂದೇ ಅರ್ಥ.

**ಕಣ್ಣು:** ಆನೆಗಳ ಆಕಾರಕ್ಕೆ ಹೋಲಿಸಿದರೆ ಅವುಗಳ ಕಣ್ಣು ತುಂಬಾ ಚಿಕ್ಕವೆಂದೇ ಹೇಳಬಹುದು. ಆನೆಗೆ ದೂರದೃಷ್ಟಿ ಕಡಿಮೆಯಂದು ಹೇಳಲಾಗುತ್ತದೆ. ಕಣ್ಣಿನ ದೃಷ್ಟಿಯಲ್ಲಿರುವ ಕೊರತೆಯನ್ನು ತುಂಬಿಕೊಳ್ಳಲು ಸೊಂಡಿಲು ಹಾಗೂ ಕಿವಿಗಳನ್ನು ಹೆಚ್ಚು ಆಶ್ರಯಿಸಿವೆ. ಆದರೆ ಆನೆಯ ದೃಷ್ಟಿಯು ಮನುಷ್ಯನ ದೃಷ್ಟಿಯಷ್ಟೇ ಸಾಮರ್ಥ್ಯವನ್ನು ಹೊಂದಿದೆ ಎಂಬುದನ್ನು ಗಜತಜ್ಞರು ಗುರುತಿಸಿದ್ದಾರೆ. ಆನೆಗೆ ಜ್ಞಾಪಕಶಕ್ತಿ ಹೆಚ್ಚಿದ್ದು ತಾನು ನೋಡಿದ ವಸ್ತುವನ್ನು ಅಥವಾ ಸ್ಥಳವನ್ನು ಮತ್ತೊಮ್ಮೆ ನೋಡಿದಾಗ ಗುರುತಿಸಬಲ್ಲದು ಎಂದು ಹೇಳುತ್ತಾರೆ.

**ಮೊಲೆ:** ಕೋತಿಯ ಹೊರತಾಗಿ ಇತರ ಚತುಷ್ಪಾದಿ ಪ್ರಾಣಿಗಳಲ್ಲಿ ಸಾಮಾನ್ಯವಾಗಿ ಮೊಲೆ ಹಿಂಗಾಲಿನ ತೊಡೆಗಳ ಮಧ್ಯಭಾಗದಲ್ಲಿರುತ್ತವೆ. ಆದರೆ ಆನೆಗಳಿಗೆ ಮೊಲೆಗಳು ಕೋತಿ, ಮನುಷ್ಯರಲ್ಲಿರುವಂತೆ ಎದೆಯ ಮೇಲೆಯೇ ಮೊಲೆಗಳಿರುತ್ತವೆ. ಆನೆಯ ಮರಿಗಳು ಎರಡು ವರ್ಷದವರೆಗೂ ತಾಯಿಯ ಹಾಲನ್ನು ಕುಡಿಯುತ್ತವೆ. ಹಾಲನ್ನು ಕುಡಿಯುವ ಮರಿಯ ಸೊಂಡಿಲು ಹಾಲನ್ನು ಕುಡಿಯುವ ಸಂದರ್ಭದಲ್ಲಿ ನಿಷ್ಪ್ರಯೋಜಕ

ವಾಗಿರುತ್ತದೆಂದೇ ಹೇಳಬಹುದು. ಮರಿಯಾನೆ ತಾಯಿಯಾನೆಯ ನಾಲ್ಕು ಕಾಲುಗಳ ಮಧ್ಯದಲ್ಲಿ ಅಥವಾ ಪಕ್ಕದಲ್ಲಿ ನಿಂತು ಬಾಯಿ ಹಚ್ಚಿಯೇ ತಾಯಿಯ ಮೊಲೆ ಹಾಲನ್ನು ಕುಡಿಯುತ್ತವೆ.

**ಆಯುಸ್ಸು:** ಆನೆಗಳ ಆಯುಸ್ಸಿನ ಕುರಿತು ಹಲವಾರು ನಂಬಿಕೆಗಳಿವೆ. ಆನೆಗಳು ೧೫೦ ವರ್ಷ ಜೀವಿಸುತ್ತವೆ ಇತ್ಯಾದಿ ಹೇಳಿಕೆಗಳನ್ನು ಹಳೆಯ ಗ್ರಂಥಗಳು ತಿಳಿಸುತ್ತವೆ. ಆನೆಗಳ ವಯಸ್ಸಿನ ಕುರಿತು ಸೌಗಂಧಿಕಾ ಪರಿಣಯದಲ್ಲಿ ಹೀಗೆ ಹೇಳಲಾಗಿದೆ. ‘ಹತ್ತು ವರುಷ ಮೊದಲುಗೊಂಡು ಹದಿನಾಲ್ಕು ವರುಷ ಪರ್ಯಂತರವೂ ಗಜಗಳಿಗೆ ಉತ್ತಮ ವಯಸ್ಸೆನಿ ಸುವುದು. ಈ ವಯಸ್ಸಿನಲ್ಲಿ ಯುದ್ಧ ಮೊದಲಾದ ಕೌಶಲ್ಯವಂ ಕಲಿಸಬೇಕು. ಹದಿನಾಲ್ಕು ವರುಷ ಮೊದಲಾಗಿ ಮೂವತ್ತು ವರುಷ ಮೊದಲುಗೊಂಡು ಮಧ್ಯಮ ವಯಸ್ಸೆಂದು ತಿಳಿಯತಕ್ಕದ್ದು. ಮೂವತ್ತು ವರುಷ ಮೊದಲುಗೊಂಡು ಎಪ್ಪತ್ತು ವರುಷ ಪರ್ಯಂತರವು ಅಧಮ ವಯಸ್ಸೆಂದು ತಿಳಿಯತಕ್ಕದ್ದು. ಎಪ್ಪತ್ತು ವರುಷದ ಮೇಲೆ ಆನೆಗಳು ಯಾವ ಕೆಲಸಕ್ಕು ಯೋಗ್ಯವಾಗಲಾರವು. ಸೊಂಡಿಲು, ಮುಖವು, ದಂತಗಳು, ಶಿರಸ್ಸು, ನೇತ್ರಗಳು, ಕಿವಿಗಳು, ಕತ್ತು, ಗಂಡಸ್ಥಲವು, ಎದೆಯು, ಶರೀರವು, ಗುಹ್ಯವೂ, ಅಂಡದ್ವಯವು ಈ ಹನ್ನೆರಡೂ ಕ್ಷೇತ್ರಗಳೆನಿಸಿಕೊಳ್ಳುವವು. ಇವುಗಳಿಗೆ ಒಂದೊಂದಕ್ಕೆ ಹತ್ತು ಹತ್ತು ವರುಷದ ಮೇರೆ ನೂರಿಪ್ಪತ್ತು ವರುಷಗಳು ಗಜಗಳಿಗೆ ಪರಮಾಯುಸ್ಸೆಂದು ತಿಳಿಯತಕ್ಕದ್ದು. ಈ ಹನ್ನೆರಡು ಕ್ಷೇತ್ರಗಳೂ ಯಾವ ಗಜಕ್ಕೆ ಲಕ್ಷಣವಾಗಿರುವುದೋ ಆ ಗಜಗಳಿಗೆ ಪೂರ್ಣಾಯುಸ್ಸಂ ಪಡೆವುದು. ಎಷ್ಟು ಕ್ಷೇತ್ರಗಳು ಲಕ್ಷಣಗಳಿಂದ ಹೀನವಾಗಿರುವವೋ ಕ್ಷೇತ್ರ ಒಂದಕ್ಕೆ ಹತ್ತು ವರುಷದ ಮೇರೆಗೆ ವಯಸ್ಸು ಕಡಿಮೆಯಾಗುವುದು ಮತ್ತೂ ಭದ್ರ ಜಾತಿ ಗಜಗಳಿಗೆ ನೂರಿಪ್ಪತ್ತು ವರುಷ ಆಯುಸ್ಸೆಂದು, ಮಂದ್ರ ಜಾತಿ ಗಜಗಳಿಗೆ ಎಂಬತ್ತು ವರುಷ ಆಯುಸ್ಸೆಂದು, ಮೃಗ ಜಾತಿ ಗಜಗಳಿಗೆ ನಲವತ್ತು ವರುಷ ಆಯುಸ್ಸೆಂದು ತಿಳಿಯತಕ್ಕದ್ದು’[೯] ಎಂದು ಗ್ರಂಥಕರ್ತೃ ತಿಳಿಸುತ್ತಾರೆ. ಆದರೆ ಆನೆಯ ಆಯುಸ್ಸು ಮನುಷ್ಯನ ಆಯುಸ್ಸಿಗೆ ಸಮಾನವಾಗಿದೆ ಎಂದು ತಜ್ಞರು ಅಭಿಪ್ರಾಯಪಡುತ್ತಾರೆ. ಸಾಮಾನ್ಯವಾಗಿ ಹೆಣ್ಣಾನೆಗಳು ೧೫-೧೬ನೇ ವಯಸ್ಸಿಗೆ ಪ್ರಾಯಕ್ಕೆ ಬಂದರೆ ಗಂಡಾನೆಗಳು ೧೭ರಿಂದ ೨೦ರ ವಯಸ್ಸಿನೊಳಗೆ ಪ್ರಾಯಕ್ಕೆ ಬರುತ್ತವೆ ಎಂದು ಹೇಳಲಾಗುತ್ತದೆ. ‘ಮನುಷ್ಯರೂ ಆನೆಗಳೂ ಒಂದೇ ಆಯುಸ್ಸು ಉಳ್ಳವರಾಗಿ, ಹೆಚ್ಚು ಕಡಿಮೆ ಒಂದೇ ವಯಸ್ಸಿಗೆ ಪ್ರಾಯಕ್ಕೆ ಬರುವುದರಿಂದ ಇಡೀ ಬಾಳೆಲ್ಲ ಇಬ್ಬರೂ ಒಟ್ಟಿಗೆ ಇರುವುದು ಸಾಧ್ಯ’[೯೦] ಎಂದು ಹೇಳಲಾಗುತ್ತದೆ. ೩೫ರಿಂದ ೪೫ರ ಒಳಗೆ ಮಧ್ಯ ಪ್ರಾಯ. ಆಗ ಆನೆಗಳು ಹೆಚ್ಚು ಕೆಲಸ ಮಾಡಲು ಯೋಗ್ಯವಾಗಿರುತ್ತವೆ. ೬೦ರಿಂದ ೭೫ರ ಒಳಗೆ ಮುದಿಯ ಪ್ರಾಯ.

ಹಲ್ಲುಗಳೆಲ್ಲಾ ಸವೆದೋ ಅಥವಾ ಉದುರಿಯೋ ಆಹಾರ ಸೇವಿಸದ ಸ್ಥಿತಿಗೆ ಬಂದು ಕೊನೆಯುಸಿ ರೆಳೆಯುತ್ತವೆ.

**ಜನನಾಂಗಗಳು:** ಆನೆಯ ಜನನಾಂಗಗಳು ಸಾಮಾನ್ಯವಾಗಿ ಇತರ ನಾಲ್ಕು ಪಾದದ ಪ್ರಾಣಿಗಳಲ್ಲಿರುವಂತೆ ಇವೆ ಎಂದು ಮೇಲ್ನೋಟಕ್ಕೆ ತೋರಿದರೂ ಕೆಲವು ವಿಶೇಷ ಲಕ್ಷಣಗಳನ್ನು ಹೊಂದಿವೆ. ಗಂಡಾನೆಗಳಲ್ಲಿ ಗುಪ್ತಾಂಗವು ಭಾರಿ ಉದ್ದ ಹಾಗೂ ಗಾತ್ರವನ್ನು ಹೊಂದಿರುತ್ತದೆ. ಮಾನವನಿಗೆ ಆನೆಯ ಪುರುಷ ಜನನಾಂಗವು ಅತಿಯಾಗಿ ದೊಡ್ಡದಾಗಿದೆ ಎಂದು ತೋರಿದರೂ ಅದು ಆನೆಯ ಗಾತ್ರಕ್ಕೆ ಸರಿಹೊಂದುವಂತಹ ಸಮರ್ಪಕ ಅಳತೆಯನ್ನು ಹೊಂದಿದೆ ಎಂದು ಹೇಳಬಹುದು. ಇತರ ಚತುಷ್ಪಾದಿಗಳಲ್ಲಿ ಸಾಮಾನ್ಯವಾಗಿ ವೃಷಣಗಳು ಹಿಂಭಾಗದ ಎರಡು ಕಾಲುಗಳಿಗೆ ತಾಗುವಂತೆ ಹೊರ ನೋಟಕ್ಕೆ ಕಾಣುತ್ತಿರುತ್ತವೆ. ಆದರೆ ಆನೆಗಳಲ್ಲಿ ವೃಷಣಗಳು ಹೊರನೋಟಕ್ಕೆ ಕಾಣದಂತೆ ದೇಹದ ಒಳಭಾಗದಲ್ಲಿ ಮುಚ್ಚಿಕೊಂಡಿರುವುದು. ಹೆಣ್ಣಾನೆಗಳಲ್ಲಿಯೂ ಗುಪ್ತಾಂಗವು ಹಿಂದಿನ ಕಾಲು ಹಾಗೂ ಬಾಲದ ಮಧ್ಯ ಭಾಗದಲ್ಲಿರದೆ ಹಿಂಗಾಲುಗಳ ಕೆಳಭಾಗದಲ್ಲಿರುತ್ತದೆ. ಹಾಗೆ ನೋಡಿದರೆ ಸಸ್ತನಿಗಳಲ್ಲಿಯೇ ಹೆಣ್ಣಾನೆಗೆ ಗುಪ್ತಾಂಗ ಹಾಗೂ ಗುದದ್ವಾರದ ಮಧ್ಯದಲ್ಲಿ ಹೆಚ್ಚು ಅಂತರ ಇರುವುದು ತಿಳಿದುಬರುತ್ತದೆ.

**ಹೆಣ್ಣಾನೆಗಳ ಲಕ್ಷಣ**

ಮುಮ್ಮಡಿ ಕೃಷ್ಣರಾಜ ಒಡೆಯರ ಸೌಂಗಧಿಕಾ ಪರಿಣಯ ಕೃತಿಯಲ್ಲಿ ಸುಗಂಧ ಮಹಾರಾಜನಿಗೆ ತನ್ನ ಗುರುವಾದ ವಿದ್ಯಾಸಾಗರನ್ನು ಹೆಣ್ಣಾನೆಗಳ ಲಕ್ಷಣವನ್ನು ಈ ರೀತಿ ವಿವರಿಸುತ್ತಾನೆ. "ಬಟುವಾದ ಕುಂಭಸ್ಥಳವೂ ಸ್ತನಗಳೂ ಮನೋಹರವಾದ ರೋಮಗಳು ಗುಬ್ಬಚ್ಚಿಯ ನೇತ್ರದಂತೆ ವರ್ಣವುಳ್ಳ ನೇತ್ರಗಳು ಶುಭ್ರಮಾಗಿ ನುಣುಪಾದ ಮುಖವು ವಿಸ್ತಾರವಾದ ಎದೆಯು ಮಹತ್ತಾದ ಕಟಿಪಶ್ವಾದ್ಭಾಗವು ಮನೋಹರವಾದ ಗಮನವು ಸಹಾ ಉಳ್ಳದ್ದಾಗಿ ಸೌಂದರ್ಯವು ಕೆಂದಾವರೆಯಂತೆ ಕೆಂಪುವರ್ಣವುಳ್ಳ ದಂತ ಪಂಕ್ತಿವುಳ್ಳದ್ದಾಗಿಯೂ ಇರುವ ಹೆಣ್ಣಾನೆಯು ಯೂಥಪತಿಯಾದ ಗಜವಂ ಪ್ರಸವಿಸುವುದು. ಇಂಥಾ ಹೆಣ್ಣಾನೆಯು ಯಾವ ಅರಸಿಗೆ ಇರುವುದೋ ಆ ಅರಸು ಸ್ತ್ರೀ ಸಂಪತ್ತು ಉಳ್ಳವನಾಗುವನು.

ಇಂಥಾ ಆನೆಯಂ ಸರ್ವಕಾಲದಲ್ಲಿಯೂ ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ಪುರುಷಗಜಗಳಿಗೆ ಯಾವ ಲಕ್ಷಣಗಳು ಪೇಳಲ್ಪಟ್ಟವೋ ಆ ಲಕ್ಷಣಗಳೇ ಸ್ತ್ರೀ ಗಜಗಳಿಗೂ ಇರಬೇಕೆಂದು ಋಷಿಗಳು ಪೇಳುವರು. ಗಜದ ಶೂರತ್ವವು ಭಯಶೀಲತ್ವವೂ ಸಹಾ ಮಾವುತನ ಅಧೀನವಾದ್ದರಿಂದ ತನ್ನ ಸ್ವಾಧೀನದಲ್ಲಿರುವ ಶೂರನಾದ ಮಾವುತನನ್ನಿರಿಸಬೇಕು.

ಸನ್ನಾಹಯುಕ್ತವಾಗಿಯು ಶೌರ್ಯವು ಶೂರನಾದ ಮಾವುತನು ಪ್ರತಾಪವು ಉಳ್ಳ ಒಂದು ಗಜವು ಆರು ಸಾವಿರ ಅಶ್ವಂಗಳಂ ಜಯಿಸುವುದು. ಗಜವು ಯುದ್ಧದಲ್ಲಿ ನೂರು ಪ್ರಹಾರಗಳನ್ನಾದರೂ ಸಹಿಸುವುದು ಗಜಗಳು ಸಂತೋಷಯುಕ್ತಗಳಾದರೆ ಸ್ವಪಕ್ಷದಲ್ಲಿರುವರಂ ಸಂರಕ್ಷಿಸುವುದು ಕೋಪಯುಕ್ತಗಳಾದರೆ ಶತ್ರುಸೇನೆಯಂ ಚೂರ್ಣವಂ ಮಾಡಿ ಸ್ವಾಮಿಗೆ ಹಿತವನ್ನೇ ಮಾಡುವುದು. ಆದ್ದರಿಂದ ಗಜಗಳಿಗೆ ಸಮಾನವಾದ ಬಲವು ಯಾವ ಪ್ರಾಣಿಗಳಿಗೂ ಇಲ್ಲ. ಈ ಪರಿಯಾಗಿ ಪೇಳಲ್ಪಟ್ಟ ಲಕ್ಷಣಂಗಳಂ ಚೆನ್ನಾಗಿ ತಿಳಿದು ಪರೀಕ್ಷಿಸಿ ಉತ್ತಮ ಮಧ್ಯಮಾಧ್ಯಮ ಗಜಗಳಂ ತಿಳಿಯಬೇಕು ಎಂದು ವಿಸ್ತಾರವಾಗಿ ಪೇಳಿದ ವಿದ್ಯಾಸಾಗರನ ವಚನವಂ ಕೇಳಿ ಸಂತೋಷಭರಿತನಾಗಿ ಸುಗಂಧಮಹಾರಾಜೇಂದ್ರನು ಎಲೈ ಗುರುವಾದ ವಿದ್ಯಾಸಾಗರನೆ ಭೂಲೋಕದಲ್ಲಿ ಹುಟ್ಟಿರುವ ಗಜಗಳ ಲಕ್ಷಣಗಳಂ ನಿಮ್ಮಿಂದ ಕೇಳಿ ಅತ್ಯಂತ ಸಂತೋಷವಾಯಿತು ಎಂದು ಹೇಳುವನು."[೯]

**ಪಟ್ಟದಾನೆ**

ಪಟ್ಟದಾನೆಯ ಗುಣಲಕ್ಷಣಗಳ ಕುರಿತು ಮಮ್ಮಡಿ ಕೃಷ್ಣರಾಜ ಒಡೆಯರು ಸೌಗಂಧಿಕಾ ಪರಿಣಯ ದಲ್ಲಿ ಈ ರೀತಿಯಾಗಿ ವಿವರಿಸುತ್ತಾರೆ. "ಜಲಬಿಂದುಗಳಿಂದೊಡಗೂಡಿದ ಘೂತ್ಕರದಿಂ ಮೇಘದಂತೆ ಗರ್ಜಿಸುತ ಸುಕ್ಕುಯಿಲ್ಲದೆ ದಪ್ಪವಾದ ಶರೀರವು ಸಿಲುವಾದ ಚರ್ಮವು, ಅಚಿಜನದಂತೆ ಕಪ್ಪರ ವರ್ಣವು, ಸರ್ವಾಂಗಗಳಲ್ಲಿಯೂ ರೋಮಗಳು, ತಾಳೆ ಹೂವಿನಂತೆ ಹೊಂಬಣ್ಣವಾದ ಕೊಂಬುಗಳು, ಸಮವಾದ ದವಡೆಗಳು, ತಾಳಪತ್ರದಂತೆಯು ನಗಾರಿಯಂತೆಯು ಧ್ವನಿಯುಳ್ಳ ಕರ್ಣಗಳು, ಉನ್ನತವಾಗಿ ವರ್ತುಳವಾದ ಕುಂಭಸ್ಥಳಗಳು, ಹ್ರಸ್ವವಾಗಿ ದಪ್ಪವಾದ ಕಂಠವು, ಸಜ್ಜುಮಾಡಿ ಧನಸ್ಸಿನಂತೆ ಬೊಗ್ಗಿರುವ ಬೆನ್ನುಮೂಳೆಯು, ವರ್ತುಳವಾದ ಹೆಜ್ಜೆಗಳು, ಶುಭಕರಗಳಾದ ಇಪ್ಪತ್ತು ನಖಗಳು, ವಿಸ್ತಾರವಾದ ಎದೆಯು, ಸಣ್ಣದಾದ ಹೊಟ್ಟೆಯು, ಸೂಕ್ಷ್ಮಂಗಳಾದ ಕುಚಗಳು, ಶಂಖ ಚಕ್ರ ಗದಾಕಾರವಾದ ಬಿಂದುರೂಪವಾದ ಸುಳಿಗಳು ಇಂತು ಸುಲಕ್ಷಣಗಳಿಂ ಕೂಡಿರುವ ಗಜವು ವಿಷ್ಣುವಂಶದಿಂ ಜನಿಸಿರುವದ್ದರಿಂದ ಪಟ್ಟಕ್ಕೆ ಯೋಗ್ಯವಾಗಿ ಸಕಲ ಶುಭಕಾರ್ಯಗಳಂ ತನ್ನ ಒಡೆಯನಿಗೆ ಐಶ್ವರ್ಯವಂ ಜಯಲಕ್ಷ್ಮಿಯಂ ಕೂಡ ಉಂಟು ಮಾಡುವುದು"[೨] ಎಂದು ವಿವರಿಸುತ್ತಾರೆ.

**ಪಟ್ಟಕ್ಕೆ ಅಯೋಗ್ಯವಾದ ಆನೆಯ ಲಕ್ಷಣ**

"ಕೃಷವಾಗಿ ದೀರ್ಘವಾಗಿ ವಿಸ್ತಾರವಾಗಿ ಜೋಲುವ ಕತ್ತು ಬಗ್ಗಿದ ಹೆಗಲು ಉಳ್ಳದ್ದಾಗಿ ನಡೆಯುವಾಗ ಕಾಲುಗಳು ಮಸೆಯುವುದಾಗಿ ಎಡದ ಕೊಂಬು ಒಂದೇ ಉಳ್ಳದ್ದಾಗಿ ಮತ್ತು ಒಂದು ಕಿವಿ ಒಂದು ಕಣ್ಣು ಒಂದು ಪಾರ್ಶ್ವದಿಂದಲೂ ಹೀನವಾಗಿ

ಕರೀಮೇಘದಂತೆ ಶರೀರಕಾಂತಿಯೂ ಕಾವಿಬಣ್ಣದಂತೆ ಕೆಂಪಾದ ಹದಿನಾರು ಉಗುರುಗಳು ಉಳ್ಳದ್ದಾಗಿಯೂ ಹ್ರಸ್ವವಾಗಿ ಸೂಕ್ಷ್ಮವಾದ ಕಿವಿಯು ಬಾಲವು ಶಿಶ್ನವು ಉದ್ದವಾದ ಸೊಂಡಿಲು ಸಣ್ಣವಾದ ಕತ್ತು ಕಪ್ಪಾದ ನಾಲಿಗೆಯು ಈ ಲಕ್ಷಣಗಳುಳ್ಳ ಆನೆಯು ಪಟ್ಟಕ್ಕೆ ಅಯೋಗ್ಯವಾದ್ದು."[೯೩]

**ಪಟ್ಟಕ್ಕೆ ಯೋಗ್ಯವಾದ ಆನೆಯ ಲಕ್ಷಣ**

"ಜಲಬಿಂದುಗಳಿಂದೊಡಗೂಡಿದ ಘೂತ್ಕಾರದಿಂ ಮೇಘದಂತೆ ಗರ್ಜಿಸುತ ಸುಕ್ಕುಯಿಲ್ಲದೆ ದಪ್ಪವಾದ ಶರೀರವು ಸಿಲುವಾದ ಚರ್ಮವು ಅಂಜನದಂತೆ ಕಪ್ಪರವರ್ಣವು ಸರ್ವಾಂಗಗಳಲ್ಲಿಯೂ ರೋಮಗಳು ತಾಳೆ ಹೂವಿನಂತೆ ಹೊಂಬಣ್ಣವಾದ ಕೊಂಬುಗಳು ಸಮವಾದ ದವಡೆಗಳು ತಾಳಪತ್ರದಂತೆಯು ನಗಾರಿಯಂತೆಯು ಧ್ವನಿಯುಳ್ಳ ಕರ್ಣಗಳು ಉನ್ನತವಾಗಿ ವರ್ತುಳವಾದ ಕುಂಭಸ್ಥಳಗಳು ಹ್ರಸ್ವವಾಗಿ ದಪ್ಪವಾದ ಕಂಠವು ಸಜ್ಜುಮಾಡಿದ ಧನುಸ್ಸಿನಂತೆ ಬಾಗಿರುವ ಬೆನ್ನುಮೂಳೆಯು ವರ್ತುಳವಾದ ಹೆಜ್ಜೆಗಳು ಶುಭಕರಗಳಾದ ಇಪ್ಪತ್ತು ನಖಗಳು ವಿಸ್ತಾರವಾದ ಎದೆಯು ಸಣ್ಣನಾದ ಹೊಟ್ಟೆಯು ಸೂಕ್ಷ್ಮಂಗಳಾದ ಕುಚಗಳು ಶಂಖಚಕ್ರಗದಾಕಾರವಾದ ಬಿಂದುರೂಪಮಾದ ಸುಳಿಗಳು ಇಂತು ಸುಲಕ್ಷಣಗಳಿಂ ಕೂಡಿರುವ ಗಜವು ವಿಷ್ಣ್ವಂಶದಿಂ ಜನಿಸಿರುವುದರಿಂದ ಪಟ್ಟಕ್ಕೆ ಯೋಗ್ಯವಾಗಿ ಸಕಲಶುಭಕಾರ್ಯಂಗಳಂ ತನ್ನ ಒಡೆಯನಿಗೆ ಐಶ್ವರ್ಯವಂ ಜಯಲಕ್ಷ್ಮಿಯಂ ಕೂಡ ಉಂಟುಮಾಡುವುದು ಮತ್ತು ಗಜಗೌರಿವ್ರತಕ್ಕೆ ಯೋಗ್ಯವಾಗಿ ಶುಭ್ರವರ್ಣವಾಗಿ ಚತುರ್ದಂತಗಳಿಂದೊಪ್ಪುವ ಮನೋನುಸಾರಿಯಾದ ಗಜವು ನಿಮ್ಮಿಂದ ಹೇಳಲ್ಪಡಲಿಲ್ಲ. ಸೌಗಂಧಿಕಾದೇವಿಯು ಅಪೇಕ್ಷಿಸುವುದು ಆ ಗಜವೆ ಹೊರತು ನಿಮ್ಮಿಂದ ಹೇಳಲ್ಪಟ್ಟ ಗಜಗಳಲ್ಲಿ ಒಂದೂ ಅಲ್ಲ. ನಾನು ಸೌಗಂಧಿಕಾದೇವಿಯು ಪೇಳಿದ ಗಜವನ್ನೇ ತಂದು ಕೊಡುವೆನೆಂದು ಪಣವಂ ಒಪ್ಪಿಕೊಂಡು ಬಂದಿರುವೆನು. ಆ ಗಜವು ಯಾವುದು ಎಲ್ಲಿರುವುದೆಂದು ಕೇಳಿದ ಸುಗಂಧಮಹಾರಾಜನಂ ಕುರಿತು ವಿದ್ಯಾಸಾಗರನು ಎಲೈ ರಾಜೇಂದ್ರನೆ, ಈ ಲೋಕದಲ್ಲಿ ಚತುರ್ದಂತಗಳುಳ್ಳ ಗಜವು ಯಾವ ರಾಯರಲ್ಲಾದರೂ ಇರುವುದು ಮತ್ತು ಶುಭ್ರವರ್ಣವಾಗಿ ಎರಡು ಕೊಂಬುಗಳುಳ್ಳ ಆನೆಯು ಲಭಿಸೀತು ಸುಲಕ್ಷಣ ಬಿಂದುಗಳುಳ್ಳ ಗಜವು ನಿನ್ನಲ್ಲಿಯೇ ಇರುವುದಲ್ಲದೆ ಚತುರ್ದಂತಗಳುಳ್ಳ ಅತಿ ಶುಭ್ರವಾದ ಸುಲಕ್ಷಣ ಬಿಂದುಗಳಿಂದ್ಯುಕ್ತವಾದ ಗಜವು ದೇವಲೋಕದಲ್ಲಿಯೆ ಹೊರ್ತು ಭೂಮಿಯಲ್ಲಿ ಪುಟ್ಟಲರಿಯದು. ಇಂಥಾ ಗಜವಂ ಶಾಸ್ತ್ರದಲ್ಲಿ ತಿಳಿದಿರುವುದುಂಟು ಎಂದು ಪೇಳಲೂ ಆ ಮಾತಂ ಕೇಳಿ ಸುಗಂಧಮಹಾರಾಜನು ಹಾಗಾದರೆ ಸೌಗಂಧಿಕಾ ದೇವಿಯು ಅಪೇಕ್ಷಿಸಿದ ಗಜವು ದುರ್ಲಭವಾಗಿರುವುದೆಂದು ನುಡಿದು ಉಪಾಧ್ಯಾಯಂಗೆ

ವೀಳ್ಯವಂ ಕೊಟ್ಟು ಕಳುಹಿಸಿ"[೯] ಎಂದು ಗಜಗಳ ಲಕ್ಷಣಗಳನ್ನು ಪಟ್ಟಕ್ಕೆ ಯೋಗ್ಯವಾದ ಗಜಗಳ ಲಕ್ಷಣಗಳನ್ನು ತಿಳಿಸಿದ ಬಗೆಯನ್ನು ಹಾಗೂ ಅಂದಿನ ಕಾಲದ ರಾಜ ಮಹಾರಾಜರು ಅರಮನೆಯ ಶುಭಕಾರ್ಯಗಳಲ್ಲಿ ಗಜಗಳ ತೊಡಗಿಸಿಕೊಳ್ಳುವಿಕೆಯ ಮಹತ್ವವನ್ನು ಸೌಂಗಧಿಕಾ ಪರಿಣಯ ಕೃತಿಯ ಮೂಲಕ ಕಾಣಬಹುದು.

**ಶುಭ-ಅಶುಭ ಗಜಗಳು**

ಆನೆಯು ಭೂಮಿಯ ಮೇಲಿರುವ ಪ್ರಾಣಿಗಳಲ್ಲಿಯೇ ಬೃಹತ್ ದೇಹವನ್ನು ಹೊಂದಿದ ಪ್ರಾಣಿ. ಇದರ ಸೊಂಡಿಲು, ದೈಹಿಕವಾದ ಗಾತ್ರ, ನೆನಪಿನ ಶಕ್ತಿ ಇವೆಲ್ಲವುಗಳಿಂದ ಮಾನವನಿಗೆ ತುಂಬಾ ಆಕರ್ಷಕ ಪ್ರಾಣಿಯಾಗಿದೆ. ತನ್ನ ವಿಶಿಷ್ಟವಾದ ಗುಣಗಳಿಂದ ಮನುಷ್ಯನ ಸ್ವಭಾವಕ್ಕೆ ಹತ್ತಿರವಾದ ಪ್ರಾಣಿಯಾಗಿದೆ. ಇಂತಹ ಪ್ರಾಣಿಯು ರಾಜರ ಒಳಿತಿಗೆ ಶ್ರಮಜೀವಿಯಾಗಿ ಬಳಕೆಯಾಗುತ್ತಿದ್ದು ರಾಜರು ಅರಮನೆಗಳ ಪೂಜಾ ಕ್ರಾರ್ಯಕ್ರಮಗಳಲ್ಲಿ ಪಟ್ಟಾಭಿಷೇಕದ ಸಂದರ್ಭಗಳಲ್ಲಿ ವಿಜಯೋತ್ಸವದ ಆಚರಣೆಗಳಲ್ಲಿ, ಯುದ್ಧ ಸಂದರ್ಭಗಳಲ್ಲಿ ಗಜಪಡೆಯು ಮುಂಚೂಣಿಯಲ್ಲಿದ್ದು ರಾಜರ ಶ್ರೇಯಸ್ಸಿಗೆ ಪ್ರಮುಖ ಪಾತ್ರ ವಹಿಸುತ್ತಿದ್ದವು. ಇಂತಹ ಆನೆಯನ್ನು ಬಳಕೆಗೆ ಒಳಪಡಿಸುವ ಮೊದಲು ರಾಜರು ಅವುಗಳ ಶುಭ ಅಶುಭಗಳನ್ನು ಅರಿತು ತರಬೇತಿಗೆ ಒಳಪಡಿಸುತ್ತಿದ್ದರು.

ಕವಿ ಸೋಮೇಶ್ವರನು ತನ್ನ ಮಾನಸೋಲ್ಲಾಸ ಕೃತಿಯಲ್ಲಿ ಅಶುಭ ಗಜಗಳ ಕುರಿತು ಈ ರೀತಿಯಾಗಿ ವಿವರಿಸುತ್ತಾನೆ. ವಿರೂಪವಾದ ವಿಕೃತವಾದ ನ್ಯೂನಾಧಿಕ ರೂಪವುಳ್ಳ ಎಲ್ಲ ಆನೆಗಳ ಲಕ್ಷಣವನ್ನು ಅಶುಭವೆಂದು ತಿಳಿಸುತ್ತಾನೆ. ಅದೇ ರೀತಿಯಾಗಿ ಶಾಲಿಹೋತ್ರ ಮುನಿಯು ಗಜಾಲೋಲನಂಪ್ರಿಯ ಭಜಿಸಿ ಕೇಳಲು ಘೋಟಕದ ದುರ್ಗುಣ ಎಂದು ತಿಳಿಸುತ್ತಾನೆ. ಒಳ್ಳೆಯ ಲಕ್ಷಣಗಳನ್ನು ಅರಿಯಲು ಸುಳಿಪರ್ಣ, ಅಂಜನಗಳ ಮೂಲಕ ಮೇಲುಕೀಳು ಎಂಬುದನ್ನು ಗುರುತಿಸಿ ಅವುಗಳ ರೇಖೆಗಳನ್ನು, ರೋಗ, ಚೇಷ್ಟೆ ಚಿಕಿತ್ಸಾ ಕ್ರಮಗಳ ಮೂಲಕ ಅರಿತುಕೊಳ್ಳುವುದು ಎಂದು ತಿಳಿಸುತ್ತಾನೆ.

ಸಾಮಾನ್ಯವಾಗಿ ಏಷಿಯಾದ ಆನೆಯ ಪ್ರತಿಯೊಂದು ಮುಂಗಾಲಿನಲ್ಲಿ ಐದು ಕಾಲುಗುರುಗಳು ಇರುತ್ತವೆ. ಹಿಂಗಾಲುಗಳಲ್ಲಿ ಪ್ರತಿ ಕಾಲಿಗೆ ನಾಲ್ಕು ಕಾಲುಗುರುಗಳಿರುತ್ತವೆ. ಅಂದರೆ ಆನೆಯ ನಾಲ್ಕು ಕಾಲುಗಳಲ್ಲಿ ಒಟ್ಟು ಹದಿನೆಂಟು ಉಗುರುಗಳನ್ನು ಹೊಂದಿರುತ್ತವೆ. ಅಪರೂಪಕ್ಕೊಮ್ಮೆ ಕೆಲವೊಂದು ಆನೆಗಳಲ್ಲಿ ಹದಿನೆಂಟಕ್ಕಿಂತ ಕಡಿಮೆ ಅಥವಾ ಹೆಚ್ಚು ಕಾಲುಗುರುಗಳಿರುವುದೂ ಉಂಟು. ಅಂತಹ ಆನೆಗಳನ್ನು ಅವಲಕ್ಷಣದ ಆನೆಗಳೆಂದೇ

ಪರಿಗಣಿಸಲಾಗುತ್ತದೆ. ಇಂತಹ ಅವಲಕ್ಷಣದ ಆನೆಗಳು ಮಾರಾಟಗೊಳ್ಳುವುದು ಕಷ್ಟಸಾಧ್ಯದ ವಿಚಾರ. ಕಾಡಾನೆಯನ್ನು ಹಿಡಿದು ತಂದಾಗ ಪ್ರಥಮವಾಗಿ ನೋಡುವುದೇ ಆನೆಯ ಕಾಲು ಬೆರಳುಗಳ ಸಂಖ್ಯೆಯನ್ನು. ನಂತರ ಅವುಗಳು ಶುಭ ಅಶುಭವೆಂದು ಗುರುತಿಸಿ ತರಬೇತಿಗೆ ಒಳಪಡಿಸುತ್ತಿದ್ದರು.

ಆನೆಗಳ ಕಣ್ಣುಗಳು ಮಾಸಲು ಅಥವಾ ಕೊಂಚ ಕೆಂಪು ಮಿಶ್ರಿತ ಕಣ್ಣುಗಳಿರುವ ಆನೆಗಳನ್ನು ಪ್ರಸ್ತುತ ಅಶುಭ ಸಂಕೇತದ ಆನೆಯೆಂದು ಪರಿಗಣಿಸಲಾಗುತ್ತದೆ. ಇಂತಹ ಆನೆಗಳು ಅಶುಭವೂ, ಗಂಡಾಂತರಕಾರಿಯಾದವುಗಳು ಎಂದು ಪರಿಗಣಿಸಲಾಗುತ್ತದೆ. ದುರ್ಧರ ಸನ್ನಿವೇಶಗಳಲ್ಲಿ ಇಂತಹ ಆನೆಗಳು ಭಯಗೊಂಡು ದೂರ ಓಡುತ್ತವೆ ಎಂದು ಹೇಳಲಾಗುತ್ತದೆ. 'ಇಂತಹ ಲಕ್ಷಣವನ್ನು ಹೊಂದಿದ್ದ ತೀರಾ ಎಚ್ಚರದಪ್ಪಿ ನಡೆದ ಆನೆಗಳನ್ನು ಗುಂಡಿಕ್ಕಿ ಕೊಂದ ದಾಖಲೆಗಳಿವೆ'[೫] ಆದರೆ ಅಕ್ಬರನ ಕಾಲದಲ್ಲಿ ಈ ಲಕ್ಷಣವನ್ನು ಹೊಂದಿದ ಆನೆಗಳನ್ನು ಶುಭ ಲಕ್ಷಣದ ಆನೆಗಳೆಂದು ಪರಿಗಣಿಸಲಾಗುತ್ತಿತ್ತಂತೆ.

ಆನೆಯ ನಾಲಿಗೆಯು ಕಪ್ಪಾಗಿದ್ದರೆ ಅಥವಾ ಕಪ್ಪು ಮಚ್ಚೆಗಳಿಂದ ಕೂಡಿದ್ದರೆ ಅಂತಹ ಆನೆಗಳನ್ನು ಅಶುಭವಾದ ಆನೆಗಳೆಂದು ತಿಳಿಯಲಾಗುತ್ತದೆ.

ಕೆಲವು ಆನೆಗಳು ಗಂಟಲ ಕೆಳಭಾಗದಲ್ಲಿ ಮೇಕೆಗಳು ಹೊಂದಿರುವಂತೆ ಎರಡು ಮೊಲೆಯ ತೊಟ್ಟುಗಳನ್ನು ಹೊಂದಿರುವುದುಂಟು. ಇದನ್ನೂ ಸಹ ಅವಲಕ್ಷಣ ಅಥವಾ ಅಶುಭವೆಂದು ತಿಳಿಯಲಾಗುತ್ತದೆ. ಅಶುಭವಾದ ಆನೆಗಳು ರಾಜರ ಆಕರ್ಷಣೆಗೆ ಒಳಪಡುವುದಿಲ್ಲ. ನೀಳವಾದ ಕತ್ತನ್ನು ಹೊಂದಿರುವ ಆನೆಯನ್ನು ಶುಭಕರವೆಂದೂ ಕುಗ್ಗಿದ ಸಣ್ಣ ಕತ್ತಿನ ಆನೆಯನ್ನು ಅಶುಭಕಾರಕವೆಂದೂ ಪರಿಗಣಿಸಲಾಗುತ್ತದೆ.

ಕೆಳಬಾಗಿದ ಕೋರೆಯನ್ನು ಹೊಂದಿರುವ ಆನೆಯು ಅಶುಭವಾದುದಲ್ಲ. ಬಿಲ್ಲಿನಂತೆ ಮೇಲೇರಿ ನಿಂತ ಕೋರೆಯನ್ನು ಹೊಂದಿದ ಆನೆಯು ಶುಭ ಲಕ್ಷಣದ ಆನೆ ಎಂದು ತಿಳಿಯಲಾಗುತ್ತದೆ.

ಜಿಂಕೆಯಂತಹ ಕಣ್ಣುಗಳು, ಎದ್ದುಕಾಣುವ ಹಣೆ ಹೊಂದಿದ ಆನೆಯು ಶುಭ ಲಕ್ಷಣದ ಆನೆಯಾಗಿರುತ್ತದೆ. ಸರಿಯಾಗಿ ಬೆಳೆದ ಹಣೆ ಮತ್ತು ತಲೆಯ ಮೇಲೆ ಕೂದಲುಗಳಿರುವುದು ಶುಭಕರವೆಂದು ತಿಳಿಯಲಾಗುತ್ತದೆ. ಮತ್ತು ಯಾವ ಗಜವು ಸಾಮಾನ್ಯ ಗಾತ್ರಕ್ಕಿಂತ ಚಿಕ್ಕ ಗಾತ್ರದ ಕಿವಿಯನ್ನು ಹೊಂದಿದ್ದರೆ ಅಂತಹವುಗಳನ್ನು ಅಶುಭ ಲಕ್ಷಣದ ಆನೆ ಎಂದು ತಿಳಿಯಲಾಗುತ್ತದೆ. ಅದೇ ರೀತಿ ಆನೆಯ ಚರ್ಮವು ದಪ್ಪ ನೆರಿಗೆಗಳನ್ನುಳ್ಳದ್ದೂ ಮತ್ತು

ಇಳಿಬಿದ್ದುದೂ ಆಗಿರಬೇಕು. ಬೋಳು ತಲೆಯ ಆನೆಯು ಉತ್ತಮ ಗುಣದ ಆನೆ ಎಂದು ಪರಿಗಣಿಸಲಾಗುತ್ತದೆ. ಹಾಗೆಯೇ ಸೇಬಿನ ಹಣ್ಣಿನ ಮೇಲ್ಭಾಗದಂತೆ ಚರ್ಮವಿದ್ದು ಆ ಆನೆಯ ದೇಹದ ಮೇಲೆ ಕಪ್ಪು ಹಾಗೂ ಬಿಳಿಯ ಚುಕ್ಕೆಗಳಿದ್ದರೆ ಶುಭ ಲಕ್ಷಣದ ಆನೆ ಎಂದು ತಿಳಿಯಲ್ಪಡುವುದು.

ಬಾಲವು ಉದ್ದ ಮತ್ತು ಸಪೂರವಿದ್ದು ಇಪ್ಪತ್ತೇಳು ಸಂದುಗಳನ್ನು ಹೊಂದಿರಬೇಕು. ಬಾಲದ ಮೂಲದಲ್ಲಿ ದಪ್ಪಗಿದ್ದು ತುದಿಗೆ ಹೋದಂತೆ ನೀಳವಾಗಿದ್ದರೆ ಉತ್ತಮ. ತುದಿಯಲ್ಲಿ ಉದ್ದವಾದ ಕೂದಲ ಗೊಂಚಲು ಇರಬೇಕು. ಅದು ಹಿಂದಿನ ಕಾಲುಗಳ ಮೊಣಕಾಲು ಸಂದಿಯನ್ನು ಮುಟ್ಟುವಷ್ಟು ಇಳಿಬಿದ್ದಿರಬೇಕು. ಆನೆಯು ನಿದ್ರೆ ಮಾಡುವ ಸಮಯದ ಹೊರತಾಗಿ ಇನ್ನುಳಿದ ಎಲ್ಲಾ ವೇಳೆಯಲ್ಲಿಯೂ ಅಲುಗಾಡಿಸುತ್ತಿರಬೇಕು. ಇಂತಹ ಆನೆ ಶುಭ ಲಕ್ಷಣದ ಆನೆ ಎಂದು ತಿಳಿಯಲಾಗುತ್ತದೆ.

ಮೋಟು ಬಾಲದ ಆನೆಗೆ ಹೆಚ್ಚು ಬೆಲೆ ಇರುವುದಿಲ್ಲ. ನಡೆಯುವಾಗ ನೆಲವನ್ನು ಗುಡಿಸುವಂತೆ ಉದ್ದದ ಬಾಲವನ್ನು ಹೊಂದಿದ ಆನೆಯು ಅಶುಭಕಾರಕ ಆನೆ ಎಂದು ತಿಳಿಯಲಾಗುತ್ತದೆ.

"ರಾಜನು ಆನೆಗಳನ್ನು ಹಿಡಿದು ಕಟ್ಟಿಹಾಕಿ ಅವುಗಳ ಉತ್ತಮ ಲಕ್ಷಣಗಳನ್ನು ತಳಿಯನ್ನು ಶರೀರಚನಾವಿನ್ಯಾಸವನ್ನು ಸತ್ತ್ವವನ್ನು ಕುಲವನ್ನು ಕುರಿತು ಚೆನ್ನಾಗಿ ವಿಚಾರಿಸ ಬೇಕು. ಏಳು ಮೊಳ ಎತ್ತರವಿರುವ ಒಂಬತ್ತು ಮೊಳ ಉದ್ದವಿರುವ ಹತ್ತು ಮೊಳ ಸುತ್ತಳತೆ ಇರುವ ಆನೆಯು ಶುಭವೆಂದು ಪರಿಗಣಿಸಲ್ಪಡುತ್ತದೆ.

ಈ ಪ್ರಮಾಣಕ್ಕೆ ಒಂದು ಅರತ್ನ ಅಧಿಕವಾದಲ್ಲಿ ಅಂತ ಆನೆಗೆ 'ಅಕಾಲ'ವೆನ್ನುತ್ತಾರೆ. ಎರಡು ಅರತ್ನ ಹೆಚ್ಚದಲ್ಲಿ 'ಅತ್ಯಕಾಲ'ವೆನ್ನುತ್ತಾರೆ. ಈ ಎರಡೂ ಪ್ರಮಾಣದ ಆನೆಗಳು ನಿಂದ್ಯವಾದವುಗಳು.

ಈ ಪ್ರಮಾಣದಲ್ಲಿ ಒಂದು ಅರತ್ನ ಕಡಿಮೆಯಾದರೆ ಅದು 'ಮಧ್ಯಮ' ಗಜವೆಂದು ಪರಿಗಣಿತವಾಗಿದೆ. ಎರಡು ಅರತ್ನ ಕಡಿಮೆಯಾದಲ್ಲಿ ಗಜಕ್ಕೆ 'ಕನಿಷ್ಠ'ವೆಂದು ಹೇಳುತ್ತಾರೆ. ಈ ಕನಿಷ್ಠ ಗಜಕ್ಕಿಂತಲೂ ಚಿಕ್ಕದಾದ ಗಜಕ್ಕೆ ವಾಮನವೆಂದು ಹೇಳುತ್ತಾರೆ. ವಾಮನಕ್ಕಿಂತಲೂ ಹೀನವಾದ ಗಜಕ್ಕೆ ಕುಬ್ಜವೆಂದು ಭಾವಿಸಲಾಗಿದ್ದು, ಈ ಎರಡು ಗಜಗಳು ನಿಷಿದ್ಧವಾಗಿದೆ.

ಸ್ನಿಗ್ಧವಾದ ವೃತ್ತಾಕಾರವುಳ್ಳ ಕೋರೆಗಳು ಉತ್ಪನ್ನವಾದ ಬಲ ಭಾಗ, ತಾಮ್ರವರ್ಣದ ಸೀಳು ಇರದಿದ್ದ ಲಾಳುಗೆ ಶುಭಕರವಾದ ಹದಿನೆಂಟು ನಬಗಳು, ಬಿಳಿಯದಲ್ಲದ ಪ್ರಶಸ್ತಿ,

ಶಿಶ್ನ, ಕೂದಲುಗಳಿಂದ ಕೂಡಿದ ಬಲ, ಅಚ್ಚಪ್ರವೂ ವಿಸ್ತೃತವೂ ಆದ ಕಿವಿಗಳು, ಕೆಂದು ಬಣ್ಣದ ಕಣ್ಣುಗಳು ಗುಡಗಿನಂತಹ ಘೀಳಿಡುವಿಕೆ ಕೆಂಪುವರ್ಣದ ತುರಿಸೊಂಡಿಲು. ದೀರ್ಘವಾದ ವರ್ತುಲಾಕಾರವಾದ ಹೆಬ್ಬೆರಳುಗಳು ಕ್ಯಾಶ್ಯಾಮವರ್ಣದ ದೇಹಕಾಂತಿ ಇವು ಜಯಪ್ರದವಾದ ಆನೆಗಳ ಲಕ್ಷಣಗಳು, ಆದ್ದರಿಂದ ಈ ಲಕ್ಷಣಗಳಿಂದೊಡಗೂಡಿದ ಆನೆಗಳನ್ನು ರಾಜನು ಸ್ವೀಕರಿಸಬೇಕು. **ಇದು ಗಜಶುಭ ಲಕ್ಷಣ.**"[೯೬]

"ಈ ಲಕ್ಷಣಗಳನ್ನು ಬಿಟ್ಟು ಇನ್ನಿತರ ವಿಕೃತವಾದ, ವಿರೂಪವಾದ, ನ್ಯೂನಾಧಿಕರೂಪವುಳ್ಳ ಎಲ್ಲ ಆನೆಗಳ ಲಕ್ಷಣವನ್ನು ಅಶುಭವೆಂದು ತಿಳಿಯುತ್ತಾರೆ.

ಹೀನ ಲಕ್ಷಣಗಳಿರುವ ಆನೆಗಳನ್ನು ರಾಜನು ತ್ಯಜಿಸಬೇಕು. ದುರ್ಭಿಕ್ಷೆ, ಶೋಕ ಭಯಗಳನ್ನುಂಟುಮಾಡುವ ನೋಡಲು ಅಸಹ್ಯವಾದ ಆನೆಗಳನ್ನು ರಾಜನು ಸ್ವೀಕರಿಸಬಾರದು.

ಶ್ರೇಷ್ಠವಾದ ಗತಿ, ವರ್ತನೆ ಹಾಗೂ ಸ್ವರಗಳನ್ನು ಅನುಕರಿಸುವ ಆನೆಯು ಆನೆಗಳ ವರ್ತನೆಯನ್ನು ಬಲ್ಲವರಿದಂ 'ಅಶುಭ'ವೆಂದು ಗುರುತಿಸಲ್ಪಡುತ್ತದೆ.

ಶುಭವಾದ ಆನೆಗಳ ವರ್ತನೆಯು ಶುಭಾನೂಕವೆನ್ನಿಸಿದರೆ ವಿದ್ಯಂವಾದ ಆನೆಗಳ ವರ್ತನೆಯು ನಿಂದಿತಾದೊಡವೆನ್ನಿಸುತ್ತದೆ."[೯೭] ಶುಭಕರವಲ್ಲದ ಆನೆಗಳು ರಾಜರಿಗೆ ಕೇಡನ್ನುಂಟು ಮಾಡುತ್ತವೆ. ಯುದ್ಧಗಳಲ್ಲಿ ಅಪಜಯಕ್ಕೆ ಕಾರಣವಾಗುವುದರಿಂದ ಅಂತಹ ಆನೆಗಳನ್ನು ರಾಜರು ಸ್ವೀಕರಿಸದಿರಲು ಕಾರಣವೆನ್ನಬಹುದು.

**ಸುಳಿಗಳ ಶುಭಾಶುಭ**

"ಗಜಗಳಿಗೆ ಚರ್ಮದಲ್ಲಿ ಮುರಿದ ದಂತಗಳ ಕೊನೆಯಲ್ಲಿ ಮಸ್ತಕದ ಕೂದಲುಗಳಲ್ಲಿ ಬಿಂದುಗಳಲ್ಲಿ ರೋಮಗಳಲ್ಲಿ ಬಾಲದಲ್ಲಿ ಸಹಾ ಸುಳಿಗಳು ಕಾಣುವವು. ಇದರಲ್ಲಿ ಮಸ್ತಕದ ಕೂದಲುಗಳಲ್ಲಿಯೂ ದಂತಗಳ ಕೊನೆಯಲ್ಲಿಯು ರೋಮಗಳಲ್ಲಿಯೂ ಇರುವ ಸುಳಿಗಳು ಶುಭಫಲವಂ ನೀಡುವವು.

ಚರ್ಮದಲ್ಲಿಯೂ ಬಿಂದುಗಳಲ್ಲಿಯೂ ಬಾಲದಲ್ಲಿಯೂ ಇರುವ ಸುಳಿಗಳು ಅಶುಭಫಲವಂ ಕೊಡುವವು. ಇವುಗಳಲ್ಲಿ ಪ್ರದಕ್ಷಿಣಾಕಾರವಾದ ಸುಳಿಯು ಶುಭವಂ ಕೊಡುವುದು ಅಪ್ರದಕ್ಷಿಣಾಕಾರವಾದ ಸುಳಿಯು ಅಶುಭವಂ ಕೊಡುವುದು.

ಪೀತವರ್ಣವಾದ ಕೂದಲುಗಳು ಮೃದುವಾದ ಸೊಂಡಿಲು ಉಳ್ಳ ಆನೆಯ ಎಡಭಾಗದಲ್ಲಿ ಪ್ರದಕ್ಷಿಣಾಕಾರವಾದ ಸುಳಿಯು ಬಲದ ಭಾಗದಲ್ಲಿ ಅಪ್ರದಕ್ಷಿಣಾಕಾರವಾದ ಸುಳಿಯು ಇದ್ದರೂ ಆ ಸುಳಿಗಳು ಶುಭವಾದಾಗ್ಯೂ ಶುಭವಂ ಕೊಡಲಾರವು.

ಆ ಸ್ಥಾನದಲ್ಲಿ ಪುಟ್ಟಿದ ಸುಳಿಯು ಶುಭಕರವಾದಾಗ್ಯೂ ಶುಭವಂ ಕೊಡಲಾರವು ವಿಹಿತಸ್ಥಾನದಲ್ಲಿರುವ ಸುಳಿಯು ಅಶುಭವಾದಾಗ್ಯೂ ಶುಭಫಲವಂ ಕೊಡುವುದು.

ಹಣೆಯಲ್ಲಿ ಸ್ತನಗಳ ಮಧ್ಯದಲ್ಲಿ ಕಣ್ಣುಗಳ ಮೇಲೆ ಕುಂಭಸ್ಥಳಗಳ ಮಧ್ಯದಲ್ಲಿ ಕಿವಿಗಳ ಕೆಳಗೆ ಎದೆಯಲ್ಲಿ ಈ ಸ್ಥಾನಗಳಲ್ಲಿ ಸುಳಿಯುಳ್ಳ ಗಜವು ಪಂಚಮಂಗಳವೆನಿಸಿಕೊಂಬುದು ಶಿರಸ್ಸಿನಲ್ಲಿರುವ ಸುಳಿಯು ಪಟ್ಟಾಭಿಷೇಕವಂ ಸ್ತನಗಳ ಮಧ್ಯದಲ್ಲಿರುವ ಸುಳಿಯು ಜಯವಂ ಕಿವಿಗಳ ಮಧ್ಯದಲ್ಲಿರುವ ಸುಳಿಯು ಶುಭವಂ ಕುಂಭಸ್ಥಳದಲ್ಲಿರುವ ಸುಳಿಯು ಸಂತೋಷವಂ ಸಹಾ ಕ್ರಮವಾಗಿ ಕೊಡುವುದು.

ಗಲ್ಲದ ಕೆಳಗೆ ತುಟಿಗಳಲ್ಲಿ ಕೊರಳಿನಲ್ಲಿ ಕಿವಿಗಳಲ್ಲಿ ನೇತ್ರ ಸಮೀಪದಲ್ಲಿ ನಾಭಿಯಲ್ಲಿ ಕಂಕುಳಲ್ಲಿ ಎರಡು ಪಾರ್ಶ್ವದಲ್ಲಿಯೂ ಇರುವ ಸುಳಿಗಳು ಶ್ರೇಷ್ಠಗಳಾಗಲಾರವು.

ಬಲದ ಕೊಂಬು ಬಿರಿದು ಇದ್ದರೆ ಸ್ವಾಮಿಯ ಸೇನೆಗೆ ಭಯ ಉಂಟಾಗುವುದು. ಎಡದ ಕೊಂಬು ಒಡದಿದ್ದರೆ ಪುತ್ರನು ಪುರೋಹಿತನು ಇವರುಗಳಿಂದ ಸಹಿತವಾಗಿ ಸ್ವಾಮಿಯಂ ಕೊಲ್ಲುವದು.

ಎರಡು ಕೊಂಬುಗಳು ಬಿರಿದು ಇದ್ದರೆ ಸ್ವಾಮಿಗೆ ಕುಲನಾಶವಾಗುವುದು."[೮]

**ಆನೆಗಳಿಗೆ ತರಬೇತಿ**

ಆನೆಗಳಿಗೆ ತರಬೇತಿ ನೀಡುವ ಮೊದಲು ಅವುಗಳ ವಯಸ್ಸಿನ ಆಧಾರದ ಮೇಲೆ ಯಾವ ಕಾರ್ಯಕ್ಕೆ ಯೋಗ್ಯವಾದವುಗಳೆಂದು ಗುರುತಿಸಲು ಅವುಗಳನ್ನು ಉತ್ತಮ, ಮಧ್ಯಮ, ಅಧಮವೆಂದು ಪ್ರತ್ಯೇಕಿಸಿ ಗಜಶಾಸ್ತ್ರ ರಚನಕಾರರು ಈ ರೀತಿ ವಿವರಿಸಿದ್ದಾರೆ. "ಹತ್ತು ವರುಷ ಮೊದಲುಗೊಂಡು ಹದಿನಾಲ್ಕು ವರುಷ ಪರ್ಯಂತವು ಆನೆಗಳಿಗೆ **ಉತ್ತಮ** ವಯಸ್ಸೆನಿಸುವುದು. ಈ ವಯಸ್ಸಿನಲ್ಲಿ ಯುದ್ಧ ಮೊದಲಾದ ಕೌಶಲ್ಯವಂ ಕಲಿಸಬೇಕು. ಹದಿನಾಲ್ಕು ವರುಷ ಮೊದಲಾಗಿ ಮೂವತ್ತು ವರುಷ ಮೊದಲುಗೊಂಡು **ಮಧ್ಯಮ** ವಯಸ್ಸೆಂದು ತಿಳಿಯತಕ್ಕದ್ದು. ಮೂವತ್ತು ವರುಷ ಮೊದಲುಗೊಂಡು ಎಪ್ಪತ್ತು ವರುಷ ಪರ್ಯಂತವು **ಅಧಮ** ವಯಸ್ಸೆಂದು ತಿಳಿಯತಕ್ಕದ್ದು. ಎಪ್ಪತ್ತು ವರುಷದ ಮೇಲೆ ಆನೆಗಳು ಯಾವ ಕೆಲಸಕ್ಕು ಯೋಗ್ಯವಾಗಲಾರವು. ಉತ್ತಮ ವಯಸ್ಸು ಮಧ್ಯಮ ವಯಸ್ಸು ಅಧಮ ವಯಸ್ಸುಗಳಲ್ಲಿ ಆನೆಗಳಂ ಕಾರ್ಯಗಳಲ್ಲಿರಿಸಬೇಕು."[೯]

**ಆನೆಗಳನ್ನು ಪಳಗಿಸುವುದು**

ಆನೆಗಳನ್ನು ಸೆರೆ ಹಿಡಿಯುವ ಕ್ರಮವನ್ನು ಹಾಗೂ ಅವುಗಳನ್ನು ಪಳಗಿಸುವುದನ್ನು ಮಾವುತರು ವಿಶೇಷವಾದ ಕ್ರಮಗಳ ಮೂಲಕ ಹಾಗೂ ಪಳಗಿದ ಆನೆ ಬಳಸಿಕೊಂಡು

ಕಾಡಾನೆಗಳನ್ನು ಸೆರೆ ಹಿಡಿಯುತ್ತಿದ್ದರು. ಪ್ರಸ್ತುತ ಮೈಸೂರು ದಸರಾ ಜಂಬೂಸವಾರಿಯ ಅಂಬಾರಿಯನ್ನು ಹೊತ್ತ ಮೆರವಣಿಗೆಯಲ್ಲಿ ಆಕರ್ಷಣೀಯವಾಗಿ ಮುಂಚೂಣಿಯಲ್ಲಿರುವ 'ಅಭಿಮನ್ಯು'ವೆಂಬ ಆನೆಯು ಇದುವರೆಗೆ ಸುಮಾರು ೧೦೦ ಕಾಡಾನೆಗಳ ಕಾರ್ಯಾಚರಣೆಯಲ್ಲಿ ಸೆರೆಹಿಡಿಯಲು ಸಹಾಯ ಮಾಡಿದೆ. ಪುಂಡಾನೆಗಳ ಉಪಟಳದಿಂದ ಸಮಸ್ಯೆ ಎದುರಾದಗಲೆಲ್ಲ ಈ ಅಭಿಮನ್ಯುವೆಂಬ ಗಂಡಾನೆ ಆಪದ್ಭಾಂವಾಗಿ ಕೆಲಸ ಮಾಡುತ್ತದೆ. ಕರ್ನಾಟಕ, ಕೇರಳ, ಮಧ್ಯಪ್ರದೇಶ, ಮಹಾರಾಷ್ಟ್ರ ಕಾಡುಗಳಲ್ಲಿ ಆನೆಗಳನ್ನು ಬೆನ್ನಟ್ಟಿ ಸೆರೆಹಿಡಿಯುವಲ್ಲಿ ಮಾವುತರಿಗೆ ನೆರವು ನೀಡಿದೆ. ಹುಲಿಗಳ ಕಾರ್ಯಾಚರಣೆಯಲ್ಲಿಯೂ ಸಹ ಭಾಗವಹಿಸಿದೆ. ಇತ್ತೀಚೆಗೆ ಸಾರ್ವಜನಿಕರಲ್ಲಿ ಆತಂಕ ಉಂಟುಮಾಡಿದ 'ರೌಡಿರಂಗಣ್ಣ'ವೆಂಬ ಆನೆ ಹಾಗೂ 'ಐರಾವತ' ಎಂಬ ಆನೆಗಳನ್ನು ಸೆರೆಹಿಡಿದಿದ್ದು ಇದೇ ಅಭಿಮನ್ಯು ಆನೆಯಾಗಿದೆ. ಈ ಆನೆಯನ್ನು ಅರಣ್ಯ ಇಲಾಖೆ ಪಾಲಿನ ಆಸ್ತಿ ಹಾಗೂ ಈ ಆನೆ ಲಭ್ಯವಾಗದಿದ್ದಾಗ ಕಾರ್ಯಾಚರಣೆಯನ್ನೇ ಮುಂದೂಡಿದ್ದುಂಟು. ಆಹಾರ ಹುಡುಕಿಕೊಂಡು ಗ್ರಾಮಗಳಿಗೆ ನುಗ್ಗುವ ಹಾಗೂ ಮದವೇರಿದ ಆನೆಗಳನ್ನು ಪಳಗಿಸುವ ಕಾರ್ಯಾಚರಣೆಯಲ್ಲಿ ಮೂವತ್ತು ವರ್ಷಗಳಿಂದ ಪಾಲ್ಗೊಳ್ಳುತ್ತಿದ್ದೆ. ಪುಂಡಾನೆಗಳನ್ನು ಖೆಡ್ಡಕ್ಕೆ ಬೀಳಿಸಲು, ಅರಿವಳಿಕೆ ಚುಚ್ಚುಮದ್ದು ನೀಡಲು, ಸೆರೆ ಹಿಡಿದ ಆನೆಗಳನ್ನು ಶಿಬಿರಗಳಿಗೆ ಸಾಗಿಸಲು ಈ ಸಲಗವೇ ಅಪತ್ಭಾಂಧವ. ಅರಣ್ಯ ಇಲಾಖೆ ಸಿಬ್ಬಂದಿ ಈ ಆನೆಯನ್ನು ಎ.ಕೆ. ೪೭ ಎಂದು ಕರೆಯುತ್ತಾರೆ. ಕಾರ್ಯಾಚರಣೆ ವೇಳೆ ಆನೆಗಳ ಮಧ್ಯ ದೊಡ್ಡ ಕಾಳಗವೇ ನಡೆಯುತ್ತದೆ. ಕಾಡಾನೆಗಳ ಅಬ್ಬರಕ್ಕೆ ಸಾಕಾನೆಗಳು ಒಮ್ಮೆಲೇ ಹಿಂತಿರುಗಿ ಓಡುತ್ತವೆ. ಆದರೆ ಅಭಿಮನ್ಯು ಒಂದು ಹೆಜ್ಜೆಯೂ ಹಿಂದಿಡುವುದಿಲ್ಲ. ಕೋರೆಯಲ್ಲಿ ತಿವಿದು ಕೆಡವಿಬಿಡುತ್ತದೆ. ಮೇಲೆ ಕುಳಿತ ಮಾವುತರಿಗೂ ರಕ್ಷಣೆ ನೀಡುತ್ತದೆ. ಹೀಗೆ ಕಾಡಾನೆ, ಹುಲಿಗಳ ಜಾಡು ಹಿಡಿದು ಬೆನ್ನಟ್ಟುತ್ತದೆ. ಅಭಿಮನ್ಯು ನೇತೃತ್ವದ ದಸರಾ ಗಜಪಡೆ ೨೦೧೫ರಲ್ಲಿ ಮಹಾರಾಷ್ಟ್ರದಲ್ಲಿ ಅಪರೇಷನ್ ಎಲಿಫೆಂಟ್ಸ್ ಕಾರ್ಯಾಚರಣೆಯನ್ನು ಯಶಸ್ವಿಯಾಗಿ ಪೂರೈಸಿತು. ಮೂರು ಸಲಗಗಳನ್ನು ಹಿಡಿದು ಆನೆ ಪಳಗಿಸುವ ದೊಡ್ಡಿಗೆ ದೂಡಿತು. ಅಷ್ಟೇ ಅಲ್ಲದೇ ಸಂಕಷ್ಟಕ್ಕೆ ಸಿಲುಕಿದ ಆನೆಗಳನ್ನು ರಕ್ಷಿಸುವ ಕೆಲಸಕ್ಕೂ ಬಳಸಿಕೊಳ್ಳಲಾಗಿದೆ. ಗುಂಡಿಗೆ ಬಿದ್ದ, ಕೆಸರಿನಲ್ಲಿ ಸಿಲುಕಿದ ನೂರಾರು ಆನೆಗಳನ್ನು ರಕ್ಷಿಸಿದೆ. ಐವತ್ತೊಂದು ವರ್ಷದ ಈ ಅಭಿಮನ್ಯು ಆನೆಯನ್ನು ೧೯೭೭ರಲ್ಲಿ ನಾಗರಹೊಳೆ ರಾಷ್ಟ್ರೀಯ ಉದ್ಯಾನದ ಹೆಬ್ಬಳ್ಳ ಪ್ರದೇಶದಲ್ಲಿ ಸೆರೆ ಹಿಡಿಯಲಾಗಿತ್ತು. ಮಾವುತನು ಆನೆಯ ಭಾವನೆಗಳನ್ನು ಅರ್ಥ ಮಾಡಿ

ಕೊಂಡು ಮಗುವಿನಂತೆ ನೋಡಿಕೊಳ್ಳುತ್ತಾನೆ. ತನ್ನೊಂದಿಗೆ ಆತ್ಮೀಯತೆಯಿಂದ ನಡೆದು ಕೊಳ್ಳುತ್ತದೆ ಎಂದು ವಸಂತ ಎಂಬ ಮಾವುತನು ಈ ಆನೆಯ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ(ಪ್ರಜಾವಾಣಿ, ೧೫-೯-೨೦೧೭, ಪು.೫).

"ಸಪ್ತಾಷ್ಟೌ ವಾ ವಶಾ ವಶ್ಯಾ ಮಹಾ ಕಾಯಾ ಮಹಜವಾಃ ।
ಆರೂಢಾಃ ಪತ್ರಸಂಛನ್ನಾಃ ಪಾಶಹಸ್ತಾಶ್ಚ ಹಸ್ತಿಪಾಃ ॥
ಕರಿಣೀನಾಂ ಕರೇ ಪಾಶಾನ್ ಹಸ್ತಿಬಂಧಾಯ ದಾಪಯೇತ್ ।
ವಾಯೋರಧಃ ಶನೈರ್ಗಚ್ಛೇದ್ ಗಜಾನಾಮಂತಿಕಂ ಬುಧಃ ॥
ಘಟಯಿತ್ವಾ ವಶಾ ನಾಗೈರ್ಬಧ್ನೀ ಯಾತ್ ತತ್ರ ಕುಂಜರಾನ್ ।
ಏಷ ಬಂಧಃ ಸಮಾಖ್ಯಾತೋ ವಶಾ ಬಂಧೋ ಮನೋಹರಃ ॥

(ಮಾನಸೋ. ೨-೩-೧೯೫-೧೯೭) [ಗಜಶಾ. ೬-೩೦, ೩೧: ಇಲ್ಲಿ ಪ್ರಬಧ್ಯ ಕುಂಜರಾನ್ ರಾಜಾ ತೇಷಾಂ ಲಕ್ಷಣಮುನ್ನಯೇತ್ ಎಂಬುದಾಗಿ ೬-೩೧ರ ಉತ್ತರಾರ್ಧದ ಪಾಠ. ಮಾನಸೋಲ್ಲಾಸದಲ್ಲಿ ಒಂದು ಶ್ಲೋಕ ಅಧಿಕವಾಗಿದೆ].

ಗಂಡು ಆನೆಗಳನ್ನು ಹೆಣ್ಣು ಆನೆಗಳ ಸಹಾಯದಿಂದ ಹಿಡಿಯುವ ಒಂದು ಕ್ರಮ; ಏಳೆಂಟು ಭಾರಿ ಗಾತ್ರದ, ಚುರುಕು ನಡೆಯ, ಅಂಕೆಯಲ್ಲಿರುವ ಎಂದರೆ ಪಳಗಿದ ಹೆಣ್ಣಾನೆಗಳನ್ನು ಮಾವಟಿಗರು ಪತ್ರಸಂಛನ್ನರಾಗಿ, ಪಾಶಹಸ್ತರಾಗಿ ಏರುವುದು. ಹಾಗೆ ಏರಿದ ಹೆಣ್ಣಾನೆಗಳ ಸೊಂಡಿಲುಗಳಲ್ಲಿ ಆನೆಗಳನ್ನು ಕಟ್ಟುವ ಸಲುವಾಗಿ ಪಾಶಗಳನ್ನು ಕೊಡುವುದು. ಕಿಗ್ಗಾಳಿಯಲ್ಲಿ ಮೆಲ್ಲಗೆ ಸಾಗಿ ಆನೆಗಳತ್ತ ಬರುವುದು. ಹಾಗೆ ಬಂದು ಆನೆಗಳೊಂದಿಗೆ ಪಳಗಿದ ಹೆಣ್ಣಾನೆಗಳನ್ನು ಸಂಘಟಿಸಿ ಆನೆಗಳನ್ನು ಕಟ್ಟುವುದು. ಇದನ್ನೇ **ವಶಾಬಂಧ**"[೧೦೦] ಎಂದು ಕರೆಯಲಾಗುವುದು.

"ಕ್ರೋಶಪ್ರಾಯವಿತಾನದೀರ್ಘಮಹಿತಾ ವಾರೀನಿಖಾತೈರ್ದೃಢೈ।
ವೃರ್ಕ್ಷಾದ್ಯೈಃ ಪರಿತೋ ವೃತಿಂ ಚ ಪರಿಖಾಂ ಕೃತ್ವಾ ಬಹಿರ್ದುಸ್ತರಾಮ್।
ದ್ವಾರಸ್ಯೋಭಯತಃ ಪ್ರಕಲ್ಪಿತವೃತಿ ದ್ವಂದ್ವಾಂತರಸ್ಥಾಂ ಕ್ರಮಾದ್ ।
ವಿಸ್ತೀರ್ಣಾಂ ಚ ಬಹಿರ್ಮುಖಾಂ ವಿತನುಯದ್ವೀಥೀಂ ಚ ವೇಣ್ವಾದಿಭಿಃ॥

ಉದ್ಧೃತ್ಯೋಪರಿ ಸನ್ನಿಬಧ್ಯ ಚ ಕವಾಟಂ ದ್ವಾರಿವಾರ್ಯಮತರೇ।
ದಾರುಸ್ತಂಭಮಿತಸ್ತತಶ್ಚ ಸುದೃಢಂ ಕೃತ್ವಾ ಸಧಾರಂ ಬಹುಮ್ ।
ಇಕ್ಷ್ವಾದ್ಯತ್ರ ವಿನಿಕ್ಷಿ ಪೇದಥ ಗಜಾನ್ ಸಂವಾರ್ಯ ಭೇರ್ಯಾದಿತ ॥

ಸ್ತ್ರಸ್ತಾನತ್ರ ನಿವೇಶ್ಯ ಚಾರ್ಗಲ ಶಿಖಾಪಾಶಾಂಶ್ಚ ಭಿಂದ್ಯಾದ್ ದ್ರುತಮ್ ॥
ಕಕ್ಷ್ಯಾಬಂಧಕ ಕುಂತ ವೇಣು ಸೃಣಿ ಪಾಶಾದ್ಯೈರ್ಯುತಾ ಹಸ್ತಿಪಾ ।
ಸ್ತಸ್ಮಿನ್ ದ್ವಿತ್ರದಿನಂ ಪ್ರತೀಕ್ಷ್ಯ ಪುನರಭ್ಯೇತ್ಯಾಶು ವಾರ್ಯಂ ತರಮ್ ॥

ಸ್ತಂಭೋಪಾಂತಗತಾ ಗಜಾನಪಿ ಗೃಹೀತ್ವೋಪಾಯವಂತೋ ದೃಢಂ।
ಸಂಬಧ್ಯಾತ್ರ ಗುಣಾನ್ವಿತಾನಥ ಬಹಿರ್ಯೂಥಂ ಚ ವಿದ್ರಾವಯೇತ್ ॥
ಕಕ್ಷ್ಯಾ ಭಾಗೇ ಚ ಕಂಠೇ ಮೃದುತರ ದೃಢಪಾಶೈರ್ಗಜಂ ಚಾರು ತೂರ್ಣಂ ।
ಬಧ್ನೀಯಾ ಚ್ಚಾಪರಾಂಗೇ ನಿಗಳನಮಪಿ ತತ್ಪಾದಯೋರಪ್ಯಮೀಷು ।

ಬಧ್ವಾ ಪಾಶಾನಥಾ ತ್ಯಾಯತ ಸುದೃಢತ ರಾನಗ್ರತೋ ಹಸ್ತಿಪೇಂದ್ರೈ।
ರಾಕೃಷ್ಯಾಕೃಷ್ಯ ಮಂದಂ ಗಮಯತು ಶಿಥಿಲೀಕೃತ್ಯ ಪಾಶ್ಚಾತ್ಯ ಪಾಶಮ್ ॥
ಸ್ತಂಭಾತ್ ಸ್ತಂಭಾಂತರಂ ತ್ವೇವಂ ಯಾಪಯಿತ್ವಾ ಶನೈರ್ಗ ಜಾನ್ ।
ಶಾಲಾಂ ಪ್ರವೇಶಯೇದನ್ಯೈರಾಪ್ತೈರ್ದಂತಿ ವರ್ಯೈಃ ಸಹ ॥
(ಮಾತಂಗ. ೧೦–೨–೬; ಅಲ್ಲದೆ ನೋಡಿ: ವಾರಿಬಂಧ).

ನೋ. ವಾರಿಗತ; ಇದರ ಕ್ರಮ: ಕ್ರೋಶದ ಅಳತೆಯ ವಿಸ್ತಾರವೂ ನೀಳವೂ ಆದ ತೋಡು ಮಾಡುವುದು; ಹೊರಬೀಳಲು ಕಷ್ಟವಾದ ಆ ತೋಡಿನ ಸುತ್ತ ಮರ ಮೊದಲಾದವುಗಳ ಬೇಲಿಯನ್ನು ಕಲ್ಪಿಸುವುದು; ಅದರ ಸುತ್ತಲೂ ದಾಟಲು ಅಸಾಧ್ಯವಾದ ಕಂದಕವನ್ನು ನಿರ್ಮಿಸುವುದು. ಬಾಗಿಲ ಎರಡು ಕಡೆಗಳಲ್ಲಿಯೂ ಹಾಕುವ ಎರಡು ಬೇಲಿಗಳ ಮಧ್ಯದಲ್ಲಿರುವಂತೆ ಅಗಲವಾದ ದಾರಿಯನ್ನು ಬಿದಿರು ಮೊದಲಾದವುಗಳಿಂದ ರಚಿಸಬೇಕು. ಬಾಗಿಲಿಗೆ ಗಟ್ಟಿಯಾದ ಕದವನ್ನು ಮಾಡಿರಬೇಕು. ಈ ಕಡೆ ಆ ಕಡೆಗಳಲ್ಲಿ ದೃಢವಾದ ಮರದ ಕಂಬಗಳನ್ನು ನಿಲ್ಲಿಸಿರಬೇಕು. ಒಳಗೆ ಕಬ್ಬು ಮೊದಲಾದ ಉಣಿಸು ಇಟ್ಟಿರಬೇಕು. ಆಮೇಲೆ ಆನೆಗಳನ್ನು ಸುತ್ತುವರಿದು, ಭೇರಿ ಮುಂತಾದವುಗಳ ಸದ್ದಿನಿಂದ ಅವನ್ನು ಬೆದರಿಸಿ, ತೋಡು ಇರುವ ಕಡೆಗೆ ಅವು ಬರುವಂತೆ ಮಾಡಬೇಕು. ಅವು ಒಳಪ್ರವೇಶ ಮಾಡಿದ ಕೂಡಲೇ ಬಾಗಿಲ ಅಗಳಿಯನ್ನೆತ್ತಿ, ಕಟ್ಟಿದ್ದ ಹಗ್ಗಗಳನ್ನು ಕತ್ತರಿಸಬೇಕು(ಆಗ ಅಗಳಿ ಕೆಳಗೆ ಬಂದು ಬಾಗಿಲು ಮುಚ್ಚಿಕೊಳ್ಳುವುದು). ಬಳಿಕ, ಆನೆಗಳನ್ನು ಕಟ್ಟುವ ಹಗ್ಗ, ಕೊಂತ, ಬಿದಿರು, ಅಂಕುಶ ಪಾಶಾದಿಗಳಿಂದ ಸಜ್ಜಾದ ಮಾವುತರು ೨–೩ ದಿನ ಅವನ್ನು ಗಮನಿಸಿ, ಅನಂತರ ಪಳಗಿಸಿದ ಆನೆಗಳೊಂದಿಗೆ ಕೂಡಿಕೊಂಡು ತೋಡಿನ ಹತ್ತಿರಕ್ಕೆ ಬರಬೇಕು. ಕಂಬಗಳ ಬಳಿ ನಿಂತು, ಉಪಾಯದಿಂದ ಉತ್ತಮವಾದ ಆನೆಗಳನ್ನು ಕಟ್ಟಿಹಾಕಬೇಕು; ಉಳಿದುವನ್ನು ಹೊರಕ್ಕೆ ಓಡಿಸಬೇಕು.

ಆನೆಯ ನಡು ಹಾಗೂ ಕುತ್ತಿಗೆಯ ಭಾಗಗಳಲ್ಲಿ ಮೃದುವೂ ಗಟ್ಟಿಯೂ ಆದ ಹಗ್ಗಗಳನ್ನು ಬಿಗಿದು, ಕಾಲುಗಳಿಗೆ ಸಂಕೋಲೆಗಳನ್ನೂ ತೊಡಿಸಬೇಕು. ಈಗ ಉದ್ದವೂ ಗಟ್ಟಿಯೂ ಆದ ಹಗ್ಗಗಳನ್ನು ಮಾವುತರು ಆನೆಗಳಿಗೆ ಕಟ್ಟಿ ಮೆಲ್ಲಗೆ ಎಳೆದೆಳೆದು, ಮೊದಲು ಕಟ್ಟಿದ ಹಗ್ಗಗಳನ್ನು ಸಡಿಲಿಸುತ್ತ ಮೆಲ್ಲಗೆ ಅವನ್ನು ಮುಂದಕ್ಕೆ ಎಳೆದು ತರಬೇಕು. ಒಂದು ಕಂಬದಿಂದ ಇನ್ನೊಂದು ಕಂಬಕ್ಕೆ ಈ ಕ್ರಮದಲ್ಲಿ ನಿಧಾನವಾಗಿ ನಡಸಿಕೊಂಡು ಬಂದು, ಅವನ್ನು ಪಳಗಿದ ಆನೆಗಳ ಸಹಾಯದಿಂದ ಗಜಶಾಲೆಗೆ ಸೇರಿಸಬೇಕು."[೧೦೧] ಈ ಕ್ರಮವನ್ನು **ವಾರೀಗ್ರಹ** ಎಂದು ಕರೆಯಲಾಗುವುದು.

"ವಾರಿಸ್ಥಾನಂ ಸಮಾಲೋಕ್ಯ ಘಾಸಂ ಹೃದ್ಯಂ ತತಃ ಕ್ಷಿಪೇತ್ ॥
ಸಲ್ಲಕೀ ಕದಳೀದಂಡಾನಿಕ್ಷುದಂಡಾನ್ ಸುಧಾಸಮಾನ್ ।
ನಳಿನೀಕಂದಕಾನ್ ಮೃಷ್ಟಾನ್ ಪ್ರಿಯಾಳಾನ್ ಪಿಪ್ಪಲಾನಪಿ ॥

ವೈಣವಂ ಹರಿತಂ ಪತ್ರಂ ತಥೈವಾನ್ಯದ್ ಗಜ ಪ್ರಿಯಮ್ ।
ದ್ವಿಪೋ ಯೂಥೈಸ್ಸಮಾಗಚ್ಛೇದ್ಗ ಚ್ಛೇಚ್ಚಗ್ರಾಸಲಂಪಟಃ ॥

ಪ್ರತ್ಯಹಃ ದೃಶ್ಯತೇ ತತ್ರ ತದಾ ಮಾರ್ಗೋ ನಿರುದ್ಧ್ಯತೇ ।
ಕ್ರೋಶಮಾತ್ರಾಯತಾಂ ಭೂಮಿಂ ವಿಸ್ತಾರೇಣ ಚ ತತ್ಸಮಾಮ್ ॥

ವೃಕ್ಷೈಃ ಪರಿಧಯಾ ವಾಪಿ ಸಮಂತಾತ್ ಪರಿವೇಷ್ಟ ಯೇತ್ ।
ದ್ವಾರಂ ತತ್ರ ಪ್ರಕುರ್ವೀತ ನಿವರ್ತನಮಹೀಮಿತಮ್ ॥

ಕುಂಜರಾಣಾಂ ಪ್ರವೇಶಾರ್ಥಂ ವಾರಿಬಂಧವಿಚಕ್ಷಣಃ ।
ಪ್ರವಿಷ್ಟಾನ್ ದ್ವಿರದಾನ್ಸ್ತತ್ರ ಸಮ್ಯಗಾಲೋಚ್ಯ ಬುದ್ಧಿಮಾನ್ ॥

ವಾರಿದ್ವಾರಂ ನಿರುಂಧೀತ ಮಹಾವೃಕ್ಷೈಸ್ತಿರಸ್ಕೃತಮ್ ।
ಅಂತಸ್ಥಾನ್ ಬಂಧಯೇನ್ನಾ ಗಾನ್ ಸರ್ವಲಕ್ಷಣಸಂಯುತಾನ್ ॥

ಈದೃಗ್ವಿಧಸ್ತು ಯೋ ಬಂಧಃ ವಾರಿಬಂಧಸ್ಸ ಉಚ್ಯತೇ ।
ಇತ್ಯಾಹ ಭಗವಾನ್ ವ್ಯಾಸೋ ವಾರಿಬಂಧವಿಚಕ್ಷಣಃ ॥

(ಗಜಶಾ. ೬-೨೦-೨೯; ಅಲ್ಪಪಾಠಭೇದಗಳೊಂದಿಗೆ ಮಾನಸೋ. ೨-೧೮೮-೧೯೪).

ನೋ. ವಾರೀಕರ್ಮ: ಜಲವಸತಿಯ ಎಡೆಯನ್ನು ನೋಡಿ(ಮಾನಸೋಲ್ಲಾಸ ಪಾಠದಲ್ಲಿ 'ಚಾರಸ್ಥಾನಂ ಸಮಾಲೋಕ್ಯ' ಎಂದಿರುವುದರಿಂದಾಗಿ, ಆನೆಗಳು ನಡೆದಾಡುವ

ಸ್ಥಾನವನ್ನು ನೋಡಿ ಎಂದು ಅಭಿಪ್ರಾಯಭೇದವುಂಟು), ಅಲ್ಲಿ ಸೊಂಪಾದ ಮೇವನ್ನು– ಆನೆಬೇಲ, ಬಾಳೆಕಂದು, ಕಬ್ಬಿನ ಜಲ್ಲೆ, ತಾವರೆಗಡ್ಡೆ, ಮೊರಟೀ ಗಿಡ ಹಾಗೂ ಅರಳಿಯ ಎಲೆ, ಬಿದಿರಿನ ಕುಡಿ ಹಾಗೂ ಆನೆಗಳಿಗೆ ಪ್ರಿಯವಾದ ಇತರ ಮೇವನ್ನು ಹಾಕಬೇಕು. ಹಸಿಮೇವಿನ ಆಸೆಯಿಂದ ಆನೆಗಳ ಹಿಂಡು ಪ್ರತಿದಿನವೂ ಅಲ್ಲಿಗೆ ಬರುವುದು ಸಾಧ್ಯ. ಆಗ ಆ ದಾರಿಯನ್ನು ತಡೆಯಬೇಕು. ಅದು ಹೇಗೆ ಎಂದರೆ: ಕ್ರೋಶಮಾತ್ರವಾಗಿ ಆಯತಾಕಾರವಾಗಿರುವ, ವಿಸ್ತಾರದಲ್ಲಿ ಸಹ ಅಷ್ಟೇ ಇರುವ, ತಡೆಯ ಭೂಪ್ರದೇಶವನ್ನು ಮರಗಳಿಂದಲೋ ಬೇಲಿಗಳಿಂದಲೋ ಸುತ್ತುಗಟ್ಟಬೇಕು. ವಾರಿಬಂಧತಜ್ಞನು ಆನೆಗಳ ಪ್ರವೇಶಕ್ಕೆ ತಕ್ಕುದಾದ ಬಾಗಿಲನ್ನು ನಿವರ್ತನ ಭೂಮಿಯ ಅಳತೆಯಿಂದೊಳಗೆ ಮಾಡಿಸಬೇಕು. ಆನೆಗಳು ಅಲ್ಲಿ ಪ್ರವೇಶಿಸಿವೆ ಎಂದು ಚೆನ್ನಾಗಿ ತಿಳಿದ ಅನಂತರ ಭಾರಿ ಮರಗಳಿಂದ ವಾರಿದ್ವಾರವನ್ನು ಮುಚ್ಚಿ ಬಿಡಬೇಕು. ಒಳಸೇರಿದ ಆನೆಗಳನ್ನು ಬಳಿಕ ಬಂಧಿಸಬೇಕು"[೧೦೨] ಈ ಕ್ರಮವನ್ನು **ವಾರಿಬಂಧ** ಎಂದು ಕರೆಯಲಾಗುವುದು.

"ಆಪ್ತಾಶ್ಚರ್ಮ ಪಟ್ಟೈರ್ನಿಬದ್ಧ ಜಠರಾಃ ಪಾಶಾದಿಭಿಃ ಸಂಯುತಾಃ ।
ಆರಾದ್ಯೂಥಮಥಾಂಗುಲಿ ಪ್ರಹರಣೈಃ ಪ್ರಾಪಯ್ಯ ತಾಃ
ಪಂಚಷಾನ್ ಬಧ್ನೀಯಶ್ಚ ಗಜಾನ್ ಜವಾದಿತಿ ವಶಾಲೋಭೋ ವಶಾಲೋಭನಾತ್॥
(ಮಾತಂಗ. ೧೦–೭).

ನೋ. ವಶಾಬಂಧ: ಐದಾರು ಹೆಣ್ಣಾನೆಗಳ ಹೊಟ್ಟೆಗೆ ಚರ್ಮದ ಬಟ್ಟೆಗಳನ್ನು ಹೊದಿಸಿ, ಅದರೊಳಗೆ ಪಾಶಾದಿಗಳಿಂದ ಸನ್ನದ್ಧರಾಗಿ ಆನೆಯನ್ನು ಹಿಡಿಯುವವರು ಕುಳಿತಿರಬೇಕು; ಗಂಡಾನೆಗಳಿರುವ ಗುಂಪಿನೆಡೆಗೆ ಆ ಹೆಣ್ಣಾನೆಗಳನ್ನು ಒಯ್ಯಬೇಕು. ಅವುಗಳಿಗೆ ಆಕರ್ಷಿತವಾದ ಗಂಡಾನೆಗಳು ಹತ್ತಿರ ಬಂದಾಗ ಅವನ್ನು ಹಿಡಿಯುವುದು."[೧೦೩] ಈ ಕ್ರಮವನ್ನು **ವಶಾಲೋಭಗ್ರಹ(ವಶಾವಿಲೋಭನ)** ಎಂದು ಕರೆಯಲಾಗುವುದು.

"ಭೇರೀ ತೂರ್ಯಕ ಕಾಹಲಾದಿ ನಿನದೈರ್ವಿದ್ರಾವ್ಯ ನಾಗಾನ್ ಭೃಶಂ ।
ಭೀತಾನಾಶು ಸದಾ ಸಸ್ಯೈನ್ಯಮನುಧಾವಂತೋ ಭಟಾ ನಿರ್ಭಯಾಃ ।
ಯಾವತ್ ಪಾದಪರಿಶ್ರಮೇಣ ಕಳಭಾಃ ಸ್ತಬ್ಧಾಃ ಸ್ಯುರೇತಾಂಸ್ತದಾ ।
ಬಧ್ನೀಯು ಶ್ಚತುರಾ ಜವಾದನುಗತಾಖ್ಯೋಽಯಂ ಗಜಾನಾಂ ಗ್ರಹಃ ।
(ಮಾತಂಗ. ೧೦–೧೧); ಅಲ್ಲದೆ ನೋಡಿ: ಅನುಗತಬಂಧ.

ಆನೆಯನ್ನು ಅಟ್ಟಿ ಹಿಡಿಯುವ ಒಂದು ಕ್ರಮ. ಭೇರಿ, ತೂರ್ಯ, ಕಹಳೆ ಮೊದಲಾದ ವಾದ್ಯಗಳನ್ನು ಪೂರೈಸಿ ಆನೆಗಳನ್ನು ಚೆದರಿಸಿ, ಭಯಗ್ರಸ್ತವಾದ ಆನೆಗಳನ್ನು

ನಿರ್ಭೀತರಾದ ಭಟರು ಸೈನ್ಯಸಹಿತವಾಗಿ ಹಿಂಬಾಲಿಸಿ, ಅವು ಎಲ್ಲಿಯವರೆಗೆ ಸಾಗಿ ಕಾಲು ಸೋತು ನಿಲ್ಲುತ್ತವೆಯೋ ಅಲ್ಲಿಯವರೆಗೆ ಅಟ್ಟಿಸಿಕೊಂಡು ಹೋಗಿ ಹಿಡಿಯುವುದು."[೧೦೪] ಈ ಕ್ರಮವನ್ನು **ಅನುಗತಗ್ರಹ** ಎಂದು ಕರೆಯಲಾಗುವುದು.

೧. ವಶಾಂ ಯತ್ರಾನುಯಾತಿ ಸ್ಮ ಕರೀ ಮೋಹಸಮನ್ವಿತಃ ।
ಬಂಧಸ್ಸೋऽನುಗತೋ ಜ್ಞೇಯೋ ಗಜಬಂಧವಿಚಕ್ಷಣೈಃ ॥ (ಗಜಶಾ. ೬-೩೨).

ಹೆಣ್ಣಾನೆಯ ಮೋಹದಿಂದ ಅದನ್ನು ಅನುಸರಿಸುತ್ತಿರುವ ಗಂಡಾನೆಯನ್ನು ಹಿಡಿಯುವುದು.

೨. ವೀಕ್ಷ್ಯ ಪಾಪರ್ದ್ಧಿಕೈರ್ಯತ್ನಾನ್ನಿದ್ರಿತಂ ಗಜಯೂಥಕಮ್।
ಬಹುಭಿಃ ಪಾಶಹಸ್ತೈಶ್ಚ ಕೂರ್ಚಹಸ್ತೈಃ ಸಮಾವೃತಃ ॥
ಶೃಂಗಹಸ್ತೈಸ್ತಥಾ ಕೈಶ್ಚಿದಾರಾಹಸ್ತೈಶ್ಚ ಕೈಶ್ಚನ ।
ವಾದ್ಯಕೈರ್ವಿವಿಧೈಃ ಸಾರ್ಧಂ ಗಚ್ಛೇನ್ಮಾತಂಗಬಂಧಕಃ ॥

ಅಶ್ವಾರೂಢೈರ್ವಶಾರೂ ಢೈರ್ಗಜಾರೂ ಢೈರ್ವಿಚಕ್ಷಣೈಃ ।
ಸಂಗತೋ ಗಜಬಂಧಾಯ ಗಚ್ಛೇದ್ ರಾಜ್ಞಾ ನಿಯೋಜಿತಃ ॥

ತೋಯಸ್ಥಾನೇಷು ಸರ್ವೇಷು ಸಮೀಪಸ್ಥೇಷು ಶಾಖಿಷು ।
ಆರೋಪಯೇದ್ ಬಹೂನ್ ಭೃತ್ಯಾಂಸ್ತೂರ್ಯಹಸ್ತಾನ್ ವಿಚಕ್ಷಣಾನ್ ॥

ನಿದ್ರಾವಶಸ ಮಾಪನ್ನಂ ಯತ್ರ ಯೂಥಂ ವ್ಯವಸ್ಥಿತಮ್ ।
ಪ್ರಾತಃಕಾಲೇ ಶನೈರ್ಗ ಚ್ಛೇನ್ನಿದಾಘೇ ಸಮುಪಸ್ಥಿತೇ ॥

ಸದಾಗತೇರಧೋಭಾಗೇ ನಿವಾರ್ಯ ಜನನಿಸ್ವನಮ್ ।
ಸಹಸಾ ವಾದಯೇತ್ ತೂರ್ಯಂ ಕಾಹಲಾರವಸಂಯುತಮ್ ॥

ಉತ್ಥಾಯ ಚಕಿತಂ ವೇಗಾನ್ನಾಗಯೂಥಂ ವಿನಿದ್ರಿತಮ್ ।
ಸಂಭ್ರಾಂತಮಾನಸಂ ಭೀತಂ ಪಲಾಯನಪರಂ ಭವೇತ್ ॥

ತತಸ್ತದನುಗಚ್ಛೇಯುರ್ವಾರಿ ಬಂಧವಿಶಾರದಾಃ ।
ಯೇನ ಮಾರ್ಗೇಣ ಸಂತ್ರಸ್ತಂ ಗತಂ ಯೂಥಂ ವನಾಂತರಮ್ ॥

ಯೂಥಂ ವಿಹಾಯ ಯೋ ಗಚ್ಛೇದ್ ಭಯಸಂತ್ರಸ್ತಮಾನಸಃ ।
ತಂ ನಾಗಮನುಗಚ್ಛೇಯುಃ ಪಾಶಕೂರ್ಚಕಧಾರಿಣಃ ॥

ಪಿಪಾಸಿತಃ ಪರಿಶ್ರಾಂತಸ್ತೋಯಾಂತಿಕಮುಪಾಗತಃ ।
ಶ್ರುತ್ವಾ ತೂರ್ಯಕೃತಂ ನಾದಮನ್ಯತಃ ಪ್ರಪಲಾಯತೇ ॥

ಶುಷ್ಕಲಾಲಾ ಜಲೇಽತ್ಯರ್ಥಂ ಗತೇ ಚ ಜಡತಾಂ ಗಜೇ ।
ಶ್ಲಥೇ ಕರೇ ಚ ಪುಚ್ಛೇ ಚ ನಿಶ್ಚಲೇ ಕರ್ಣಪಲ್ಲವೇ ॥

ತತೋ ವೇಗಯುತಾ ವಶ್ಯಾ ವಶಾಶ್ಚಾಧೋರಣೇರಿತಾಃ ।
ಶ್ರಾಂತಂ ದ್ವಿಪಂ ಸಮಾಗತ್ಯ ವೇಷ್ಟಯಂತಿ ಸಮಂತತಃ ॥

ತತಃ ಪಾಶಧರಾ ದಕ್ಷಾ ವಶಾಗಾತ್ರ ತಿರೋಹಿತಾಃ ।
ನಿಬಧ್ನಂತಿ ನರಾಃ ಶೂರಾಸ್ತಂ ಗಾತ್ರಾಪರಯೋರ್ದ್ವಿಪಮ್ ॥

ಕಕ್ಷಾಭಾಗೇ ಚ ಕಂಠೇ ಚ ನಿಗಡೈಶ್ಚರ್ಮ ನಿರ್ಮಿತೈಃ ॥
ಸಮೀಪಸ್ಥಸ್ಯ ವೃಕ್ಷಸ್ಯ ಸ್ಕಂಧೇ ಬಧ್ನಂತಿ ಸಿಂಧುರಮ್ ॥

ಅನೇನ ವಿಧಿನಾ ಯತ್ರ ಕ್ರಿಯತೇ ಗಜಬಂಧನಮ್ ।
ಸ ಬಂಧೋನುಗತೋ ಜ್ಞೇಯೋ ಬಂಧವಿದ್ಯಾಸು ಕೋವಿದೈಃ ॥
(ಮಾನಸೋ. ೧೯೮-೨೦೨).

ಪಾಪದ ಹೆಚ್ಚಳದಿಂದ ನಿದ್ರಿಸುತ್ತಿರುವ ಆನೆಗಳ ಹಿಂಡನ್ನು ಕಂಡೊಡನೆ, ಆನೆಗಳನ್ನು ಹಿಡಿಯುವಾತನು ಪಾಶಗಳು ಕೂರ್ಚಗಳು ಕೊಂಬುಗಳು ಹಾಗೂ ಆರೆಗಳನ್ನು ಕೈಗಳಲ್ಲಿ ಇಟ್ಟುಕೊಂಡು ವಾದ್ಯಗಾರರೊಂದಿಗೆ ಕೂಡಿ ಹೊರಡಬೇಕು. ಆನೆಗಳನ್ನು ಹಿಡಿಯಲು ರಾಜನಿಂದ ನಿಯುಕ್ತನಾದವನು ಕುದುರೆ ಹೆಣ್ಣಾನೆ ಗಂಡಾನೆಗಳನ್ನು ಏರಿದವ ರೊಂದಿಗೆ ಒಗ್ಗೂಡಿ ಹೋಗಬೇಕು. ಎಲ್ಲಾ ನೀರ್ದಾಣಗಳಲ್ಲಿಯೂ ಸಮೀಪದಲ್ಲಿರುವ ಮರಗಳ ಮೇಲೂ ತೂರ್ಯಹಸ್ತರಾದಂತಹ ಚತುರ ಭೃತ್ಯರು ಸಜ್ಜಾಗಿರುವಂತೆ ಏರ್ಪಡಿಸ ಬೇಕು. ಬೇಸಿಗೆಯ ಬೆಳಗಿನ ಜಾವ ನಿದ್ರಾವಶವಾಗಿರುವ ಆನೆಗಳ ಹಿಂಡಿನ ಬಳಿಗೆ ಮೆಲ್ಲಗೆ ಸಾಗಬೇಕು. ಜನ ಜಂಗುಳಿಯ ಸದ್ದುಗದ್ದಲವನ್ನು ತಪ್ಪಿಸಿ, ಬೀಸುಗಾಳಿಯ ಅಡಿಯಲ್ಲಿ ಕೊಂಬು ಕಹಳೆಗಳನ್ನು ಫಕ್ಕನೆ ಮೊಳಗಿಸಬೇಕು. ಆಗ ಗಾಬರಿಯಿಂದ ಬೆಚ್ಚಿ ನಿದ್ದೆ ಯಿಂದೆಚ್ಚತ್ತ ಆನೆಗಳ ಹಿಂಡು ಥಟ್ಟನೆ ಪಲಾಯನ ಮಾಡಲು ಸಿದ್ಧವಾಗುತ್ತದೆ. ಆಗ ವಾರಿಬಂಧ ತಜ್ಞರು ಆನೆಗಳು ಬೆದರಿ ಓಡಿದ ದಿಕ್ಕಿಗೆ ಅವನ್ನು ಅನುಸರಿಸಿ ತಾವೂ ಓಡಬೇಕು. ಹಾಗೆ ಹೆದರಿ ಓಡಿದ ಆನೆಗಳಲ್ಲಿ ಹಿಂಡುಬಿಟ್ಟು ಒಂದು ಸಲಗ ಬೇರೆಯಾಗಿ ಓಡಬಹುದು. ಆಗ ಅದನ್ನು ಹಿಂಬಾಲಿಸಿ ಪಾಶಧಾರಿಗಳೂ ಕೂರ್ಚಕಧಾರಿಗಳೂ ಆದವರು

ತಾವು ಹೋಗಬೇಕು. ಅದು ಬಾಯಾರಿ ಬಳಲಿ ನೀರಿನ ತಾಣಕ್ಕೆ ಬರುತ್ತದೆ; ಕೊಂಬು ಕಹಳೆಯ ದನಿಯನ್ನು ಕೇಳಿ ಅದು ಈಗ ಬೇರೆಡೆಗೆ ಓಡುತ್ತದೆ. ಈ ಸ್ಥಿತಿಯಲ್ಲಿ ಆ ಸಲಗದ ಗಂಟಲ ನೀರೊಣಗಿ ಅದು ಜಡವಾಗುವುದು; ಅದರ ಸೊಂಡಿಲು ಬಾಲಗಳು ಜೋಲುವುವು; ಕಿವಿಯ ಹಾಲೆಗಳು ಅಲುಗಾಡದಾಗುವುವು. ಅನಂತರದಲ್ಲಿ, ಮಾವುತರ ಅಂಕೆಯಲ್ಲಿರುವ ವೇಗಶಾಲಿಯಾದ ಹೆಣ್ಣಾನೆಗಳು ಆ ಸಲಗವನ್ನು ಸುತ್ತುವರಿದು ನಿಲ್ಲುತ್ತವೆ. ದಕ್ಷರಾದ ಪಾಶಧಾರಿಗಳು ಹೆಣ್ಣಾನೆಗಳ ಮೈಹಿಂದೆ ಅವಿತುಕೊಂಡಂತೆ ಇದ್ದು, ಆ ಆನೆಯನ್ನು ಅದರ ಮುಂಭಾಗ ಹಿಂಭಾಗಗಳೆರಡೂ ಸೇರಿದ ಹಾಗೆ ಕಟ್ಟಿಬಿಡುತ್ತಾರೆ. ಕಂಕುಳು ಕುತ್ತಿಗೆಗಳಲ್ಲಿ ಚರ್ಮದಿಂದ ಮಾಡಿದ ಕೋಳಗಳಿಂದ ಬಂಧಿಸಿ ಹತ್ತಿರದ ಮರದ ಕಾಂಡಕ್ಕೆ ಅದನ್ನು ಬಿಗಿಯಾಗಿ ಕಟ್ಟುತ್ತಾರೆ."[೧೦೫] ಈ ಕ್ರಮವನ್ನು **ಅನುಗತಬಂಧ** ಎಂದು ಕರೆಯಲಾಗುವುದು.

"ಅವಪಾತಗತಃ ಅವಪಾತನಾರ್ಥಂ ಕಲ್ಪಿತಂ ತೃಣಾದಿ ಚ್ಛನ್ನಂ ಗರ್ತಂ ಗತಃ (ಅರ್ಥಶಾ. ೫೩–೪೨ ಟೀ); ಅಲ್ಲದೆ ನೋಡಿ: ಅವಪಾತಗ್ರಹ, ಅವಪಾತಬಂಧ.

ಹಿಡಿಯಲು ತೋಡಿರುವ, ಹುಲ್ಲು ಮೊದಲಾದವುಗಳಿಂದ ಮುಚ್ಚಿರುವ, ಹಳ್ಳದಲ್ಲಿ ಬಿದ್ದಿರುವ ಆನೆ. ಈ ಕ್ರಮವನ್ನು **ಅವಪಾತಗತ** ಎಂದು ಕರೆಯಲಾಗುವುದು.

"ಗರ್ತಂ ಹಸ್ತಚತುಷ್ಕ ನಿಮ್ನ ಕರಯುಗ್ಮ ವ್ಯಾಸ ದೋಃಪಂಚಕಾ ।
ಯಾಮಂ ವೇಣುದಲೈಃ ಕಟ್ಯೈಶ್ಚ ಪಿಹಿತಂ ಕೃತ್ವಾ ಮೃದಾಚ್ಛಾದ್ಯ ತಮ್ ।
ತಸ್ಮಿನ್ ಗಜಗ್ರಹ ಇತಿ ಪ್ರೋಕ್ತೋಽವಪಾತಾಹ್ವಯಃ ॥
(ಮಾತಂಗ. ೧೦–೧೪); ಅಲ್ಲದೆ ನೋಡಿ: ಅವಪಾತಬಂಧ.

ಆನೆಯನ್ನು ಮಣ್ಣು ಮುಚ್ಚಿದ ಆಳವಾದ ಹಳ್ಳಗಳಿಗೆ ಬೀಳುವ ಹಾಗೆ ಮಾಡಿ ಬಂಧಿಸುವ ಕ್ರಮ; ನಾಲ್ಕು ಹಸ್ತ ಆಳವೂ ಎರಡು ಕೈ ಅಗಲವೂ ಐದು ಕೈ ಉದ್ದವೂ ಇರುವಂತೆ ಹಳ್ಳವನ್ನು ತೆಗೆದು, ಅದನ್ನು ಬಿದಿರಿನ ಕುಡಿಗಳಿಂದಲೂ ಗರಿಗಳಿಂದಲೂ ಮುಚ್ಚಬೇಕು. ಅದರ ಮೇಲೆ ಮಣ್ಣು ಹರಡಬೇಕು. ಅಲ್ಲಿ ತಿನ್ನುವ ಪದಾರ್ಥಗಳನ್ನು ಹಾಕಬೇಕು. ಹೀಗೆ ಮಾಡಿ ಆನೆಗಳನ್ನು ಅವುಗಳಲ್ಲಿ ಬೀಳುವಂತೆ ಮಾಡಿ ಹಿಡಿಯುವ ಒಂದು ಕ್ರಮ."[೧೦೬] ಈ ಕ್ರಮವನ್ನು **ಅವಪಾತಗ್ರಹ** ಎಂದು ಕರೆಯಲಾಗುವುದು.

"ಚತುರ್ಹಸ್ತಮಿತಂ ಖಾತಂ ವಿಸ್ತರೇಣ ಕರದ್ವಯಮ್ ।
ಪಂಚ ಬಾಹು ಪ್ರಮಾಣೇನ ದೀರ್ಘಂ ಕುರ್ವೀತ ಬುದ್ಧಿಮಾನ್॥

ಗೋಪನೀಯಂ ಪ್ರಯತ್ನೇನ ಯಷ್ಟಿಭಿಸ್ತೃಣ ಪಲ್ಲವೈಃ ।
ಯಸ್ತ್ರತ್ರ ನಿಪತೇನ್ನಾಗೋ ವಿಘ್ನೋ ಹ್ಯಸ್ಯಾಪಿ ಸಂಭವೇತ್ ॥

ಖಂಜೋ ವಾ ಜಾಯತೇ ಪಾದೈರ್ವಕ್ಷೋ ವಾಽಸ್ಯ ಪ್ರಭಜ್ಯತೇ ।
ದಂತೈರ್ವಿ ಯುಜ್ಯತೇ ವಾಪಿ ಕೋಽಪಿ ಜೀವತಿ ವಾ ನ ವಾ ॥

ಬಂಧೋಽಯಮವಪಾತಾಖ್ಯ ಸ್ತೇನಾತ್ಯರ್ಥಂ ವಿಗರ್ಹಿತಃ ।
ಯಸ್ಮಾನ್ನಾಗಾಃ ಪ್ರಣಶ್ಯಂತಿ ತೇನೈವಂ ವರ್ಜಯೇದ್ ಬುಧಃ
(ಮಾನಸೋ. ೨-೩-೨೧೭~೨೨೦) ಅಲ್ಲದೆ ನೋಡಿ: ಅವಪಾತಗ್ರಹ.

ಆನೆಯನ್ನು ಮಣ್ಣು ಮುಚ್ಚಿದ ಆಳವಾದ ಹಳ್ಳಗಳಿಗೆ ಬೀಳುವ ಹಾಗೆ ಮಾಡಿ ಬಂಧಿಸುವ ಕ್ರಮ; ನಾಲ್ಕು ಹಸ್ತಗಳಷ್ಟು ಆಳವೂ ಎರಡು ಹಸ್ತಗಳಷ್ಟು ಅಗಲವೂ ಐದು ತೋಳುಗಳಷ್ಟು ಉದ್ದವೂ ಆಗಿರುವ ಹಳ್ಳವನ್ನು ತೆಗೆದು, ಅದನ್ನು ಕಡ್ಡಿ ಹುಲ್ಲು ಚಿಗುರುಗಳಿಂದ ಮುಚ್ಚಬೇಕು. ಅಲ್ಲಿ ಆನೆ ಬಿದ್ದಾಗ ಅದಕ್ಕೆ ತೊಂದರೆಯೇ ಆಗುವುದು. ಅದು ಕುಂಟಾಗಬಹುದು, ಅದರ ಎದೆ ಸೀಳಿ ಹೋಗಬಹುದು, ಹಲ್ಲುಗಳು ಮುರಿಯಬಹುದು; ಬದುಕಬಹುದು ಇಲ್ಲವೆ ಸಾಯಬಹುದು. ಇದು ಅವಪಾತಬಂಧ. ಇದು ನಿಂದ್ಯವಾದ ಕ್ರಮ. ಏಕೆಂದರೆ ಇದರಿಂದ ಆನೆಗಳು ಸಾಯುವುದೇ ಹೆಚ್ಚು. ಇದನ್ನು ಪ್ರಾಜ್ಞನು ಬಳಸಲಾಗದು."[೧೦೭] ಈ ಕ್ರಮವನ್ನು **ಅವಪಾತಬಂಧ** ಎಂದು ಕರೆಯಲಾಗುವುದು.

"ನಿಕ್ಷಿಪ್ಯಾತ್ರ ಮೃಣಾಳವೇಣುಕದಲೀ ಪುಂಡ್ರೇಕ್ಷುಕಾಂಡಾದಿಕಂ।
ತಾನ್ ಪಾಶಾನಪಿ ಸನ್ನಿಬದ್ಧ್ಯ ಸುದೃಢೇ ವೃಕ್ಷೇಽತ್ರ ದಕ್ಷಾ ಭಟಾಃ ।
ಸಂಭನ್ನಾಃ ಪ್ರತಿಪಾಲ್ಯ ಭಕ್ಷಣ ಪರಾನ್ ಬಧ್ನೀಯುರಾಶು ದ್ವಿಪಾನ್ ।
ಪಾಶಾಕರ್ಷಣತೋ ನಿಪಾತ್ಯ ದೃಢಮಿತ್ಯಾ ಪಾತಸಂಜ್ಞೋ ಗ್ರಹಃ ॥
(ಮಾತಂಗ. ೧೦-೧೩).

ಆನೆಯನ್ನು ಆಹಾರದ ಆಕರ್ಷಣೆಯಿಂದ ಸೆಳೆದು ಹಗ್ಗಗಳಿಂದ ಕಟ್ಟಿಹಾಕುವ ಕ್ರಮ; ತಾವರೆದಂಟು, ಬಿದಿರು, ಬಾಳೆ, ಬಿಳಿಯ ಕಬ್ಬಿನ ಜಲ್ಲೆ ಈ ಮೊದಲಾದುವನ್ನು ಬಲವಾದ ಮರಕ್ಕೆ ಹಗ್ಗದಿಂದ ನಿಪುಣರಾದ ಭಟರು ಗಟ್ಟಿಯಾಗಿ ಕಟ್ಟಬೇಕು. ಅದಕ್ಕೆ ಕಾವಲಿದ್ದು, ಆನೆಗಳು ತಿನ್ನಲು ಬರುವ ಸಮಯದಲ್ಲಿ ಅವನ್ನು ಕೂಡಲೇ ಹಗ್ಗಗಳಿಂದ ಬಿಗಿಯಾಗಿ ಬಂಧಿಸಬೇಕು."[೧೦೮] ಈ ಕ್ರಮವನ್ನು **ಆಪಾತಗ್ರಹ** ಎಂದು ಕರೆಯಲಾಗುವುದು.

"ನಾಲಿಕೇರಾಂಜನೋದ್ಭೂತವಲ್ಕಕಲ್ಪಿತ ಪಾಶಕಮ್।
ಷಷ್ಟಿಹಸ್ತಾಯು (ಯ) ತಂ ಸ್ಥೌಲ್ಯೇ ಪ್ರಕೋಷ್ಠಸಮತಾಂ ಗತಮ್ ॥

ತಸ್ಯಾರ್ಧಂ ನಿಕ್ಷಿಪೇದ್ ಗಾತ್ರೇ ಪೂರಯೇಚ್ಚ ದೃಢಂ ಮೃದಾ ।
ಶೇಷಾರ್ಧಂ ಪಾಶವದ್ ಕುರ್ಯಾದ್ ಗಜಗ್ರೀವಾಂಘ್ರಿರೋಧನಮ್ ॥

ತೇನ ಪಾಶೇನ ಯೋ ಬದ್ಧಃ ಸ ಭೃಶಂ ಪೀಡಿತೋ ಭವೇತ್ ।
ಪ್ರಮಾದೋಽಪಿ ಭವೇತ್ ಕ್ವಾಪಿ ಕ್ವಾಪಿ ಜೀವತಿ ಕುಂಜರಃ ॥

ಆಪಾತಾಖ್ಯಃ ಸಮಾಖ್ಯಾತೋ ಬಂಧೋಯಂ ಹಸ್ತಿಬಂಧಕೈಃ।
ನಿಂದಿತಶ್ಚ ಭವತ್ಯೇಷ ಸಿಂಹಸಂಶಯಿತಃ ಸದಾ ॥

(ಮಾನಸೋ. ೨-೩-೨೧೩-೨೧೬) ಅಲ್ಲದೆ ನೋಡಿ : ಆಪಾತಗ್ರಹ.

ತೆಂಗಿನಕಾಯ ಅಂಜನದಿಂದ ಮಾಡಿದ ತೊಗಟೆಯ ಪಾಶವನ್ನು ೬೦ ಹಸ್ತಗಳಷ್ಟು (ಹಸ್ತ=೧೮ ಅಂಗುಲ) ಉದ್ದವಾಗಿ, ಒಂದು ಅಂಗೈಯಷ್ಟು ದಪ್ಪವಾಗಿರುವಂತೆ ಮಾಡಿ ಕೊಂಡು, ಅದರ ಅರ್ಧಭಾಗವನ್ನು ಆನೆಯ ದೇಹಕ್ಕೆ ಸುತ್ತಬೇಕು; ಅದರ ಸುತ್ತಲೂ ಮಣ್ಣು ಮೆತ್ತಬೇಕು. ಉಳಿದರ್ಧವನ್ನು ಆನೆಗೆ ಪಾಶದಂತೆ ಮಾಡಬೇಕು. ಹಾಗೆ ಮಾಡಿ ಅದರ ಕೊರಳು ಕಾಲುಗಳನ್ನು ಬಂಧಿಸಬೇಕು. ಈ ಪಾಶದಿಂದ ಆನೆಗೆ ಬಹಳವಾಗಿ ಹಿಂಸೆಯಾಗುವುದು; ಅದು ಸಾಯಲೂ ಬಹುದು; ಬದುಕಿ ಉಳಿಯಲೂಬಹುದು"[೧೯] ಈ ಕ್ರಮವನ್ನು **ಆಪಾತಬಂಧ** ಎಂದು ಕರೆಯಲಾಗುವುದು.

"**ಆಸನ**: ೧. ಆನೆಯ ಹೆಗಲು: ಆಸನಂ ಸ್ಕಂಧದೇಶಸ್ಸ್ಯಾತ್(ಅಮರ. ೨-೫೦೫); ಸ್ಕಂಧ ಆಸನಂ(ಅಭಿಧಾ. ೨-೬೪); ಆಸನಂ ಸ್ಕಂಧಂ(ವಸ್ತುಕೋ. ೧೪-೩೩); ಸ್ಕಂಧ ಮಾಸನಮೆನಲ್ ಗಜದ ಹೆಗಲಕ್ಕುಂ(ಮಂಗನಿ. ಮೃ. ೨); ಸ್ಕಂಧಃ ಆಸನಂ- ಈ ೨ ಆನೆಯ ಪೆಗಲ್(ಅಭಿಧಾ. ೨-೬೪ ಟೀ).

೨. ಆನೆಯನ್ನು ಹತ್ತುವ, ಕೂರುವ, ಇಳಿಯುವ ವಿಧಾನ ಉತ್ಕೃಷ್ಟ-ಮಂದ ಜಾತಿಯ ಆನೆ-ಯುದ್ಧಕಾರ್ಯ; ಮಧ್ಯ-ಭದ್ರಜಾತಿಯ ಆನೆ-ಓಟ; ಅವಕೃಷ್ಟ-ಮೃಗ ಜಾತಿಯ ಆನೆ-ನಡೆ.

೩. ಅಂಕುಶಚಾರಣೆಯ ಪ್ರಯೋಗಗಳಿಗೆ ಆನೆ ಅವಕಾಶ ಮಾಡಿಕೊಡುವುದು: ಅವನತ, ಪಾರ್ಶ್ವಾವನತ, ಪೃಷ್ಠಾವನತ, ಉಪಲಾಲನ, ಪ್ರಜ್ಞಾಪನ, ತರ್ಜನ, ಅತಿಕ್ಷಿಪ್ತ, ಪ್ರಹತ, ಭ್ರಾಮಣ, ಆದೀರ್ಣ, ಈಷಪ್‌ಸ್ಪೃಷ್ಟ, ಪ್ರಣಿದಾನ, ಪೀಡಿತಕ, ಕ್ಷಿಪ್ತಕ, ತಾಡಿತಕ, ತೋದ(ಮಾನಸೋ. ೪-೩-೫೮೦ ~ ೫೯೫).

೪. ಆನೆಗಳು ನಿಲ್ಲುವ ವಿವಿಧ ಭಂಗಿಗಳು; ಏಕಜಾನ್ವಾನತ(ಶರೀರದ ಹಿಂಭಾಗವನ್ನು ಕೆಳಮುಖಮಾಡಿ ನಿಲ್ಲುವುದು), ಪಶ್ಚಿಮಕುಂಜರಾಸನ(ಮುಂಗಾಲುಗಳನ್ನು ಮಂಡಿ ಬಗ್ಗಿಸಿ, ಸೊಂಟವನ್ನು ಮೇಲ್ಮುಖ ಮಾಡಿ ನಿಲ್ಲುವುದು), ಮಂಡೂ ಕಾಸನ(ವಂಶವೆಂಬ ಮೂಳೆಯ ಎರಡು ಪಾರ್ಶ್ವಗಳನ್ನೂ ಕುಗ್ಗಿಸಿ, ಮಂಡಿಬಗ್ಗಿಸಿ ನಿಲ್ಲುವುದು), ಊರ್ಧ್ವ(ಯುದ್ಧೋಪ ಯೋಗಿ ಆಸನ), ಕೂರ್ಮಾಸನ(ಒಂದು ಕಾಲಿನ ಮಂಡಿ ಬಗ್ಗಿಸಿ ಮತ್ತೊಂದು ಕಾಲನ್ನು ಕಪೋಲದವರೆಗೆ ಎತ್ತಿ ನಿಲ್ಲುವುದು) [ಉಭಯಾನತಜಾನುಕ(ಎರಡು ಮಂಡಿ ಗಳನ್ನೂ ಬಗ್ಗಿಸಿ ನಿಲ್ಲುವುದು-ಯುದ್ಧದಲ್ಲಿ) ಏಕಜಾನುನತ(ಒಂದೇ ಮಂಡಿ ಬಗ್ಗಿಸಿ ನಿಲ್ಲುವುದು- ಓಟದಲ್ಲಿ)] ಉತ್ಕಟಕ(ವಿಹಾರಯಾನದ ಭಂಗಿ)."[೧೧೦]

"ವಾರಿಬಂಧೋ ವಶಾಬಂಧೋ ಬಂಧಶ್ಚಾನುಗತಃ ಪರಃ ॥
ಉತ್ತಮಸ್ತ್ರಿಪ್ರಕಾರಸ್ಯಾತ್ ಬಂಧಃ ಕರಟಿನಾಮಯಮ್ ।
ಆಪಾತಶ್ಚಾವ ಪಾತಶ್ಚ ದ್ವೌ ಬಂಧೌ ನಿಂದಿತೌ ಮತೌ
(ಗಜಶಾ. ೬-೨೦, ೨೧: ಮಾನಸೋ. ೨-೩-೧೮೬, ೧೮೭)

ಆನೆಗಳನ್ನು ಹಿಡಿಯಲು ಅನುಸರಿಸುವ ೫ ವಿಧಗಳು, ಎಂದರೆ ವಾರಿಬಂಧ, ವಶಾಬಂಧ, ಅನುಗತಬಂಧ(ಉತ್ತಮವಾದವು); ಆಪಾತಬಂಧ, ಅವಪಾತಬಂಧ(ನಿಂದ್ಯ ವಾದವು):

**ಗಜಗ್ರಹಣಪ್ರಕಾರಗಳು:** ಇವು ದಶವಿಧಗಳು-ವೃತಿಬಂಧ, ವೃಕ್ಷಬಂಧ, ರಜ್ಜುಬಂಧ (ಶೃಂಖ ಲಾಬಂಧ), ವಾರಿಬಂಧ(ಸಲಿಲಬಂಧ), ಅನುಗತಬಂಧ(ಕರಿಣೀ ಬಂಧ), ಲಘುಗರ್ತಬಂಧ, ನಿಮ್ನಾವಟಬಂಧ, ಚೋದನಾಬಂಧ(ಪ್ರಚೋದನಾ ಬಂಧ, ಪ್ರೇರಣಾ ಬಂಧ), ವನಬಂಧ(ಉದ್ಯಾನಬಂಧ), ಪಾಂಚಾಲಿಕಾಬಂಧ(ಗೃಹಬಂಧ) (ಗಜಗ್ರ, ಪ.೩೦- ೩೭೧).

**ಗಜಗ್ರಹಣಪ್ರಕಾರಗಳು:** ಇವು ನಾಲ್ಕು ವಿಧ-ದುರ್ಗಬಂಧ, ವಾರಿಬಂಧ, ಕರಿಣೀ ಬಂಧ, ಗರ್ವಬಂಧ(ಗಜಶಿ. ಪಟಲ ೧ ರಿಂದ ೪). ಕ್ರಮವಾಗಿ ತಡೆಬೇಲಿಗಳನ್ನು ಕಟ್ಟಿ ಒಂದು ಆವರಣದೊಳಕ್ಕೆ ಆನೆಗಳನ್ನು ಅಟ್ಟುವುದು, ನೀರು ಕುಡಿಯಲೆಂದೋ ಕ್ರೀಡಿಸ ಲೆಂದೋ ಹೊಂಡ ಕೊಳದಂತಹ ಜಲಾಶಯಕ್ಕೆ ಬಂದಾಗ ಅವನ್ನು ತಪ್ಪಿಸಿಕೊಳ್ಳದಂತೆ ಮಾಡುವುದು, ಪಳಗಿದ ಹೆಣ್ಣಾನೆಗಳ ಸಹಾಯದಿಂದ ಗಂಡಾನೆಗಳನ್ನು ಹಿಡಿಯುವುದು, ಕೃತಕವಾಗಿ ನಿರ್ಮಿಸಿದ ಹಳ್ಳಗಳೊಳಗೆ ಬೀಳುವಂತೆ ಮಾಡುವುದು-ಇವು ಕ್ರಮ."[೧೧೧] ಈ ಕ್ರಮವನ್ನು **ಗಜಗ್ರಹಣ** ಪ್ರಕಾರಗಳು ಎಂದು ಕರೆಯಲಾಗುವುದು.

"ಯುದ್ಧಕ್ಕೆ ಆನೆಯನ್ನು ಪಳಗಿಸುವ ಒಂದು ಕ್ರಮ: ಮುಮ್ಮೈ ಹಿಮ್ಮೈಗಳನ್ನು ಯಥೋಚಿತವಾಗಿ ಬಗ್ಗಿಸುವುದು, ನೀಡುವುದು, ಧ್ವಜ ಬೆಂಕಿ ಬಿದಿರು ಹಗ್ಗ ಮೊದಲಾದುವನ್ನು ಹಾರುವುದು ಇತ್ಯಾದಿಗಳು: ಉಪಸ್ಥಾನಂ ಪೂರ್ವಾಪರಾವಯವಾನಾಂ ನಮನೋನ್ನಮನಾದಿಕಂ ಧ್ವಜೋಲ್ಕಾವೇಣುರಜ್ಜ್ವಾದಿ ಲಂಘನಂ ಚ (ಅರ್ಥಶಾ. ೫೩-೪೮ ಟೀ)."[೧೧೨] ಈ ಕ್ರಮವನ್ನು **ಉಪಸ್ಥಾನ** ಎಂದು ಕರೆಯಲಾಗುವುದು.

**ಖೆಡ್ಡಾಗಳು**

ಖೆಡ್ಡ ಎಂಬ ಪದವು ಖಡ್ಡಾ(ಕಂದಕದಿಂದ ಸುತ್ತುವರಿದ ಪ್ರದೇಶ) ಎಂಬ ಹಿಂದಿ ಪದದಿಂದ ಬಂದಿದೆ. ಖೆಡ್ಡಾ ಸಂಸ್ಕೃತಿಗೆ ಮೈಸೂರು ಸಂಸ್ಥಾನ ತುಂಬಾ ಪ್ರಸಿದ್ಧವಾದುದೆಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಅದರಲ್ಲೂ 'ಮೈಸೂರನ್ನು ಆಳಿದ ಹೈದರಾಲಿಯು ಖೆಡ್ಡಗಳನ್ನು ನಡೆಸುವಲ್ಲಿ ತುಂಬಾ ಆಸಕ್ತಿಯನ್ನು ಹೊಂದಿದ್ದನು. ಮೈಸೂರಿನಿಂದ ೭೫ ಕಿ.ಮೀ. ದೂರದಲ್ಲಿರುವ ಕಾಕನಕೋಟೆ ಅರಣ್ಯದಲ್ಲಿ ಮೊದಲಬಾರಿಗೆ ಆನೆಗಳನ್ನು ಹಿಡಿಯಲು ಪ್ರಯತ್ನಿಸಿ ವಿಫಲನಾದನು'.[೧೧೩] ಕಾಡಿನಲ್ಲಿ ಒಂದು ಪ್ರದೇಶಕ್ಕೆ ಕಾಡಿನಲ್ಲಿದ್ದ ಆನೆಗಳನ್ನೆಲ್ಲಾ ಒಂದೇ ಕಡೆ ಕೂಡುವಂತೆ ಅಟ್ಟಲಾಗುತ್ತಿತ್ತು. ಇಲ್ಲಿಂದ ಮುಂಡಿಗೆಗಳನ್ನು ಕಟ್ಟಿದ ಆನೆಗಳನ್ನು ಹಗ್ಗ ಹಾಕುವ ಪಗಾರಕ್ಕೆ ಸಾಗಿಸಿಕೊಂಡು ಹೋಗಿ ಅಲ್ಲಿ ಅವುಗಳಿಗೆ ಪಳಗಿದ ಆನೆಗಳ ಸಹಾಯದಿಂದ ಹಗ್ಗ ಬಿಗಿಯಲಾಗುತ್ತಿತ್ತು. 'ಬ್ರಿಟೀಶರ ಆಳ್ವಿಕೆಯಲ್ಲಿ ೧೯ನೇ ಶತಮಾನದ ಮಧ್ಯಭಾಗದಲ್ಲಿ ಕರ್ನಲ್ ಪಿಯರ್‌ಸನ್ ಎಂಬುವವರು ಇಂಥ ಪ್ರಯತ್ನ ಮಾಡಿದ್ದನು. ಅವನೂ ಕೂಡ ಆನೆಗಳನ್ನು ಬಂಧಿಸುವಲ್ಲಿ ವಿಫಲರಾಗಿದ್ದರು'.[೧೧೪] ೧೮೭೩–೭೪ರಲ್ಲಿ ಜಿ.ಪಿ. ಸ್ಯಾಂಡರ್‌ಸನ್ ಎಂಬುವವ ಹಿಂದಿನ ಮೈಸೂರು ಸಂಸ್ಥಾನದ ಕರಡಿಹಳ್ಳ ಎಂಬಲ್ಲಿ ಅರಣ್ಯದಗುಂಟ ಆನೆಗಳನ್ನು ನಡೆಸಿಕೊಂಡು ಹೋಗಿ ಮುಂಡಿಗೆಗಳಿಂದ ರಕ್ಷಿಸಿದ ಒಂದು ವಿಶಾಲವಾದ ಆವರಣದಲ್ಲಿ ಕೂಡಿಹಾಕುವ ಕ್ರಮವನ್ನು ಅನುಸರಿಸಿದರು. ಪ್ರಾಯಶಃ ಕರ್ನಾಟಕದಲ್ಲಿ ೧೯ನೇ ಶತಮಾನದಲ್ಲಿ ಆನೆಗಳನ್ನು ಯಶಸ್ವಿಯಾಗಿ ಹಿಡಿದ ಮೊದಲ ಪ್ರಯತ್ನ ಇದಾಗಿದೆಯೆಂದು ದಾಖಲಿಸಲಾಗಿದೆ. ಈ ಸಂದರ್ಭದಲ್ಲಿ ಸ್ಯಾಂಡರ್‌ಸನ್‌ರವರು ತಮ್ಮ ಸಿಬ್ಬಂದಿಗಳೊಳಗೂಡಿ ೫೫ ಆನೆಗಳನ್ನು ಒಂದೇಬಾರಿಗೆ ಸೆರೆಹಿಡಿದರಂತೆ.

ಇವುಗಳಲ್ಲದೆ ಮೈಸೂರು ಜಿಲ್ಲೆಯ ನಂಜನಗೂಡು ತಾಲೂಕಿನ ನಾಗನಾಪುರ ಹಾಗೂ ಚಾಮರಾಜಪೇಟೆಯ ನೇಸಲದುರ್ಗ ಎಂಬಲ್ಲಿ ಕ್ರಮವಾಗಿ '೧೮೭೫–೭೬ ಹಾಗೂ ೧೮೭೬–೭೭ರಲ್ಲಿ ಖೆಡ್ಡಾಗಳು ಬಳಸಿ ಆನೆಗಳನ್ನು ಸೆರೆ ಹಿಡಿದ ಬಗ್ಗೆ ತಿಳಿದುಬರುತ್ತದೆ.'[೧೧೫]

ಇದಲ್ಲದೆ ಶಿವಮೊಗ್ಗದ ಸಕ್ರೆಬೈಲ್, ಚಿಕ್ಕಮಗಳೂರಿನ ಹೆಬ್ರೆ, ಹೆಗ್ಗಡೆದೇವನಕೋಟೆಯ ಕಾಕನಕೋಟೆಯಲ್ಲಿ ಖೆಡ್ಡಾ ಕ್ರಮವನ್ನು ಅನುಸರಿಸಲಾಯಿತು.

೧೯೪೮ರಲ್ಲಿ ಚಾಮರಾಜನಗರ ಹತ್ತಿರದ ಬೂದಿಪಡಗ ಎಂಬಲ್ಲಿ ಆನೆಗಳನ್ನು ಖೆಡ್ಡಾ ಕ್ರಮದಲ್ಲಿ ಸೆರೆ ಹಿಡಿಯಲಾಯಿತು.

೧೯೬೧ರಲ್ಲಿ ರಷ್ಯಾ ದೇಶದ ಮಹಾದಳಪತಿಯ ಗೌರವಾರ್ಥ ಸ್ಯಾಂಡರ್‌ಸನ್ ಅವರು ನದಿಯಲ್ಲಿ ಆನೆಗಳನ್ನು ಸಾಗಿಸಿ ಆನೆಗಳನ್ನು ಸೆರೆ ಹಿಡಿದರು. 'ಇದುವರೆಗೆ ಒಟ್ಟು ಮೂವತ್ತಾರು ಖೆಡ್ಡಾ ಕ್ರಮಗಳನ್ನು ನಡೆಸಲಾಗಿದೆ. ಈ ಖೆಡ್ಡಾಗಳಲ್ಲಿ ಸುಮಾರು ಒಟ್ಟು ೧೮೮೩ ಆನೆಗಳನ್ನು ಸೆರೆ ಹಿಡಿಯಲಾಗಿದೆ.' ಕೊನೆಯ ಖೆಡ್ಡಾ ೧೯೭೦-೭೧ರಲ್ಲಿ ನಡೆಸಲಾಯಿತು.'[೧೧೬]

'೧೯೮೦ರ ದಶಕದಲ್ಲಿ ಸಿ.ಎಚ್. ಬಸವಪ್ಪನವರ್ ಶಿವಮೊಗ್ಗ ಜಿಲ್ಲಾ ಅರಣ್ಯಾಧಿಕಾರಿಯಾಗಿ ಸೇವೆ ಸಲ್ಲಿಸಿದ ಸಂದರ್ಭದಲ್ಲಿ ಕೋರಾನೆಯೊಂದನ್ನು ಖೆಡ್ಡಾ ಪದ್ಧತಿಯಿಂದ ಸೆರೆ ಹಿಡಿದ ವಿವರಗಳನ್ನು ನೀಡಿದ್ದಾರೆ. ಅರಸಾಳು ಅರಣ್ಯದ ಠಾಣೆಯಲ್ಲಿದ್ದ ಎರಡು ಹೆಣ್ಣಾನೆಗಳೊಂದಿಗೆ ರತಿಕ್ರೀಡೆಯಲ್ಲಿ ತೊಡಗಿದ್ದ ಗಂಡಾನೆಯನ್ನು ದರ ಮೂಲ ಸ್ಥಳಕ್ಕೆ ವಾಪಸ್ಸು ಕಳಿಸಲು ಮಾಡಿದ ಪ್ರಯತ್ನದಿಂದ ಸೋತು ಅನಿವಾರ್ಯವಾಗಿ ಕೋರಾನೆಯನ್ನು ಸೆರೆ ಹಿಡಿಯ ಬೇಕಾಯಿತೆಂದು ತಿಳಿಸಿದ್ದಾರೆ. ಅದನ್ನು ಸೆರೆ ಹಿಡಿದ ಕ್ರಮವನ್ನು ಅವರ ಭಾಷೆಯಲ್ಲಿಯೇ ನೋಡೋಣ. 'ಆಯಕಟ್ಟಿನ ಜಾಗದಲ್ಲಿ ಒಂದು ಗುಂಡಿ ತೆಗೆಯಲಾಯಿತು. ಗುಂಡಿಯ ಉದ್ದಳತೆಗಳು ೧೨ ಅಡಿ ಆಳ, ಮೇಲ್ತುದಿಗೆ ೧೨ ಅಡಿ ಚದುರ ಇದ್ದು ಬದಿಗಳು ಕೆಳಗೆ ಹೋದಂತೆ ಅಗಲವು ಕಡಿಮೆಯಾಗುತ್ತ ಹೋಗಿ ತಳದಲ್ಲಿ ೮ ಅಡಿ ಚದುರಿಷ್ಟಿತ್ತು. ಈ ವಿಸ್ತಾರವು ಆನೆಯ ಆಕಾರವನ್ನವಲಂಬಿಸಿ ಹೆಚ್ಚು ಕಡಿಮೆಯಾಗಬಹುದು. ತಳದಲ್ಲಿ ಉದ್ದಗಲವು ಆನೆಯ ಕಾಲುಗಳನ್ನು ಇಕ್ಕಟ್ಟಾಗಿ ಹಿಡಿದಿಡಲು ಹಾಗೂ ಗುಂಡಿಯಿಂದ ಹತ್ತಲು ಯತ್ನಿಸದಂತೆ ಮಾಡಿದ ಉದ್ದೇಶವಾಗಿತ್ತು. ತಗ್ಗಿನಲ್ಲಿ ಬೀಳುವುದರಿಂದ ಆನೆಗೆ ಗಾಯಗಳಾಗದಿರಲು ಗುಂಡಿಯನ್ನು ಆರು ಅಡಿಯವರೆಗೆ ಎಲೆ-ದೇಟು ಮತ್ತು ಒಣ ಹುಲ್ಲಿನಿಂದ ತುಂಬಲಾಗಿತ್ತು. ನೆಲಕ್ಕೆ ಸಮನಾಗಿ ಮೇಲ್ಭಾಗದಲ್ಲಿ ಸೀಳಿದ ಬಿದಿರಿನ ಎಳೆಗಳನ್ನು ಅಡ್ಡಲಾಗಿ ಇಟ್ಟು ಅದರ ಮೇಲೆ ಬಿದಿರಿನ ಚಾಪೆಯಿಂದ ಮುಚ್ಚಲಾಗಿತ್ತು. ಈ ಜಾಗವನ್ನು ಸುತ್ತಲಿನ ನೆಲದಂತೆಯೇ ಕಾಣುವಂತೆ ಒಂದು ಸ್ತರ ಮಣ್ಣು ಮತ್ತು ಅದರ ಮೇಲೆ ಒಣಗಿದ ಎಲೆಗಳಿಂದ ಮುಚ್ಚಲಾಗಿತ್ತು. ಇಂಥ ಗುಂಡಿಯ ಸುತ್ತಲಿನ

ಪ್ರದೇಶವು ಹಸಿರು ಇದ್ದುದು ಕಂಡುಬಂದರೆ ಯಾವುದಾದರೂ ಒಂದು ಜಾತಿಯ ಕಾಳುಗಳನ್ನು ಹಾರುಹೊಡೆದು ಎರಡು ಮೂರು ದಿನ ಅವಕ್ಕೆ ನೀರೆರೆಯಲಾಗುವುದು. ಅದರಿಂದ ಮೊಳಕೆ ಬಂದು ನೆಲವು ಹಸಿರಾಗಿ ಕಾಣುವುದು.

ಗಂಡಾನೆಯೊಂದಿಗೆ ಪ್ರೇಮದ ಲಲ್ಲೆಯಾಡುತ್ತಿದ್ದ ಹೆಣ್ಣಾನೆಯನ್ನು ಗುಂಡಿಯ ಇನ್ನೊಂದು ಬದಿಗೆ ಬಿದಿರಿನ ಮೆಳೆಗೆ ಕಟ್ಟಲಾಗಿತ್ತು. ನಿರೀಕ್ಷಿಸಿದಂತೆ ಗಂಡಾನೆ ಹೆಣ್ಣಾನೆಯ ಬಳಿಸಾರುತ್ತಿದ್ದಂತೆ ಪಟಾಕಿಮದ್ದುಗಳನ್ನು ಹಚ್ಚಲಾಯಿತು. ಅದರೊಡನೆ ಕೂಗು ಹಾಕಲಾಯಿತು. ಬೆದರಿದ ಕೋರಾನೆಯು ಹೆಣ್ಣಾನೆಯನ್ನು ಸಂಧಿಸುವ ತವಕದಲ್ಲಿ ನೇರವಾಗಿ ಗುಂಡಿಯಲ್ಲಿ ಬಿತ್ತು. ಭಯಗೊಂಡ ಗಂಡಾನೆಯು ಘೀಳಿಡಲು ಕೂಗಲು ಪ್ರಾರಂಭಿಸಿತು. ಗುಂಡಿಯಿಂದ ಮೇಲೆ ಹತ್ತಲು ಶತಪ್ರಯತ್ನ ಮಾಡಿತು'[೧೧೭] ಎಂದು ತಿಳಿಸುತ್ತಾರೆ.

### ತರಬೇತಿ

**ಮರಿಯಾನೆಗಳನ್ನು ಪಳಗಿಸುವುದು:** ಕಾಡಾನೆಗಳನ್ನು ಪಳಗಿಸಿದಂತೆಯೇ ಸಾಕಿದ ಆನೆಗಳು ಈದ ಮರಿಯಾನೆಗಳನ್ನು ಪಳಗಿಸುವುದು ಕೂಡ ಉಂಟು. ಮರಿಯಾನೆಗಳಿಗೆ ತಾಯಿಯೊಂದಿಗಿದ್ದಷ್ಟೇ ಗೊತ್ತು. ಆದರೆ ಅದನ್ನು ಸ್ವಚ್ಛಂದವಾಗಿ ಬಿಡದೆ ಆನೆ ಮೂರು ನಾಲ್ಕು ವರ್ಷದ್ದಾದಾಗ ತಾಯಿಯಿಂದ ಆನೆಯ ಮರಿಯನ್ನು ಬೇರ್ಪಡಿಸಿ ಅದಕ್ಕೂ ತರಬೇತಿಯನ್ನು ನೀಡಲಾಗುತ್ತದೆ. ತಾಯಿಗೆ ಇಷ್ಟವಿದ್ದೋ, ಇಷ್ಟವಿಲ್ಲದೆಯೋ ತನ್ನ ಮರಿಯ ತರಬೇತಿಗೆ ಸಹಕರಿಸುತ್ತದೆ. ಪ್ರಾಯಶಃ ತನ್ನನ್ನು ನೋಡಿಕೊಳ್ಳುವ ಮನುಷ್ಯರು ತನ್ನ ಮರಿಯ ಜೀವಕ್ಕೆ ಏನೂ ಅಪಾಯ ಮಾಡಲಾರರು ಎಂಬ ನಂಬಿಕೆಯಿಂದಾಗಿಯೇ ತಾಯಿಯಾನೆ ಸಹಕರಿಸಬಹುದೇನೊ. ಸಾಮಾನ್ಯವಾಗಿ ಮರಿಯಾನೆ ಐದು ಆರು ವರ್ಷದ ಪ್ರಾಯಕ್ಕೆ ಬಂದಾಗ ಮೊಲೆ ಕುಡಿಯುವುದನ್ನು ನಿಲ್ಲಿಸಿ ತನ್ನ ಆಹಾರವನ್ನು ತಾನೇ ಸಂಪಾದಿಸಿಕೊಳ್ಳುತ್ತದೆ. ಆದರೆ ಮರಿ ಆನೆಗೆ ತರಬೇತಿ ನೀಡುವವರು ಆನೆಯ ಮರಿ ಇನ್ನೂ ಹಾಲನ್ನು ಕುಡಿಯುವುದನ್ನು ಪೂರ್ಣವಾಗಿ ಬಿಡದ ಪೂರ್ವದಲ್ಲಿಯೇ ತಾಯಿಯಿಂದ ಪ್ರತ್ಯೇಕಿಸಿ ತರಬೇತಿಯನ್ನು ನೀಡುತ್ತಾರೆ. ಸುತ್ತಲೂ ಬಿದಿರಿನ ತಡಿಕೆ ಕಟ್ಟಿದ ಸ್ಥಳದಲ್ಲಿ ಮರಿಯಾನೆಯನ್ನು ಕೂಡಿಹಾಕಲಾಗುತ್ತದೆ. ಮರಿ ಓಡಾಡುವ ಜಾಗದಲ್ಲಿ ದನದ ಚರ್ಮದಿಂದ ಮಾಡಿದ ಮೆತ್ತನೆಯ ಹಗ್ಗಗಳನ್ನು ಕುಣಿಕೆ ಮಾಡಿ ನೆಲದ ಮೇಲೆ ಇರಿಸಲಾಗಿರುತ್ತದೆ. ಆ ಹಗ್ಗದ ಮತ್ತೊಂದು ತುದಿ ಮಾವುತರ ಕೈಯೊಳಗಿರುತ್ತದೆ. ಹೀಗೆ ಇರಿಸಿದ ಸ್ಥಳಕ್ಕೆ ಮರಿ ಹೋಗಿ ಹಗ್ಗದ ಕುಣಿಕೆಯಲ್ಲಿ ಕಾಲಿರಿಸಿದ ತಕ್ಷಣ ಈಚೆ ಹಗ್ಗದ ತುದಿ ಹಿಡಿದು ಕುಳಿತ ವ್ಯಕ್ತಿಯು ಹಗ್ಗವನ್ನು ಎಳೆದು ಮರಿಯಾನೆಯ ಕಾಲುಗಳನ್ನು

ಬಂಧಿಸುತ್ತಾನೆ. ಹೀಗೆ ಬಂಧಿಸಿದ ಆನೆಯ ಮರಿಯನ್ನು ಬಿದಿರಿನ ತಡಿಕೆಯೊಳಗೆ ಕಳಿಸುವ ಪ್ರಯತ್ನ ಮಾಡಲಾಗುತ್ತದೆ. ಮರಿಯಾನೆ ಸುಮ್ಮನೆ ಒಳಹೋದರೆ ಪರವಾಗಿಲ್ಲ. ತಂಟೆ ಮಾಡಿದರೆ ಕೊಂಕಿ(ತರಬೇತಿಗೆ ಸಹಕರಿಸುವ ಆನೆ)ಯಿಂದ ಮರಿಯನ್ನು ತಡಿಕೆಯೊಳಗೆ ನೂಕಿಸಲಾಗುತ್ತದೆ. ಮರಿಗೆ ನೋವಾಗದಂತೆ ತನ್ನ ತಲೆಯಿಂದ ಕೊಂಕಿಯು ಮರಿಯನ್ನು ಒಳನೂಕುತ್ತದೆ. ತಡಿಕೆಯೊಳಗೆ ಮರಿಯಾನೆ ಸೇರಿದ ತರುವಾಯ 'ಕಾಲನ್ನು ಬಂಧಿಸಿದ ಹಗ್ಗವನ್ನು ತ್ರಿಕೋಣದ ಮೊನೆಗೆ ಕಟ್ಟಲಾಗುತ್ತದೆ.'[೧೧೮] ತರುವಾಯ ಮರಿಯನ್ನು ಒಲಿಸಿಕೊಳ್ಳಲು ಲಂಚಗಾರಿಕೆ ಪ್ರಾರಂಭವಾಗುತ್ತದೆ. ಆನೆಗೆ ಇಷ್ಟವಾದ ವಿವಿಧ ತಿಂಡಿಗಳನ್ನು ನೀಡಿ ಮರಿಯನ್ನು ಒಲಿಸಿಕೊಳ್ಳುವ ಪ್ರಯತ್ನ ನಡೆಯುತ್ತದೆ. ತನ್ನ ಸ್ವೇಚ್ಛತೆಗೆ ಭಂಗ ಬಂದುದರಿಂದ ಪ್ರಾರಂಭದಲ್ಲಿ ಮರಿಯು ಸಹಕರಿಸಲಾರದು. ಆದರೆ ನಿಧಾನವಾಗಿ ಅನಿವಾರ್ಯವಾಗಿ ಮಾವುತರು ನೀಡುವ ಹಣ್ಣು ಆಹಾರಗಳನ್ನು ಸ್ವೀಕರಿಸತೊಡಗುತ್ತದೆ. ಆ ತರುವಾಯ ಆನೆಯ ಮೇಲ್ಭಾಗದಲ್ಲಿ ಮರದ ರೆಂಬೆಯೊಂದಕ್ಕೆ ಹಗ್ಗ ಹಾಕಿ ಆ ಹಗ್ಗದ ಒಂದು ತುದಿಗೆ ಮರಿಯಾನೆಗೆ ಮಾವುತನಾಗುವ ಭಾವಿ ಮಾವುತನಿಗೆ ಕಟ್ಟಲಾಗಿರುತ್ತದೆ. ಮತ್ತೊಂದು ತುದಿಯು ಆನೆಯನ್ನು ಪಳಗಿಸುವ ಇಬ್ಬರು ಸಹಾಯಕರ ಕೈಯೊಳಗಿರುತ್ತದೆ. 'ಮಾವುತ ಮೇಲಿನಿಂದ ಸಂಜ್ಞೆ ಮಾಡಿದ ತಕ್ಷಣ ಮಾವುತನನ್ನು ಮರಿಯ ತಲೆಯ ಮೇಲ್ಭಾಗಕ್ಕೆ ಇಳಿಬಿಡಲಾಗುತ್ತದೆ. ಥೂತ್ ತೊಲಗಾಚೆ ಎಂಬಂತೆ ಆನೆಯ ಮರಿಯು ಕುದುರೆಯಂತೆ ನೆಗೆದಾಡತೊಡಗುತ್ತದೆ. ಆಗ ಭಾವಿ ಊಜಿ(ಮಾವುತ)ಯನ್ನು ಮೇಲೆತ್ತಬೇಕು. ಆದರೆ ಆ ಮರಿ ಶಾಂತವಾಗಿ ಇನ್ನೊಂದು ಬಾಳೆಹಣ್ಣು ತಿಂದೊಡನೆ ಮಾವುತನನ್ನು ಮತ್ತೆ ಆನೆಯ ತಲೆಭಾಗಕ್ಕೆ ಇಳಿಸಬೇಕು. ಹೀಗೆ ಹಲವಾರು ಬಾರಿ ಮಾಡಲಾಗುತ್ತದೆ. ಹೀಗೆ ಮಾಡಿದ ನಂತರ ಮಾವುತ ತಲೆಯ ಮೇಲೆ ಇಳಿಯುವುದು ಮರಿಯಾನೆಗೆ ಅಭ್ಯಾಸವಾಗುತ್ತದೆ. ಇಷ್ಟಾಗುವ ಅಷ್ಟೊತ್ತಿಗೆ ಮರಿಯಾನೆಗೆ ಆಯಾಸವಾಗಿರುತ್ತದೆ. ಮರಿಯಾನೆ ಸುಧಾರಿಸಿಕೊಳ್ಳಲು ಬಿಟ್ಟು ತರುವಾಯ ಮರಿಯಾನೆಯ ಬೆನ್ನ ಮೇಲಕ್ಕೆ ಭಾರವಾದ ಕೊರಡೊಂದನ್ನು ಇಳಿಬಿಡಲಾಗುತ್ತದೆ. ಆ ಕೊರಡನ್ನೂ ಬೆನ್ನಮೇಲೆ ಹೊರಿಸಲಾಗುತ್ತದೆ. ಆಗ ಮರಿಯಾನೆಯು ಕಾಡು ಕುದುರೆಯಂತೆ ನೆಗೆದಾಡತೊಡಗುತ್ತದೆ. ಒಂದೆರಡು ಗಳಿಗೆಗಳ ನಂತರ ಕೊರಡನ್ನು ಮೇಲೆತ್ತಲಾಗುತ್ತದೆ. ಆನೆ ಮರಿ ತನ್ನ ಒದರಾಟ ನೆಗೆದಾಟಗಳನ್ನು ನಿಲ್ಲಿಸಿದ ತಕ್ಷಣ ಮರಳಿ ಕೊರಡನ್ನು ಆನೆ ಮರಿಯ ಬೆನ್ನ ಮೇಲೆ ಇಳಿಬಿಡಲಾಗುತ್ತದೆ. ಹೀಗೆ ಕೆಲಹೊತ್ತು ನಡೆಯುತ್ತದೆ. ಈ ನಡುವೆ ಉದ್ದಕ್ಕೂ ಆನೆಮರಿಗೆ ತಿಂಡಿಕೊಟ್ಟು ಸವಿಯಾದ ಮೆದುನುಡಿಗಳಿಂದ ಮಾತನಾಡಿಸುತ್ತಾ ಇರುತ್ತಾರೆ. ಕೊನೆಗೆ ಬೇಸತ್ತ ಆನೆಮರಿ ಮುಂಗಾಲನ್ನು ಚಾಚಿ ಕುಳಿತುಬಿಡುತ್ತದೆ. ಒಟ್ಟಾರೆ ತನ್ನ ಬೆನ್ನ

ಮೇಲಿನ ಉಪದ್ರವ ತಪ್ಪಿಸಿಕೊಳ್ಳಲು ಮರಿ ಶತಪ್ರಯತ್ನ ಮಾಡುತ್ತಿರುತ್ತದೆ. ತರುವಾಯ ಆನೆಮರಿ ಸುಮ್ಮನಾದುದನ್ನು ಕಂಡು ತಾಹ್(ಮೇಲೇಳು) ಮ್ಹಿತ್(ಕುಳಿತುಕೋ) ಎಂದು ಹೇಳಲಾಗುತ್ತದೆ. ಕೊರಡಿನ ಭಾರ ಮೇಲೆತ್ತಿದ್ದಾಗ ತಾಹ್ ಎಂದೂ ಕೆಳಗಿಳಿಸಿದಾಗ ಮ್ಹಿತ್ ಎಂದು ಎಲ್ಲರೂ ಕೂಗುತ್ತಿರುತ್ತಾರೆ. ಇದಾದ ತರುವಾಯ ಸ್ವಲ್ಪ ಹೊತ್ತಿನ ತರುವಾಯ ರಾಟೆಗೆ ಕಟ್ಟಿದ ಮಾವುತ ಆನೆಯ ಮೇಲ್ಭಾಗದಲ್ಲಿ ಕುಳಿತುಕೊಳ್ಳುತ್ತಾನೆ. ಅವನು ತಾಹ್, ಮ್ಹಿತ್ ಮುಂತಾದ ಭಾಷಾಸಂಜ್ಞೆಗಳನ್ನು ನಿಧಾನವಾಗಿ ಆನೆಗೆ ಕಲಿಸತೊಡಗುತ್ತಾನೆ. ಈ ಕಲಿಕೆಗೆ ಸಾಧು ಆನೆಯಾದರೆ ಯಾವ ಹಿಂಸೆಯೂ ಇಲ್ಲದೆ ಹನ್ನೆರಡು ಗಂಟೆಯೊಳಗೆ ಕಲಿಸಲು ಸಾಕು. ಮೊಂಡು ಆನೆಗಳಾದರೆ ಮಧ್ಯರಾತ್ರಿಯವರೆಗೂ ಬಿದಿರಿನ ಪಂಜುಗಳ ಬೆಳಕಿನಲ್ಲಿ ತರಬೇತಿ ಸಾಗುತ್ತದೆ'.[೮೯] ಹೀಗೆ ಆನೆ ಬಿಡಾರದೊಳಗಿನ ಆನೆಮರಿಗಳಿಗೆ ತರಬೇತಿ ನೀಡಿ ಅವು ಪಳಗಿದ ನಂತರ ಅವುಗಳನ್ನು ನಿಧಾನಕ್ಕೆ ಚಿಕ್ಕ ಪುಟ್ಟ ಭಾರ ಎತ್ತುವ ಕೆಲಸಕ್ಕೆ ನೇಮಿಸಲಾಗುತ್ತದೆ. ಅವು ಪರಿಪೂರ್ಣವಾಗಿ ತರಬೇತಿ ಪಡೆದ ತರುವಾಯ ಭಾರದ ವಸ್ತುಗಳನ್ನು ಎತ್ತಿಸಲಾಗುತ್ತದೆ.

**ಕಾಡಾನೆಯನ್ನು ಸ್ವೀಕರಿಸುವ ಕ್ರಮ:** ಆನೆಗಳನ್ನು ಕಾಡಿನಲ್ಲಿ ಬಂಧಿಸಿ ಹಿಡಿದ ತರುವಾಯ ಸೂಕ್ತ ತರಬೇತಿಯನ್ನು ನೀಡಬೇಕಾಗುತ್ತದೆ. ತುಂಬಾ ಕುಶಾಗ್ರಮತಿಗಳಾದ ಆನೆಗಳು ಬಹುಬೇಗ ಮಾನವನಿಗೆ ಹೊಂದಿಕೊಳ್ಳುತ್ತವೆ. ಗಾತ್ರದಲ್ಲಿ ತುಂಬಾ ದೊಡ್ಡದಾದ ಪ್ರಾಣಿ ಅದಾಗಿದ್ದರೂ ಸಾಕಿದ ಒಡೆಯನಿಗೆ ತುಂಬಾ ಹೊಂದಿಕೊಂಡು ನಡೆಯುವ ಗುಣವನ್ನು ಆನೆಗಳು ಹೊಂದಿರುತ್ತವೆ. ಕಾಡಾನೆಗಳನ್ನು ಹಿಡಿದ ತರುವಾಯ ಅವುಗಳನ್ನು ಪಳಗಿಸಿ ತರಬೇತಿ ನೀಡುವ ಕ್ರಮವನ್ನೂ, ಅವುಗಳನ್ನು ವಿವಿಧ ಕೆಲಸಗಳಿಗೆ ತೊಡಗಿಸಲು ವಿವಿಧ ಭಾಷಾಸಂಜ್ಞೆಯನ್ನು ಮಾವುತನು ಹೇಗೆ ಬಳಸಬೇಕು ಎನ್ನುವ ಕುರಿತು ಮಾನಸೋಲ್ಲಾಸದಲ್ಲಿ ತಿಳಿಸಲಾಗಿದೆ. ಬಹುತೇಕ ಇಂದಿಗೂ ಮಾವುತರು ಅದೇ ರೀತಿಯ ಸಂಜ್ಞೆಗಳನ್ನು ಬಳಸುವುದು ಆಶ್ಚರ್ಯಕರವಾದ ವಿಚಾರವಾಗಿದೆ.

ಪ್ರಸ್ತುತವಾಗಿ ಹಾಸನ ಜಿಲ್ಲೆಯಲ್ಲಿ ಬೆಳೆನಾಶ ಹಾಗೂ ಪ್ರಾಣಹಾನಿ ಮಾಡಿದ ಪುಂಡಾಟ ನಡೆಸಿದ ಕಾಡಾನೆಗಳು ಎರಡೇ ತಿಂಗಳಲ್ಲಿ ಪಳಗಿದ್ದು, ಮಾವುತನ ಅಂಕುಶ ಪಾಠಕ್ಕೆ ತಲೆಬಾಗುತ್ತಿವೆ. ಈ ಪೈಕಿ ಮೂರು ಪುಂಡಾನೆಗಳನ್ನು ಬಂಧಮುಕ್ತಗೊಳಿಸಿ ಇತರ ಸಾಕಾನೆಗಳ ತಂಡಕ್ಕೆ ಸೇರಿಸಲಾಯಿತು(ವಿಜಯಕರ್ನಾಟಕ, ೮-೫-೨೦೧೪, ಪು.೨) ಎಂದು ಕಾಡಾನೆಗಳನ್ನು ಸೆರೆಹಿಡಿದು ಪಳಗಿಸಿ ತರಬೇತಿ ನೀಡಿದ ಬಗೆಯನ್ನು ಕಾಣುತ್ತೇವೆ.

ಸೋಮೇಶ್ವರನ ಪ್ರಕಾರ 'ಶುಭ ದಿನದಲ್ಲಿ, ಶುಭಕರವಾದ ಸ್ಥಳದಲ್ಲಿ, ಪ್ರಾತಃಕಾಲದಲ್ಲಿ ಆನೆಯನ್ನು ಉತ್ತರಾಭಿಮುಖವಾಗಿ ನಿಲ್ಲಿಸಿ ದ್ವಿಜಶ್ರೇಷ್ಠರಿಂದ ಸಾಮವೇದದ ಮಂತ್ರಗಳನ್ನು

ಹೇಳಬೇಕು. ದಧಿ–ದೂರ್ವಾಕ್ಷತೆಗಳಿಂದ, ಪುಷ್ಪ ಚಂದನಗಳಿಂದ, ಕುಂಕುಮಾದಿಗಳಿಂದ ರಾಜನು ಆನೆಯನ್ನು ನಾಲ್ಕು ದಿನದವರೆಗೂ ಪೂಜಿಸಬೇಕು. ಬಳಿಕ ಸಾಮವೇದದ ಮಂತ್ರದಿಂದ ಹೊಸ ಹುಟ್ಟನ್ನು ಪಡೆದ ಈ ಆನೆಯು ತನ್ನ ಅರಣ್ಯವಾಸದ ಸುಖವನ್ನು ತ್ಯಜಿಸಿ, ರಾಜಭವನದ ಹೊಸಬದುಕನ್ನು ಸ್ವೀಕರಿಸಬೇಕು[೧೨೦] (೨೮೪–೨೮೬).

'ಉತ್ತಮವಾದ ಶುಭ ದಿನದಲ್ಲಿ ಕಾಡಿನಲ್ಲಿ ಹಿಡಿದ ಆನೆಗಳ ಹಿಂಗಾಲುಗಳನ್ನು ಕಟ್ಟಬೇಕು. ಹಿಂಸೆಯಾಗದಂತೆ ದೃಢವಾಗಿ ಚರ್ಮದ ಸರಪಣಿಗಳಿಂದ ಅವುಗಳನ್ನು ಬಿಗಿಯಬೇಕು.

ಆನೆಯ ಮುಂಭಾಗದಲ್ಲಿ ಮೂವರು, ಕಿವಿಗಳೆರಡರ ಬಳಿ ಇಬ್ಬರು, ಹಿಂಭಾಗದಲ್ಲಿ ಇಬ್ಬರು– ಹೀಗೆ ಕ್ರಮವಾಗಿ ಏಳು ಜನ ಅಂಕುಶಧಾರಿಗಳನ್ನು ನೇಮಿಸಬೇಕು. ಎರಡೂ ಬದಿಗಳಲ್ಲಿ ಹೀಗೆ ನಿಯಮಿಸಲ್ಪಟ್ಟ ಬಳಿಕ ಆನೆಯು ಅಂಕುಶಧಾರಿಗಳಿಂದ ನಿಯಂತ್ರಿಸಲ್ಪಡುತ್ತದೆ. ಬಳಿಕ ಆನೆಗೆ ತನ್ನ ಕಾರ್ಯದ ಜ್ಞಾನವುಂಟುಮಾಡಲು ಭಾಷೆಯನ್ನು ಕಲಿಸಬೇಕು'[೧೨೧] ಎಂದು ಹೇಳುತ್ತಾನೆ(೨೮೭–೨೯೦). ಆನೆಗಳಿಗೆ ಘಟನೆಗಳನ್ನು ಮತ್ತು ಸ್ಥಳಗಳನ್ನು ನೆನಪಿಡುವ ಅಗಾಧ ಶಕ್ತಿ ಇದೆ. 'ತರಬೇತಿ ಅವಧಿಯಲ್ಲಿ ಸುಮಾರು ನಲವತ್ತೈದು ಆಜ್ಞೆಗಳನ್ನು ಸಾಂಕೇತಿಕ ಭಾಷೆಯಲ್ಲಿ ಕಲಿಯಬೇಕಾಗುವುದು. ಮಾವುತರಿಗೆ ಹಿಂದುಸ್ತಾನಿಯ ಸೋಕಿದ್ದು ಉರ್ದು, ಮಲೆಯಾಳಂ, ತಮಿಳು, ಕನ್ನಡದ ಒತ್ತುಗಳ ಕಲ್ಪನೆಯೂ ಇದೆ(ಚಲ್, ನಡಿ, ಕುಡಿ, ಖಡೆರೆಹೋ, ಇತ್ಯಾದಿ). ಈ ಬಗೆಯ ಶಬ್ದಗಳಿಂದ ಆನೆಗಳು ತಿರುಗುವ, ಕೂಡ್ರುವ, ನಿಲ್ಲುವ, ಸೊಂಡಿಲು ಎತ್ತುವ, ಸಲಾಂ ಮಾಡುವ, ಮರ ದಿಮ್ಮಿಗಳನ್ನು ಎಳೆಯುವ, ಭಾರ ಎತ್ತುವ, ಬಾಯಿ ತೆರೆಯುವ, ನೂಕುವ, ಕಾಲಿನಿಂದ ತುಳಿಯುವ, ಜಗ್ಗುವ, ಕೀಳುವ ಇನ್ನೂ ಹಲವಾರು ಕೆಲಸ ಕಾರ್ಯಗಳನ್ನು ಮಾಡಬಲ್ಲದು'.[೧೨೨] ಆನೆಯು ತಾನು ಮಾಡಬೇಕಾದ ಕೆಲಸವನ್ನು ಮಾಡಿ ಪೂರೈಸಿದಾಗ ಅದಕ್ಕೆ ಪ್ರೋತ್ಸಾಹಕ ತಿಂಡಿಗಳಾದ ಕಬ್ಬಿನ ತುಂಡು, ಬಾಳೆಹಣ್ಣು, ಬೆಲ್ಲ ಇತ್ಯಾದಿ ಇಷ್ಟವಾದ ಆಹಾರವನ್ನು ನೀಡಿ ಸಂತೈಸಬೇಕು.

**ಆನೆಯ ಭಾಷಾಸಂಜ್ಞೆಯ ತರಬೇತಿ**

ಆನೆಗಳಿಗೆ ಅರ್ಥವಾಗುವುದು ಯಾವ ಭಾಷೆಯೆಂದು ಗಮನಿಸಿದರೆ ಅಲ್ಲಿ ಔರಂಗಜೇಬ ಹಾಗೂ ಚಂದ್ರಗುಪ್ತಮೌರ್ಯನ ಹೆಸರು ಪ್ರಸ್ತಾಪವಾಗುತ್ತದೆ. ಇವರಿಬ್ಬರಿಗೂ ಆನೆಗಳ ಬಗ್ಗೆ ವಿಪರೀತ ಆಸಕ್ತಿ. ಇದರ ಫಲವಾಗಿಯೇ ಅವುಗಳನ್ನು ಪಳಗಿಸಲು ಶುರು ಮಾಡಿದರು. ಔರಂಗಜೇಬ್‌ನಿಂದಾಗಿ ಮಾವುತರಾದವರೆಲ್ಲ ಹೆಚ್ಚಾಗಿ ಮುಸ್ಲಿಮರೇ. ಆನೆಗಳ

ಜೊತೆ ಅವರ ಮಾತುಕತೆಯಲ್ಲ ಹೆಚ್ಚಾಗಿ ನಡೆದಿದ್ದು ಉರ್ದು ಮತ್ತು ಮರಾಠಿಯಲ್ಲಿ. ಈಗಲೂ ಆನೆಗಳಿಗೆ 'ಅವ್' ಮತ್ತು 'ಸರಕ್' ಎನ್ನುವ ಪದಗಳು ಥಟ್ಟನೆ ಅರ್ಥವಾಗುತ್ತದೆ. ಈಗಲೂ ಮಾವುತರಲ್ಲಿ ಮುಸ್ಲಿಮರ ಸಂಖ್ಯೆ ಗಣನೀಯವಾಗಿದೆ. ಇನ್ನು ಚಂದ್ರಗುಪ್ತನ ಮೌರ್ಯನ ಆಸಕ್ತಿಯ ಫಲವಾಗಿ ಬಿಹಾರಿಗಳು ಮತ್ತು ಬಂಗಾಳದವರಿಗೂ ತರಬೇತಿ ದೊರೆಯಿತು. ಆಗ ಅಲ್ಲೆಲ್ಲ ಮಾವುತರ ಕಸುಬು ಬಂಗಾಳಿ ಮೂಲಕ ನಡೆಯಿತು. ಕರ್ನಾಟಕದಲ್ಲಿ ಆನೆಯ ಲೋಕದಲ್ಲಿ ಬಂಗಾಳಿ ಪ್ರಭಾವ ತುಂಬಾ ಇದೆ. ಆನೆಯ ಬಗ್ಗೆ ನಮಗೆ ಅರಿವು ಇರುವುದೇನೆಂದರೆ ಜೇನುಕುರುಬರ ಬಗ್ಗೆಯೇ ಆಗಿದೆ. ನಮ್ಮ ರಾಜ್ಯದ ದಕ್ಷಿಣ ಭಾಗದ ಆನೆ ಶಿಬಿರಗಳಲ್ಲಿ ಶತಮಾನದಿಂದಲೂ ಇವರಿಗೆ ಇದೇ ಕಾಯಕ. ಇದರಿಂದ ಈ ಭಾಗದ ಆನೆಗಳು ಜೇನುಕುರುಬರ ಭಾಷೆಯ ಸೂಚನೆಗಳನ್ನು ಥಟ್ಟನೆ ಪಾಲಿಸುತ್ತವೆ. ಲಾ ಹಾಗೂ ಮತ್ ಎಂದರೆ ಬಾ ಇಲ್ಲವೇ ಮುಂದೆ ಹೋಗು, ಸೈ ಹಾಗೂ ಸರಕ್ ಎಂದರೆ ಹಿಂದಕ್ಕೆ ಸರಿ ಅರೇ ಅಂದರೆ ನಿಲ್ಲು. ಹೀಗೆ ಆನೆಗಳ ಶಬ್ದಕೋಶ ತೆರೆದುಕೊಳ್ಳುತ್ತ ಹೋಗುತ್ತದೆ. ಜೇನುಕುರುಬರ ಮೂರನೇ ತಲೆಮಾರಿನ ಕುಡಿಗಳು ಗಜಪಡೆಯ ಸೇವಕರೇ ಆದರೆ ಹೊಸ ಪೀಳಿಗೆಯಲ್ಲಿ ಮೂಲಭಾಷೆ ನಶಿಸುತ್ತಾ ಕನ್ನಡ ಬೆಳೆಯುತ್ತಿದೆ. ಹೀಗಾಗಿ ಈಗ ಆನೆಗಳು ಕನ್ನಡ ಕಲಿಯತೊಡಗಿವೆ. ದುಬಾರೆ, ಮತ್ತಿಗೋಡು, ಮುರ್ಕಲ, ಬಳ್ಳೆ, ಸುಂಕದಕಟ್ಟೆ, ಕ್ಯಾತೇದೇವರಗುಡಿ, ಸಕ್ರೆಬಯಲು ಸೇರಿ ಕರ್ನಾಟಕದಲ್ಲಿ ಆರೇಳು ಕಡೆ ಆನೆ ಶಿಬಿರಗಳಿವೆ. ನೂರಕ್ಕೂ ಹೆಚ್ಚು ಆನೆಗಳು ಇಲ್ಲಿನ ಖಾಯಂ ಶಿಬಿರಾರ್ಥಿಗಳು. ಆನೆಗಳಿಗೆ ಇವನೇ ನನ್ನ ಮಾವುತ/ಕಾವಡಿ ಎಂದು ತಿಳಿಯುವುದು ಆತನ ದೇಹದ ವಾಸನೆ ಹಾಗೂ ಧ್ವನಿಯಿಂದ ಮಾತ್ರ. ಸರಕ್ ಲಾ ಎನ್ನುವ ಧ್ವನಿ ಕೇಳುತ್ತಲೇ ಅದು ಜಾಗೃತವಾಗುತ್ತವೆ. ಇಷ್ಟೆಲ್ಲದರ ಮಧ್ಯೆಯೂ ಆನೆ ಒಮ್ಮೊಮ್ಮೆ ನಿಯಂತ್ರಣ ಕಳೆದುಕೊಂಡರೆ ಆಗ ಬಳಸುವುದು ಅಂಕುಶ. ಇದನ್ನು ಮೀರಿ ಆನೆಗಳು ಉಗ್ರ ರೂಪ ತಾಳುವುದು ಇದೆ. ಆಗ ಯಾರು ಅವುಗಳನ್ನು ನಿಯಂತ್ರಿಸಲು ಆಗುವುದಿಲ್ಲ. ಆನೆಗಳನ್ನು ನಿಯಂತ್ರಿಸುವ ಕೌಶಲ್ಯ, ಅವುಗಳ ತಾಲೀಮು. ಭಾಷಾ ಪ್ರಾವಿಣ್ಯ ಮಾವುತರ ವಂಶಪರಂಪರೆಯ ರೋಚಕತೆಯನ್ನು ತೆರೆಯುತ್ತ ಹೋಗುತ್ತದೆ(ವಿಜಯ ಕರ್ನಾಟಕ, ೨-೧೦-೨೦೧೩).

ಪಳಗಿಸಿದ ಆನೆಗೆ ಮಾವುತ ಹೇಳಿದಂತೆ ನಡೆದುಕೊಳ್ಳಲು ಸಂಜ್ಞಾ ಭಾಷೆ ಕಲಿಸಲಾಗುತ್ತದೆ. ಪಳಗಿದ ಆನೆಯು ಮಾವುತನ ಸಂಜ್ಞಾಭಾಷೆ, ಸ್ಪರ್ಶಜ್ಞಾನಗಳಿಂದ ಅವನು ಹೇಳಿದಂತೆ ವರ್ತಿಸುತ್ತದೆ. ಸಾಮಾನ್ಯವಾಗಿ ಆನೆಗಳ ಮಾವುತರು ಗುಡ್ಡಗಾಡು ಅರಣ್ಯವಾಸಿಗಳಾಗಿರುತ್ತಾರೆ.

ಕರ್ನಾಟಕದಲ್ಲಿ ಆನೆಗಳ ಮಾವುತರಾಗುವವರು ಸಾಮಾನ್ಯವಾಗಿ ಆನೆಗಳು ನೆಲೆಸಿರುವ ಕಾಡುಗಳಲ್ಲಿ ವಾಸಿಸುವ ಸೋಲಿಗ, ಜೇನುಕುರುಬ ಮುಂತಾದ ಬುಡಕಟ್ಟು ಸಮುದಾಯದವರೇ ಆಗಿರುತ್ತಾರೆ. ಅವರು ತಮ್ಮ ಭಾಷಾಪದಗಳನ್ನು ಬಳಸಿ ಆನೆಗೆ ಭಾಷಾ ಸಂಜ್ಞೆಗಳ ತರಬೇತಿ ನೀಡುವುದು ಸಹಜ. ಸೋಮನಾಥನು ತನ್ನ ಮಾನಸೋಲ್ಲಾಸ ಕೃತಿಯಲ್ಲಿ ಆನೆಗಳಿಗೆ ಕಲಿಸುವ ಭಾಷಾಸಂಜ್ಞೆಗಳ ಕುರಿತು ವಿವರಿಸಿದ್ದಾನೆ.

"ಆನೆಗೆ ಸಂಚರಿಸಲು ಹೇಳುವಾಗ ***ಏಹಿ, ಏಹಿ*** ಎಂತಲೂ, ದೂರ ಸರಿಸುವಾಗ ***ಹೇಡೆ, ಹೇಡೆ*** ಎಂತಲೂ ಗಜಶಿಕ್ಷಾ ವಿಶಾರದರು ಹೇಳಬೇಕು.

ಎರಡೂ ಬದಿಗಳಿಗೆ ಸರಿಯಲು ಹೇಳುವಾಗ ***ಫಾಪ*** ಎನ್ನಬೇಕು. ಕುಳಿತುಕೊಳ್ಳಲು ಹೇಳುವಾಗ ***ವಿಶ್ವೀ*** ಎಂದು ಹೇಳಬೇಕು.

ಮಲಗಿರುವ ಆನೆಯನ್ನು ಮೇಲೆಬ್ಬಿಸಲು ***ನುಹ್ನಃ*** ಎನ್ನಬೇಕು. ಸೊಂಡಿಲನ್ನು ಸಂಕೋಚಗೊಳಿಸಿಕೊಳ್ಳಲು ***ವಪ್‌ಡಿಹರ*** ಎಂದು ಎರಡು ಸಲ ಹೇಳಬೇಕು.

ಸೊಂಡಿಲನ್ನು ಮೇಲೆತ್ತಲು ***ಭರೀಹ*** ಎನ್ನಬೇಕು. ಸ್ತಂಭಾದಿಗಳನ್ನು ಎತ್ತುವಾಗ ***ಹಿಜ್ಜ-ಹಿಜ್ಜ*** ಎಂದು ಹೇಳಬೇಕು.

ಆನೆಯು ಮುಂಗಾಲುಗಳನ್ನು ಮೇಲೆತ್ತುವಾಗ ಮಾವುತರು ***ಭಲೆ-ಭಲೆ*** ಎನ್ನಬೇಕು. ಪಶ್ಚಿಮ ದಿಕ್ಕಿಗೆ ನಮಸ್ಕರಿಸುವಾಗ ***ಕಿಃ- ಕಿಃ*** ಎಂದು ಹೇಳಬೇಕು.

ಏನನ್ನಾದರೂ ಬೇಡುವಾಗ ಮಾವುತನು ***ದೇ-ದೇ*** ಎಂದು ಹೇಳಬೇಕು. ಸೊಂಡಿಲಿನಿಂದ ಏಟು ಹಾಕಿಸುವಾಗ ***ಹೇ-ಹೈ*** ಎಂದು ಎರಡು ಸಲ ಹೇಳಬೇಕು.

ಆನೆಯು ಆಹಾರವನ್ನು ಮೆಲ್ಲುವಾಗ ಆಹಾರ ನುಂಗುವವರೆಗೂ ***ದ್ವಿಃ- ದ್ವಿಃ*** ಎಂದು ಹೇಳಬೇಕು. ತಿನ್ನುವುದನ್ನು ಬಿಡಿಸುವಾಗ ***ಚುರು-ಚುದ*** ಎಂದು ಹೇಳಬೇಕು.

ಆನೆಗೆ ಬೇಡ ಎಂದು ಹೇಳುವಾಗ ***ಮಾ-ಮಾ*** ಎಂದು ಹೇಳಲ್ಪಡಬೇಕು. ಭೂಮಿಗೆ ದಂತವನ್ನು ಉಜ್ಜುವಾಗ ***ಹಿಗ-ಹಿಗ*** ಎಂದು ಹೇಳಬೇಕು.

ಹೊರಗೆ ಸೊಂಡಿಲಿನಿಂದ ಅಪ್ಪಳಿಸುವಾಗ ***ಹೂ-ಹೂ*** ಎಂದು ಹೇಳಬೇಕು. ಮೆಲ್ಲಗೆ ಸಾಗಲು ಹೇಳುವಾಗ ***ಲೇಚ-ಲೇಚ*** ಎಂದು ಹೇಳಬೇಕು.

ಮುಂದೆ ಬರಲು ಆಹ್ವಾನಿಸುವಾಗ ***ಇಚ್ಚ-ಭೂಭ*** ಎಂದು ಮಾವುತರು ಕರೆಯಬೇಕು. ಏನನ್ನಾದರೂ ಸ್ವೀಕರಿಸಲು ಹೇಳುವಾಗ ***ಫೇ-ಫೇ*** ಎಂದು ಹೇಳಬೇಕು. ಹೀಗೆ ಆನೆಗೆ ಪ್ರಾಥಮಿಕ ಹಂತದಲ್ಲಿಯೇ ಭಾಷೆಯನ್ನು ಕಲಿಸಬೇಕು'[೧೨೩]

ಆನೆಗೆ ಬೋಧನೆಯನ್ನು ಅರ್ಥ ಮಾಡಿಕೊಳ್ಳುವ, ಕಲಿಯುವ ಹಾಗೂ ಕಲಿತ ಚಮತ್ಕಾರಗಳನ್ನು ಚಾಚೂ ತಪ್ಪದೆ ಮಾಡುವ ಕಲೆ ಗೊತ್ತಿದೆ. ಉತ್ತಮ ರೀತಿಯಲ್ಲಿ ಪಳಗಿಸಿದ ಆನೆಯು ಸುಮಾರು ಅರವತ್ತರಿಂದ ನೂರರಷ್ಟು ಶಬ್ದಗಳನ್ನೂ ಸಂಜ್ಞೆಗಳನ್ನೂ ಗುರುತಿಸಬಲ್ಲದು. ಆನೆಗಳು ಸುಧೀರ್ಘವಾದ ನೆನೆಪಿನ ಶಕ್ತಿಯನ್ನು ಹೊಂದಿವೆ ಎಂದು ಅನುಭವಿ ಮಾವುತರು ತಿಳಿಸುತ್ತಾರೆ. ಆನೆಗಳು ತರಬೇತಿಯಲ್ಲಿ ಪಡೆದ ಸಂಜ್ಞೆಗಳನ್ನು ಕಲಿಯುತ್ತವೆಯಾದರೂ ಅವು ತಮ್ಮ ತಮ್ಮೊಳಗೆ ಸಂಭಾಷಿಸುವುದನ್ನು ಬಾಲ್ಯದಿಂದಲೇ ಕಲಿತಿರುತ್ತವೆ. ಉದಾಹರಣೆಗೆ ಹೆಣ್ಣಾನೆಗಳು ತಮ್ಮ ಮರಿಗಳನ್ನು ಹತ್ತಿರ ಕರೆಯಲು ತಮ್ಮ ಕಿವಿಗಳನ್ನು ಬಡಿದುಕೊಳ್ಳುತ್ತವೆ. ಬೀಸಣಿಕೆಯಂತೆ ಕಿವಿ ಬಡಿದುಕೊಂಡರೆ ಆನೆ ಮರಿಗಳನ್ನು ಹತ್ತಿರ ಕರೆಯುತ್ತವೆಂದೇ ಅರ್ಥ. ಈ ಸಂಜ್ಞೆಯನ್ನು ಅರಿತ ಮರಿಯಾನೆ ತಾಯಿಯ ಬಳಿಗೆ ಬರುತ್ತವೆ. ಪರಿಚಯಸ್ಥ ಆನೆಗಳು ಪರಸ್ಪರ ಭೇಟಿಯಾದಾಗ ಸಣ್ಣಗೆ ಚೀರುತ್ತವೆ. ತನ್ನ ಜಾತಿಗೆ ಸೇರದ ಬೇರೆ ಅಪಾಯಕಾರಿ ಪ್ರಾಣಿ ಅಥವಾ ಮನುಷ್ಯನು ಎದುರಾದಾಗ ಚಕಿತಗೊಂಡ ಆನೆಯು ಗುರುಗುಟ್ಟುತ್ತವೆ ಇಲ್ಲವೇ ಜೋರಾಗಿ ಸೊಂಡಿಲೆತ್ತಿ ಕಹಳೆಯಂತೆ ಧ್ವನಿ ಹೊಮ್ಮಿಸುತ್ತವೆ. ಇದು ಆನೆಯ ಪಲಾಯನ ಅಥವಾ ಸಂಭವನೀಯ ದಾಳಿಯನ್ನು ಸೂಚಿಸುತ್ತದೆ. ಬೆದರಿಕೆಯುಂಟುಮಾಡಲು ತಮ್ಮ ಸೊಂಡಿಲಿನಿಂದ ಬೇರೆ ಆನೆಗಳ ಸೊಂಡಿಲಿಗೆ ಬಡಿದು ಟಯರುಗಳಿಗೆ ಹೊಡೆದಾಗ ಉಂಟಾಗುವಂತಹ ಶಬ್ದವನ್ನು ಉಂಟುಮಾಡುತ್ತವೆ. ತಾವು ಅಪಾಯದಲ್ಲಿದ್ದಾಗ ಆರ್ತಧ್ವನಿಯ ನರಳಿಕೆಯ ಶಬ್ದವನ್ನು ಹೊರಚೆಲ್ಲುತ್ತವೆ. ಈ ಶಬ್ದಗಳನ್ನು ಅಥವಾ ಧ್ವನಿಯನ್ನು ಹೊರಹೊಮ್ಮಿಸಲು ಸೊಂಡಿಲನ್ನೇ ಆಶ್ರಯಿಸಿವೆ.

**ಆನೆಯ ದೈಹಿಕ ಸಂಜ್ಞಾ ತರಬೇತಿ**

ಆನೆಯ ದೈಹಿಕ ತರಬೇತಿಯ ಕ್ರಮದ ಕುರಿತು ಸೋಮೇಶ್ವರನು ಮಾನಸೋಲ್ಲಾಸದಲ್ಲಿ ವಿವರಿಸಿದ್ದಾನೆ.

'ಸೊಂಡೆಯ ಮುಂಭಾಗದಲ್ಲಿರುವವನು ಮೆಲ್ಲಗೆ ಅಂಕುಶದಿಂದ ಆನೆಗೆ ತಿವಿಯಬೇಕು. ಅದರ ಭಯದಿಂದ ಆನೆಯು ಸೊಂಡಿಲನ್ನು ಎಳೆದುಕೊಂಡು ನಿಲ್ಲುತ್ತದೆ.

ನಂತರ ಮುಖದ ಪಕ್ಕದಲ್ಲಿದ್ದವರಿಬ್ಬರು ಅಂಕುಶಗಳಿಂದ ದವಡೆಗಳಿಗೆ ತಿವಿದಾಗ ಮುಖವನ್ನು ಮೇಲೆತ್ತಿ ಹೆದರಿ ಆನೆಯು ಸರಿದು ನಿಲ್ಲುತ್ತದೆ.

ಬಳಿಕ ಕಿವಿಯ ಹತ್ತಿರ ಇದ್ದವನು ಕಿವಿಯ ಕೆಳಗೆ ಅಂಕುಶವನ್ನು ತಿವಿದಾಗ ಆನೆಯು ಹೆದರಿ ಕಿವಿಯನ್ನು ನಿಮಿರಿಸಿ ನಿಲ್ಲುತ್ತದೆ.

ಅಂಕುಶದ ತಿವಿತಕ್ಕೆ ಹೆದರಿ ಆನೆಯು ಒಂದು ವೇಳೆ ಹಿಂದೆ ಸರಿದರೆ ಪಕ್ಕದಲ್ಲಿದ್ದವರು ಪುನಃ ಅದಕ್ಕೆ ಅಂಕುಶದಿಂದ ಚುಚ್ಚಬೇಕು.

ಆಗ ಒಂದು ಸ್ಥಾನದಲ್ಲಿ ಸ್ಥಿರವಾಗಿ ನಿಂತುಕೊಂಡ ಆನೆಯು ಚುರುಕಾಗುತ್ತದೆ. ಹೀಗೆ ನಿಯಂತ್ರಿತವಾದ ಆನೆಗೆ ಸರ್ವವಿಧದ ಕಾರ್ಯಗಳಲ್ಲಿ ತರಬೇತಿ ನೀಡಬೇಕು' ಎಂದು ಹೇಳಲಾಗಿದೆ.[೧೨೪] ಹೀಗೆ ಪ್ರಾಚೀನ ಗ್ರಂಥಗಳಿಂದ ಹಿಡಿದು ಇಲ್ಲಿಯವರೆಗೂ ಆನೆಗಳ ಕುರಿತು ಮಾಹಿತಿ ನೀಡುವ ಕೃತಿಗಳಲ್ಲಿ ವಿವರಗಳು ದೊರೆಯುತ್ತವೆ.

## ಆನೆಗೆ ಯುದ್ಧ ತಂತ್ರಗಳಲ್ಲಿ ತರಬೇತಿ ನೀಡುವ ಕ್ರಮ

ಆನೆಗೆ ಯುದ್ಧ ತಂತ್ರಗಳಲ್ಲಿ ತರಬೇತಿ ನೀಡುವ ಕ್ರಮವು ಈ ಕೆಳಗಿನಂತಿದೆ. ದಕ್ಷನಾದ ತರಬೇತಿದಾರನು ಕೈಗಳಲ್ಲಿ ಭಸ್ತ್ರಿಕೆ(ಗಾಳಿ ತುಂಬಿದ ಚರ್ಮದ ಚೀಲ)ಗಳನ್ನು ಹಿಡಿದುಕೊಂಡು ಆನೆಯ ಎದುರುಗಡೆ ಬಂದು ಎರಡೂ ಕೈಗಳಲ್ಲಿದ್ದ ಭಸ್ತ್ರಿಕೆಗಳನ್ನು ಚಪ್ಪರಿಸಿ ಸಪ್ಪಳ ಮಾಡಿ ಒಂದು ಭಸ್ತ್ರಿಕೆಯನ್ನು ಮೊದಲಿಗೆ ಆನೆಗೆ ತೋರಿಸಬೇಕು. ಆನೆಗೆ ಭಸ್ತ್ರಿಕೆಯನ್ನು ಹೊಡೆಯಲು ಮಾವುತನು ಹೂಹೂಕಾರಗಳ ಮೂಲಕ ಪ್ರಚೋದಿಸಬೇಕು. ಸುರುಳಿ ಸುತ್ತಿದ ತನ್ನ ಸೊಂಡಿಲನ್ನು ಬಿಚ್ಚಿ ಮೇಲೆ ಕುಳಿತ ಮಾವುತನ ಪ್ರೇರೇಪಣೆಯಿಂದ ಆನೆಯು ಬಿಚ್ಚಿದ ಸೊಂಡಿಲಿನಿಂದ ಆ ಭಸ್ತ್ರಿಕೆಯನ್ನು ಹೊಡೆಯಬೇಕು.

ತಾನು ಕಲಿಸಿದ ಮಾತುಗಳಿಂದ ಮಾವುತನು ಆನೆಯನ್ನೊಮ್ಮೆ ಚಪ್ಪರಿಸಿ ಆ ಭಸ್ತ್ರಿಕೆಯನ್ನು ಸೊಂಡಿಲಿನಿಂದ ದೃಢವಾಗಿ ಪ್ರಹಾರ ಮಾಡಿಸಬೇಕು. ಆಗ ಎರಡೂ ಕಡೆಗೆ ಭಸ್ತ್ರಿಕೆಗಳನ್ನು ಹಿಡಿದುನಿಂತವರು ತಮ್ಮ ಕಡೆ ಆನೆಯ ಗಮನವನ್ನು ಸೆಳೆದುಕೊಳ್ಳುತ್ತಾರೆ. ಆಗ ಆನೆಯು ತನ್ನ ಸೊಂಡಿಲಿನಿಂದ ಮೊದಲು ಒಂದು ಭಸ್ತ್ರಿಕೆಯನ್ನು ಹೊಡೆದುರುಳಿಸಿ ಮರಳಿ ಮತ್ತೊಂದನ್ನು ರಭಸವಾಗಿ ಹೊಡೆದುರಳಿಸುತ್ತದೆ.

ಈ ಕ್ರಮದಿಂದ ಭಸ್ತ್ರಿಕೆಗಳನ್ನು ಹಿಡಿದುಕೊಂಡು ಮೂವರು, ನಾಲ್ವರು, ಐವರು ಮಾವುತರು ಆನೆಗೆ ತಮ್ಮ ತಮ್ಮ ಭಸ್ತ್ರಿಕೆಗಳನ್ನು ತೋರಿಸುತ್ತಾ ನಿಲ್ಲುತ್ತಾರೆ. ಆನೆಯ ಮೇಲಿರುವ ಮಾವುತನು ಬಿಚ್ಚಿದ ಸೊಂಡಿಲಿನಿಂದ ಒಂದು ಭಸ್ತ್ರಿಕೆಯನ್ನು ಸುರಳಿ ಸುತ್ತಿದ ಸೊಂಡಿಲಿನಿಂದ ಮತ್ತೊಂದು ಭಸ್ತ್ರಿಕೆಯನ್ನು–ಹೀಗೆ ಭಸ್ತ್ರಿಕೆಗಳನ್ನು ಹೊಡೆಸಬೇಕು. ಹೀಗೆ ಹೊಡೆದು ಅಭ್ಯಾಸವಾದ ಬಳಿಕ ಆನೆಯು ಪ್ರಹರಕಾರ್ಯದಲ್ಲಿ ದಕ್ಷವಾಗುತ್ತದೆ. ಆಮೇಲೆ ಆನೆ, ಕುದುರೆ, ಒಂಟೆ, ಮನುಷ್ಯ ದೇಹಗಳನ್ನು(ಯುದ್ಧದಲ್ಲಿ) ಪ್ರಹರಿಸುತ್ತದೆ.

ಬಳಿಕ ತಜ್ಞರಾದ ತರಬೇತಿದಾರರು ಅಂಗಧಾರಣ(ಸಂಕೇತ)ಗಳಿಂದ ಆನೆಗೆ ಮೇಲಿನ ಕ್ರಮದಲ್ಲಿ ತರಬೇತಿ ನೀಡಬೇಕು. ಆನೆಗೆ ಪ್ರಿಯವಾದ ಹುಲ್ಲು, ಬೆಲ್ಲ, ಅಕ್ಕಿ, ಕಬ್ಬು

ಇತ್ಯಾದಿಗಳನ್ನು ತೋರಿಸುತ್ತ ಸೊಂಡಿಲನ್ನು ಚಾಚಿ ನಿಂತ ಆನೆಗೆ ಆಶೆ ಹುಟ್ಟಿಸಿ ಆ ಸೊಂಡಿಲಿನಿಂದ ತನ್ನ ಶರೀರವನ್ನು ಸುತ್ತುವಂತೆ ಮಾಡಿ ಆನೆಗೆ ಹುಲ್ಲಿನ ಆಶೆ ತೋರಿಸಬೇಕು.

ಸೊಂಡಿಲಿನಿಂದ ಸುತ್ತಿಸಿಕೊಂಡ ಮಾವುತನು ತನ್ನ ಕೈಯ್ಯಲ್ಲಿದ್ದ ಹುಲ್ಲನ್ನು ಆನೆಗೆ ಕೊಡಬೇಕು. ಆಗ ಇವನ ಕೈಯ್ಯನ್ನು ಚಪ್ಪರಿಸಿ ತಾನೇ ಸೊಂಡಿಲನ್ನು ಎತ್ತಿಕೊಂಡು ಹೋಗುತ್ತದೆ.[೧೨೫]

ಅಂಕುಶಗಳಿಂದ ನಿಯಂತ್ರಿತವಾದ ತಿವಿತದಿಂದ ಪೀಡಿತವಾದ ಹಿಗ–ಹಿಗ ಎಂದು ಹೇಳಿಸಿಕೊಳ್ಳಲ್ಪಟ್ಟ ಆನೆಯು ಮಾವುತನನ್ನು ದೃಢವಾಗಿ ಎತ್ತಿಹಿಡಿದು ತನ್ನ ಮುಂಗಾಲುಗಳನ್ನು ಅಂಕುಚನ ಮಾಡಿ ಮುಖವನ್ನು ಭೂಮಿಯಲ್ಲಿ ಕೆಳಗಿರಿಸಿ ತರಬೇತಿದಾರ ಮಾವುತನನ್ನು ಸೊಂಡಿಲಿನಿಂದ ಸುತ್ತುತ್ತದೆ. ಆಮೇಲೆ ಕವಚವನ್ನು ತೊಡಿಸಿದ ಒಂದು ವಿಚಿತ್ರ ಆಕೃತಿಯ ಪ್ರತಿರೂಪವನ್ನು ಮಾಡಿ ವಧೆ ಮಾಡಲು ಸಿದ್ಧವಾದ ಆನೆಯ ಎದುರಿಗೆ ಇರಿಸಬೇಕು. ವಧಾರ್ಕ್ರಮದಲ್ಲಿ ತರಬೇತಿ ಪಡೆದ ಆನೆಯು ತನ್ನ ಎದುರಿಗೆ ಇರಿಸಿದ ಆಕೃತಿಯನ್ನು ಸೊಂಡಿಲಿನಿಂದ ಅಪ್ಪಳಿಸಿ ಕೋರೆಗಳಿಂದ ಸೀಳಿ ಮುಂಗಾಲು ಹಿಂಗಾಲುಗಳಿಂದ ಹೊಸಕಿ ಹಾಕಿ ಆಕೃತಿಯನ್ನು ಪುಡಿ ಮಾಡಿ ಬಿಡುತ್ತದೆ. ಹೀಗೆ ಪ್ರತಿಕೃತಿಯನ್ನು ಮರ್ದನ ಮಾಡುವುದನ್ನು ತರಬೇತಿಗೊಳಿಸಿದ ಆನೆಯು ಯುದ್ಧರಂಗದಲ್ಲಿ ಎದುರಾಳಿಯನ್ನು ಸಾಕ್ಷಾತ್ ಯಮನಂತೆ ಕೊಂದುಹಾಕುತ್ತದೆ ಎಂಬ ತರಬೇತಿಯ ವಿವರಗಳನ್ನು ಮಾನಸೋಲ್ಲಾಸ ಕೃತಿಯಲ್ಲಿ ಉಲ್ಲೇಖಿಸಿದೆ.

ಹಳೆಯದಾದ ಚೌಕಾಕಾರದ ವಸ್ತುವೊಂದನ್ನು ತೆಗೆದುಕೊಂಡು ಅದರಲ್ಲಿ ಸ್ವಲ್ಪ ಉಸುಬು ತುಂಬಿ ಆ ವಸ್ತುವನ್ನು ಕೋಲಿನ ತುದಿಗೆ ಕಟ್ಟಬೇಕು. ಅದನ್ನು **ಲಾಕ್ಷ** ಎಂದು ಕರೆಯಲಾಗುತ್ತದೆ. ಶಬ್ದ ಮಾಡುತ್ತ ಕೋಲಿನ ತುದಿಗೆ ಕಟ್ಟಿದ ಲಾಕ್ಷವನ್ನು ಅಲುಗಾಡಿಸುತ್ತ ಆನೆಗೆ ತೋರಿಸಬೇಕು. ಮಾವುತನಿಂದ ಪ್ರೇರೇಪಿತವಾದ ಆನೆ ತನ್ನ ಕೋರೆಗಳಿಂದ ಲಾಕ್ಷವನ್ನು ಹೊಡೆದುರುಳಿಸುತ್ತದೆ. ಹೀಗೆ ಕೋರೆಗಳಿಂದ ಹೊಡೆಯುವುದರಲ್ಲಿ ತರಬೇತಿ ಪಡೆದ ಆನೆಯು ಮೇಲೆ, ಕೆಳಗೆ ಅಕ್ಕಪಕ್ಕದಲ್ಲಿ ವಿವಿಧ ಪ್ರಕಾರದ ಕೋಲುಗಳಲ್ಲಿರುವ ಲಾಕ್ಷಗಳನ್ನು ಪ್ರಹಾರ ಮಾಡುತ್ತದೆ. ಬಳಿಕ ಆನೆಯ ಬಂಧವನ್ನು ಕಳಚಿ ಮೊದಲಿನ ಸ್ಥಾನಕ್ಕೆ ಆನೆಯನ್ನು ಕರೆತರಬೇಕು. ತರುವಾಯ ಮಾವುತನು ಹೆಬ್ಬೆರಳುಗಳಿಂದ ಆನೆಗೆ ತಿವಿದು ದಾರಿಯಲ್ಲಿ ಓಡಾಡಿಸಬೇಕು. ಆಹಾರವನ್ನು ತೋರಿಸುತ್ತ ಆನೆಯ ಮುಂದೆ ಓಡಬೇಕು. ಆಹಾರ ಹಿಡಿದವನು ವರ್ತುಲಾಕಾರವಾಗಿ ತಿರುಗುತ್ತ ಆನೆಯೂ ವರ್ತುಲಾ

ಕಾರದಲ್ಲಿ ತಿರುಗುವಂತೆ ಮಾಡಬೇಕು. ಈ ರೀತಿ ವಧೆ ಹಾಗೂ ಇತರ ಕಾರ್ಯಗಳಲ್ಲಿ ತರಬೇತಿ ಪಡೆದ ಆನೆಯು ತಾನೊಂದೇ ಹೋರಾಡಿ ಸಂಗ್ರಾಮದಲ್ಲಿ ಅನೇಕ ಜನರನ್ನೂ, ಆನೆ, ಕುದುರೆಗಳನ್ನೂ ಸೋಲಿಸುತ್ತದೆ.

ಶುಭ ಲಕ್ಷಣಗಳಿಂದ ಕೂಡಿದ ಇಂಥ ಶ್ರೇಷ್ಠ ಜಾತಿಯ ಆನೆಗಳನ್ನು ಸರ್ವಕ್ರಮಗಳಲ್ಲಿ ತರಬೇತಿ ನೀಡಿ ರಾಜನು ತನ್ನ ಚದುರಂಗ ಬಲದಲ್ಲಿ ಸೇರಿಸಿಕೊಳ್ಳಬೇಕು. ಇದು ಗಜಶಿಕ್ಷಾ ನಿರೂಪಣ ಎಂದು ಸೋಮೇಶ್ವರನು ತಿಳಿಸುತ್ತಾನೆ.

ಇಂದು ಯುದ್ಧರಂಗದ ಪರಿ ಬೇರೆಯೇ ಆಗಿದೆ. ಕ್ಷಿಪಣಿ, ಬಾಂಬ್, ಟ್ಯಾಂಕರ್‌ಗಳನ್ನು ಬಳಸಿ ಯುದ್ಧ ಮಾಡುವ ಸಂದರ್ಭದಲ್ಲಿ ಆನೆ, ಕುದುರೆಗಳ ಉಪಯೋಗ ಏನೂ ಇಲ್ಲವೆಂದೇ ಹೇಳಬಹುದು. ಆದರೆ ಹಿಂದೆ ರಾಜಮಹಾರಾಜರಿಗೆ ಆನೆ ಕುದುರೆಗಳ ಅವಶ್ಯಕತೆ ಯುದ್ಧ ಸಂದರ್ಭದಲ್ಲಿ ಅತಿಯಾಗಿದ್ದಿತು. ಬ್ರಿಟಿಷ್ ಆಡಳಿತ ಕಾಲದಲ್ಲಿಯೂ ಯುದ್ಧ ಸಂದರ್ಭದಲ್ಲಿ ಆನೆಗಳನ್ನು ಅವಲಂಬಿಸಿದ್ದುದು ತಿಳಿದುಬರುತ್ತದೆ.

### ೪.೧.೪. ಆನೆಗಳ ರೋಗ ಮತ್ತು ಆರೈಕೆ

ಆನೆಯು ಸತತವಾಗಿ ಸೊಂಡಿಲನ್ನು ಹೊಯ್ದಾಡಿಸುವುದು, ಬಾಲ ಬೀಸುವುದು, ಕಿವಿಗಳನ್ನು ಬಡಿಯುವುದು, ಮೈ ಇಲ್ಲವೇ ತಲೆಯನ್ನು ಬದಿಯಿಂದ ಬದಿಗೆ ತೂಗಿಸುವುದು, ಕಾಲನ್ನು ಇನ್ನೊಂದು ಕಾಲಿಗೆ ತಿಕ್ಕುವುದು, ಕಾಲನ್ನು ಗಾಳಿಯಲ್ಲಿ ಅಲ್ಲಾಡಿಸುವುದು ಮುಂತಾದವು ಆನೆಯ ಆರೋಗ್ಯ ಲಕ್ಷಣಗಳು. ಇವಲ್ಲದೆ 'ಧರ್ಮವು ಮೃದುವಾಗಿದ್ದು ಕಪ್ಪಾಗಿರುವುದು, ಚರ್ಮದ ನೀರಿಗೆಗಳು ಮುಟ್ಟಲು ಬಿರುಸಾಗುವವು. ನಾಲಿಗೆ ಮತ್ತು ಜೊಲ್ಲುರಸ ಬಣ್ಣರಹಿತವಾಗಿರುವುದು. ಕಣ್ಣುಗಳು ಸ್ವಚ್ಛವಾಗಿದ್ದು ಪ್ರಕಾಶಮಯವಾಗಿರುವುವು. ಆರ್ದ್ರವಾದ ಒಂದು ಬಗೆಯ ದ್ರವವು ಕಾಲುಗುರುಗಳ ಮೇಲ್ತುದಿಯಿಂದ ಒಸರುವುದು. ಆನೆಯ ಪಚನಶಕ್ತಿ ಚೆನ್ನಾಗಿದ್ದು ದಿನದ ಹಲವು ಗಂಟೆಗಳ ಕಾಲ ನಿದ್ರೆ ಮಾಡಿ ಎದ್ದೊಡನೆ ಆಹಾರ ತಿನ್ನಲು ಪ್ರಾರಂಭಿಸುವುದು'[೨೬] ಇವೆಲ್ಲವೂ ಆನೆಯು ಚಟುವಟಿಕೆಯಿಂದ ಆರೋಗ್ಯವಾಗಿರುವ ಲಕ್ಷಣಗಳಾಗಿವೆ.

**ಅಸೌಖ್ಯ/ಅನಾರೋಗ್ಯ ಲಕ್ಷಣಗಳು**

ಗಲಿಬಿಲಿಗೊಂಡಿರುವುದು, ಖಿನ್ನವಾಗಿರುವುದು, ಅತ್ತಿಂದಿತ್ತ ಹಾಯ್ದಾಡದಿರುವುದು ಆನೆಗಳಿಗೆ ಅನಾರೋಗ್ಯ ಉಂಟಾಗುವ ಕ್ಷಣಗಳ ಮುನ್ಸೂಚನೆಯಾಗಿರುತ್ತದೆ. ಸಾಮಾನ್ಯವಾಗಿ ಆನೆಗಳನ್ನು ಕಟ್ಟಿಹಾಕುವುದರಿಂದಲೂ, ಹೊಡೆಯುವುದರಿಂದಲೂ, ಕಾಡಿನ ಸೌಖ್ಯವನ್ನು ನೆನಪಿಸಿಕೊಳ್ಳುವುದ ರಿಂದಲೂ, ಒಗ್ಗದಿರುವ ಆಹಾರದಿಂದಲೂ, ಆಹಾರ ಜೀರ್ಣವಾಗದೆ

ಇರುವುದರಿಂದಲೂ, ಅತಿಯಾದ ಶ್ರಮದಿಂದಲೂ, ರಾತ್ರಿ ಜಾಗರಣೆಯಿಂದಲೂ ಕೂಡ ಆನೆಗಳು ಅಸೌಖ್ಯವನ್ನು ಅನುಭವಿಸುತ್ತವೆ. ಆನೆಗಳ ಚರ್ಮ ಕಂದುಬಣ್ಣಕ್ಕೆ ತಿರುಗಿ ಸಡಿಲವಾಗಿ ಇಳಿಬಿದ್ದು ಹಲವು ಸಲ ಮುದುಡಿಕೊಂಡಿರುವುದು. ಬಿಳಿ ಚುಕ್ಕೆಗಳು ಮತ್ತು ಮಚ್ಚೆಗಳು ಮಾಸಿದ ಬಣ್ಣ ತಳೆಯುವವು. ಸೊಂಡಿಲು ಮುದುಡಿಕೊಂಡಂತೆ ಕಾಣುವುದು. ಬಾಯಿ ಮತ್ತು ಜೊಲ್ಲು ಮಣ್ಣಿನ ಬಣ್ಣಕ್ಕೆ ಇಲ್ಲವೇ ಕಡುಗೆಂಪಿಗೆ ತಿರುಗುವುದು. ನಾಲಿಗೆ ಮೇಲೆ ಗುಳ್ಳೆಗಳೇಳುವವು. ಕಿವಿಯ ಕೆಳಭಾಗ ತಂಪಿನಿಂದ ಕೂಡಿರುವುದು. ಕಣ್ಣುಗಳು ಕಾಂತಿ ಕಳೆದುಕೊಂಡು ನಿಸ್ತೇಜವಾಗಿರುವವು. ಕಣ್ಣುಗಳಿಂದ ನೀರು ಸುರಿಯುವುದು. ಆಹಾರ ಸೇವಿಸದಿರುವುದು. 'ವಿಶ್ರಾಂತಿಯನ್ನು ಪಡೆಯದೆ ಹಲವು ಸಲ ಮಲಗದೆ ಎದ್ದು ನಿಲ್ಲುವುದು, ಮೂತ್ರವು ಕಡಿಮೆ ಪ್ರಮಾಣದಲ್ಲಿ ಇದ್ದು ಹೆಚ್ಚು ಬಣ್ಣ ಹೊಂದಿರುವುದು. ಲದ್ದಿಯು ಗಟ್ಟಿಯಾಗಿದ್ದು ಸಿಂಬಳದ ಪರೆಯನ್ನು ಹೊಂದಿರುವುದು. ಹಲವು ಸಲ ಭೇದಿಯ ಲಕ್ಷಣಗಳೂ ಕಾಣಬಹುದು.' ಇವೆಲ್ಲವೂ ಆನೆಗಳಿಗೆ ಅನಾರೋಗ್ಯವಾಗಿದೆ ಎಂಬುದನ್ನು ಸೂಚಿಸುವ ಲಕ್ಷಣಗಳಾಗಿವೆ.

**ರೋಗ/ಜ್ವರ**

ಪ್ರಾಚೀನ ಭಾರತದಲ್ಲಿ ಆನೆಗಳ ಅನಾರೋಗ್ಯ, ಚಿಕಿತ್ಸೆಗಳ ಕುರಿತು ಸುಧೀರ್ಘವಾಗಿ ಚರ್ಚಿಸಲಾಗಿದೆ. ಇದನ್ನು ಗಜಾಯುರ್ವೇದ ಅಥವಾ ಹಸ್ತಾಯುರ್ವೇದ ಎಂದು ಕರೆಯಲಾಗುತ್ತಿತ್ತು. 'ಆನೆಗಳ ರೋಗಶಾಸ್ತ್ರದ ಬಗೆಗಿನ ಸಾಹಿತ್ಯವು ಆನೆಗಳಿಗಾಗಿ ಪ್ರಸಿದ್ಧವಾದ ಅಸ್ಸಾಂನಿಂದ ಪ್ರಾರಂಭಗೊಂಡಿತ್ತು'.[೧೨೭] ಕ್ರಿ.ಶ. ಹತ್ತನೆಯ ಶತಮಾನದ ಕೊನೆಯಲ್ಲಿದ್ದ ಪಾಲಕಾಪ್ಯ ಎಂಬ ವ್ಯಕ್ತಿಯ ಗಜಶಾಸ್ತ್ರದಲ್ಲಿ ಆನೆಗಳಿಗೆ ಸಂಬಂಧಿಸಿದ ಸಮಗ್ರ ಮಾಹಿತಿ ಇದೆ. ಸಂಸ್ಕೃತದ ಈ ಗ್ರಂಥವೇ ಆನೆಗಳ ಕುರಿತ ಮಾಹಿತಿ ಒದಗಿಸುವ ಮೊದಲ ಗ್ರಂಥವೆಂದು ಪರಿಗಣಿಸಲಾಗಿದೆ. ಪಾಲಕಾಪ್ಯನ ಕುರಿತು ಒಂದು ದಂತಕಥೆ ಪ್ರಚಲಿತದಲ್ಲಿದೆ. 'ಪಾಲಕಾಪ್ಯ ಯೋಗಿಯ ತಾಯಿಯು ಒಂದು ಆನೆಯಾಗಿದ್ದು ಅವನು ಕಾಡಾನೆಗಳ ಮಧ್ಯದಲ್ಲಿಯೇ ಬೆಳೆದನು. ಆನೆಗಳು ತಿನ್ನುತ್ತಿದ್ದುದನ್ನೇ ತಾನೂ ತಿಂದನು. ವೀಕ್ಷಣೆ ಹಾಗೂ ಅನುಭವಗಳಿಂದ ಆನೆಗಳಿಗೆ ಬಾಧಿಸುತ್ತಿದ್ದ ಕಾಯಿಲೆಗಳನ್ನು ವಾಸಿ ಮಾಡುವಲ್ಲಿ ಅವನು ಪರಿಣತನಾದನು. ಕೆಲಕಾಲದ ನಂತರ ಅವನು ಲೋಹಿತ್ಯ ನದಿ ದಂಡೆಯ ಮೇಲೆ ನೆಲೆಸಿದ್ದನು. ಅಲ್ಲಿ ಅವನು ಆನೆಗಳ ತಳಿಗಳು ಹಾಗೂ ಅವುಗಳ ಕಾಯಿಲೆಗಳ ವಿಶ್ಲೇಷಣೆ ಮತ್ತು ಚಿಕಿತ್ಸೆಯ ವಿಷಯವಾಗಿ ಉದ್ಗ್ರಂಥ ಬರೆದನು. ಅದಕ್ಕೆ ಹಸ್ತಾಯುರ್ವೇದ

ಎಂಬ ಹೆಸರು ಬಂದಿತು'[೧೨೮] ಎಂದು ಹೇಳಲಾಗುತ್ತದೆ. ಅವನನ್ನು ಅನುಸರಿಸಿಯೇ ಇನ್ನುಳಿದ ಗಜಶಾಸ್ತ್ರ ಕೃತಿಗಳು ಜನ್ಮ ತಾಳಿದವು ಎಂಬ ನಂಬಿಕೆ ಇದೆ.

ಪಾಲಕಾಪ್ಯನಿಗಿಂತ ಮೊದಲಿಗೆ ಕ್ರಿ.ಶ. ನಾಲ್ಕನೇ ಶತಮಾನದ ಸುಮಾರಿಗೆ ಆನೆಗಳ ಕಾಯಿಲೆಗಳ ಕುರಿತು ಜನರಿಗೆ ತಿಳುವಳಿಕೆ ಇತ್ತು ಎಂದು ಹೇಳಲಾಗುತ್ತದೆ. ಆಯುರ್ವೇದ ಪದ್ಧತಿಯ ಜನಕನೆಂದು ಕರೆಯಲಾಗುವ ಚರಕನು ಆನೆಗಳ ಕಾಯಿಲೆಗೆ ಭೇದಿ ಮದ್ದನ್ನು ಉಪಯೋಗಿಸಿ ಕಾಯಿಲೆಗಳಿಗೆ ಚಿಕಿತ್ಸೆ ನೀಡುತ್ತಿದ್ದನಂತೆ.

'ದಕ್ಷಿಣ ಭಾರತದ ತಂಜಾವೂರಿನ ಚೋಳ ದೊರೆಗಳು ಆನೆಗಳ ಕಾಯಿಲೆಗಳ ಚಿಕಿತ್ಸೆಗೆ ಸಂಬಂಧಿಸಿದ ಸಾಹಿತ್ಯವನ್ನು ಬರೆಸಿದರು.'[೧೨೯] ಮಧ್ಯಕಾಲೀನ ರಾಜಕೀಯದಲ್ಲಿ ಮುಂಚೂಣಿಯಲ್ಲಿದ್ದ ಮೊಘಲರು ಕೂಡ ಆನೆಗಳ ಕುರಿತು ತೀವ್ರ ಆಸಕ್ತಿ ಹೊಂದಿದವ ರಾಗಿದ್ದರು. ಮುಸ್ಲಿಂರ ಹಬೀಬ್ ಎಂಬುವವನು ಸಂಸ್ಕೃತ ಗ್ರಂಥಗಳ ಸಾರವನ್ನು ಕೂಡಿಹಾಕಿ ಪಾರ್ಷಿ ಭಾಷೆಯಲ್ಲಿ ತುಂಬಾ ಸರಳ ಭಾಷೆಯಲ್ಲಿ 'ಚೌಪಾಯ್' ರೂಪದಲ್ಲಿ ಕೃತಿ ರಚಿಸಿದನು. ಇಂದಿಗೂ ಹಲವು ಜನ ಆನೆ ಸಾಕಿದವರು ಹಬೀಬನ ಚೌಪಾಯಿಯಲ್ಲಿ ಸೂಚಿಸಿದ ವನಸ್ಪತಿಗಳನ್ನೇ ಅವಲಂಬಿಸಿದ್ದಾರೆ ಎಂದು ತಿಳಿದುಬರುತ್ತದೆ. 'ಕೇರಳದಲ್ಲಿ ಕಾಯಿಲೆ ಬಿದ್ದ ಆನೆಗಳಿಗೆ ಚಿಕಿತ್ಸೆಯ ವಿಧಾನವಾಗಿ ಕುರಿ, ಆಡು, ಕೋಳಿಗಳ ಮಾಂಸವನ್ನು ತಿನ್ನಿಸಲಾಗುವುದೆಂದು ವರದಿಯಾಗಿದೆ.'[೧೩೦]

ಮರಣಕಾಲದ ಸಮಯದಲ್ಲಿ ಎಲ್ಲಾ ಜೀವಿಗಳಿಗೆ ಉಂಟಾಗುವ ಅನೇಕ ಹೆಸರಿನಿಂದ ಕರೆಯಲ್ಪಡುವ ರೋಗಗಳ ರಾಜನಾದ ಜ್ವರರೋಗದ ಬಗ್ಗೆ ಸೋಮೇಶ್ವರನು ತನ್ನ ಕೃತಿಯಲ್ಲಿ ಮಹತ್ವದ ವಿಚಾರಗಳನ್ನು ತಿಳಿಯಪಡಿಸುತ್ತಾನೆ.

ಮನುಷ್ಯನಿಗೆ ಬರುವ ಈ ರೋಗರಾಜನಿಗೆ ಜ್ವರವೆಂದು, ಆನೆಗಳಿಗೆ ಬರುವ ಜ್ವರಕ್ಕೆ ಪಾಲಕವೆಂದು, ಕುದುರೆಗಳಿಗೆ ಉಂಟಾಗುವ ಜ್ವರಕ್ಕೆ ಅಭಿತಾಪವೆಂದು, ಕತ್ತೆಗಳಿಗೆ ಉಂಟಾಗುವ ಜ್ವರಕ್ಕೆ ವಾರಕವೆಂದು ಒಂಟೆಗಳಿಗೆ ಉಂಟಾಗುವ ಜ್ವರಕ್ಕೆ ಅಲಸಕವೆಂದೂ, ಹಸುಗಳಿಗೆ ಬರುವ ಜ್ವರಕ್ಕೆ ಈಶ್ವರವೆಂದೂ, ಹಾವುಗಳಿಗೆ ಉಂಟಾಗುವ ಜ್ವರಕ್ಕೆ ಅಕ್ಷಕವೆಂದೂ, ಎಮ್ಮೆ, ಕೋಣಗಳಿಗೆ ಉಂಟಾಗುವ ಜ್ವರಕ್ಕೆ ಹಾರಿದ್ರವೆಂದೂ, ಆಡು–ಕುರಿಗಳಿಗೆ ಉಂಟಾಗುವ ಜ್ವರಕ್ಕೆ ಪ್ರಲಾಪವೆಂದೂ, ಜಿಂಕೆಗಳಿಗೆ ಉಂಟಾಗುವ ಜ್ವರಕ್ಕೆ ಮೃಗರೋಗವೆಂದೂ, ಹಕ್ಕಿಗಳಿಗೆ ಉಂಟಾಗುವ ಜ್ವರಕ್ಕೆ ಅವಪಾತವೆಂದೂ, ಮೀನುಗಳಿಗೆ ಬರುವ ಜ್ವರಕ್ಕೆ ಇಂದ್ರಮದವೆಂದು ಹೆಸರುಗಳಿವೆ.

“ನವಗೃಹೀತನಾಂ ನಾಗಾನಾಂ ಯೂಥವಿಯೋಗಾತ್ ಧೇನುಕಾ ಸ್ಮರಣಾತ್
ಪವನೋಭಿತಾಪಮಾಪಾದಯನ್ ಕಂಠಗಲಕಪೋಲಪ್ರದೇಶಾನ್ ವಿಷ್ಟಭ್ಯ
ಗಲಗ್ರಹಂ ಜನಯತಿ ಗ್ರಾಮ್ಯಾಣಾಮಪಿ ।
ಯದಾ ತು ವಾರಣಃ ಸ್ನಿಗ್ಧ ಮಧುರ ಶಿಶಿರಾನೂಪ ಜಲಜ ಯವಸ ಕಮಲಶೈವಲ
ಗುರು ರೂಕ್ಷಭೋಜನಃ.. ಕಂಠಮಾಸಾದ್ಯ ತಿಷ್ಠತಿ ಕಫಃ ।
ಸ ಜನಯತಿ ಗಲಗ್ರಹಮ್ ॥
(ಪಾಹಸ್ತ್ಯಾ. ೨–೩೦; ಪು. ೨೩೦–೨೩೨).

ಆನೆಗೆ ಬರುವ ಕ್ಷುದ್ರರೋಗಗಳಲ್ಲಿ ಒಂದು; ಹೊಸದಾಗಿ ಹಿಡಿದ ಆನೆಗಳಿಗೆ ಹಿಂಡನ್ನು ಅಗಲಿರುವುದರಿಂದಲೂ ಹೆಣ್ಣಾನೆಗಳ ನೆನಪಿನಿಂದಲೂ ಶರೀರವಾಯುವಿನ ತಾಪ ಹೆಚ್ಚಿ ಕಂಠ ಕಪೋಲಭಾಗಗಳಲ್ಲಿ ಉಂಟಾಗುವ, ಕಫ ಕಟ್ಟಿಕೊಂಡು ಆಗುವ ರೋಗ.”[೧೩೧] ಈ ರೋಗವನ್ನು **ಗಳಗ್ರಹ** ಎಂದು ಕರೆಯಲಾಗುವುದು.

**ಗಳ:** “ಆನೆಗೆ ಬರುವ ಗಳಗ್ರಹವೆಂಬ ರೋಗ: ಗಳಮೋ ಗಾಳಿಯೋ ಸಪ್ತಮೋಗ್ರ ಮದಮೋ ಕಾಷ್ಠಾಗ್ನಿಯೊ ಕಾಳಕೂಟಮೋ(ಅರ್ಥನೇ. ೮–೮೮). ನೋ. ಗಳಗ್ರಹ.”[೧೩೨]

**ಪಾಕಲ:** “ಆನೆಗಳಿಗೆ ಬರುವ ಜ್ವರ: ಗಜೇಷು ಪಾಕಲಃ(ಪಾಹಸ್ತ್ಯಾ. ೧–೯–೪) ಇದರಲ್ಲಿ ಹತ್ತುವಿಧ: ಶುದ್ಧ, ಬಾಲ, ಪಕ್ವಲ, ಮೃದುಗ್ರಹ, ಕುಕ್ಕುಟ, ಏಕಾಂಗಗ್ರಹ, ಪ್ರಸುಪ್ತ, ಕೂಟ, ಪುಂಡರೀಕ, ಮಹಾಪಾಕಲ(ಪಾಹಸ್ತ್ಯಾ. ೧–೪–೧೦–೧೩): ಜ್ವರೋ ನರೇಷು ವಿಖ್ಯಾತಃ ಪಾಕಲಃ ಸಾಮಜನ್ಮಸು(ಮಾನಸೋ. ೨–೬೩೯).”[೧೩೩]

“ಪಾಂಡುರೋಗಾಸ್ತ್ರಯೋ ಜ್ಞೇಯಾಃ ಪುರಾಣಕೃಶಸಂಜ್ಞಿತಾ ॥
ವಾತಿಕಾಃ ಪೈತ್ತಿಕಾಶ್ಚೈವ ಶ್ಲೇಷ್ಮಿಕಾಶ್ಚೈವ ಸಂಖ್ಯಯಾ । (ಪಾಹಸ್ತ್ಯಾ. ೧–೧೫).
ಆನೆಗೆ ಬರುವ ಒಂದು ರೋಗ; ಇದು ಮೂರು ವಿಧ: ವಾತಿಕ, ಪೈತ್ತಿಕ, ಶ್ಲೇಷ್ಮಿಕ.”[೧೩೪] ಈ ರೋಗವನ್ನು **ಪಾಂಡುರೋಗ** ಎಂದು ಕರೆಯಲಾಗುವುದು.

“ಪಾದರೋಗಸ್ತತೋ ಜ್ಞೇಯಾಸ್ತ್ರಿಶಂಶತ್ತು ಪರಿಸಂಖ್ಯಯಾ॥
ಉತ್ಕಾರಕೀ ತತಃ ಪೂರ್ವಂ ಕಾರಕೀ ತದನಂತರಮ್ ।
ನಾಡೀಜಾತಸ್ತೃತೀಯಃ ಸ್ಯಾತ್ತತಃ ಸಂರಾಷ್ಟ್ರ ಏವ ಚ ॥...
ಇತ್ಯೇಷ ಪಾದರೋಗಾಣಾಂ ಸಂಗ್ರಹಃ ಸಮುದಾಹೃತಃ ॥ (ಪಾಹಸ್ತ್ಯಾ. ೧–೨೪–೩೧).

ಆನೆಯ ಕಾಲುಗಳಿಗೆ ಬರುವ ಒಂದು ರೋಗ: ಇದರಲ್ಲಿ ೩೦ ವಿಧಗಳು: ಉತ್ಕಾರಕೀ, ಕಾರಕೀ, ನಾಡೀಜಾತ, ಸಂರಾಷ್ಟ್ರಕೇಶಕ, ನಖಭೇದ, ಪೂಯಕೇಶ, ವಿಪ್ಲಾವಕ, ಕೇಶಗ್ರಂಥಿ, ಸವಿಪ್ಲುತ, ಸಮಂತಕೇಶ, ಕಚಕೇಶ, ಕದಂಬಪುಷ್ಪ, ಸಫುಲ್ಲ, ಕುಠಾರಕ, ಫುಲ್ಲಪಾದ, ಭಿನ್ನನಖ, ಸ್ಫುಟಿತ, ಅನುದ್ಧತ, ಶರನದ್ಧ, ದದ್ರುಕೇಶ, ಪ್ರಗುಲ್ಮಿಕೇಶ, ಗಂಭೀರ, ಚರ್ಮತಲ, ಕ್ಷತ, ನಿರ್ಮೂಲಿತ, ಲೋಹಿತಕೇಶ, ಸ್ಥಾಣ್ವಾಹತ, ಕ್ಷೀಣತಲ, ಕ್ಷರೀಕೃತ, ನಿಷ್ಪಿಷ್ಟ, ಮಾಂಸಕೇಶ, ಸ್ಥಾನರತ (?)."[೧೩೫] ಈ ರೋಗವನ್ನು **ಪಾದರೋಗ** ಎಂದು ಕರೆಯಲಾಗುವುದು.

**ಮೂರ್ಛೆಗಳು:** "ಆನೆಯ ರೋಗಗಳಲ್ಲಿ ಒಂದು ಬಗೆ; ಇದರಲ್ಲಿ ೧೨ ವಿಧ : ಅತಿಭೋಜನ, ವಿದಗ್ಧಭೋಜನ, ಧಾನ್ಯ, ಸ್ನೇಹ, ವಾತ, ಪಿತ್ತ, ಶ್ಲೇಷ್ಮ, ಸನ್ನಿಪಾತ, ವಾರಿ, ಮಾರ್ಗ, ಮದ್ಯ, ಯವಸ–ಇವುಗಳಿಂದುಂಟಾಗುವುದು (ಪಾಹಸ್ತ್ಯ. ೧೩)."[೧೩೬]

**ವಾತಕುಂಡಲಿ:** "ಆನೆಗೆ ಬರುವ ಒಂದು ರೋಗ: ಶ್ರುಣು ರಾಜನ್ ಯಥಾ ವ್ಯಾಧಿರ್ಜಾಯತೇ ವಾತಕುಂಡಲೀ । ಅಭಿಘಾತಾತ್ ಪ್ರವೇಗಾತ್ ವಾ ರಾತ್ರೌ ಜಾಗರಣೇನ ಚ (ಪಾಹಸ್ತ್ಯ. ೨–೩೫)."[೧೩೭]

**ವ್ಯಾಪದ:** "ಆನೆಗೆ ಬರುವ ಒಂದು ರೋಗ; ಇದು ತೈಲ, ಸರ್ಪಿಸ್ಸು, ಕ್ಷೀರ, ವಸಾ, ಮದ್ಯ, ಧಾನ್ಯ, ವಾರಿ, ಉಪಧಾ ಸಂಬಂಧವಾದುದು: ಇಹ ಖಲ್ವಷ್ಟೌ ವ್ಯಾಪದೋಽಸ್ಯ ಭವಂತಿ । (ಪಾಹಸ್ತ್ಯ. ೧–೧೬)."[೧೩೮]

"ವಾರಣಾನಾಂ ಸಪ್ತಶಿರೋರೋಗಾಃ ಸಂಭವಂತಿ ।
ತದ್ಯಥಾ ವಾತ ಪಿತ್ತ ಕಫ ರುಧಿರ ಸನ್ನಿಪಾತಾತ್ ಕ್ರಿಮಿಭ್ಯೋಽಭಿಘಾತಾ ಚ್ಚೇತಿ ।
(ಪಾಹಸ್ತ್ಯ. ೧–೧೫).
ಆನೆಗಳಿಗೆ ಬರುವ ತಲೆಶೂಲೆ: ಇವು ಕಫಜ, ರಕ್ತಜ, ವಾತಿಕ, ಪೈತ್ತಿಕ, ಸಾನ್ನಿಪಾತಿಕ, ಕ್ರಿಮಿಜ ಮತ್ತು ಅಭಿಘಾತಜ."[೧೩೯] ಈ ರೋಗವನ್ನು **ಶಿರೋರೋಗ** ಎಂದು ಕರೆಯಲಾಗುವುದು.

"ಗಜಾನಾಂ ಸಪ್ತಶೋಫಾಃ ಸಂಭವಂತಿ।
ತದ್ಯಥಾ–ಮನ್ಯಾಶೋಫಃ ದ್ರೋಣೀಕಶೋಫಃ ಅವಚ್ಛಿನ್ನಶೋಫಃ
ಶಾಲ್ಮಲೀಸ್ಕಂಧ ಶೋಫಃ ಕದಲೀಸ್ಕಂಧಶೋಫಃ ಗಾತ್ರಶೋಫಃ ಶುದ್ಧಶೋಫಶ್ಚೇತಿ ॥
(ಪಾಹಸ್ತ್ಯ. ೧–೧೭).

ಆನೆಗೆ ಬರುವ ರೋಗಗಳಲ್ಲಿ ಒಂದು ಬಗೆ : ಇದು ವಾತ, ಪಿತ್ತ, ಕಫ, ಸನ್ನಿಪಾತ, ರಕ್ತ, ಗಾತ್ರ ಹಾಗೂ ಆಗಂತುಕ ಜನ್ಯವಾದವು."[೧೪೦] ಈ ರೋಗವನ್ನು **ಶೋಫ** ಎಂದು ಕರೆಯಲಾಗುವುದು.

"ಶೋಷಣಂ ಸ್ಕಂದನಮಿತ್ಯನರ್ಥಾಂತರಮ್ ।
ತಸ್ಮಾತ್ ಸ್ಕಂದಾ ಇತ್ಯುಚ್ಯತೇ ।
ಶರೀರಾ ಪಾತನಾಚ್ಚಾಪತನಕಾಃ ।
ಶುದ್ಧಾತ್ ಸಂಜಾಯತೇ ವಾತಾತ್ ಸಂಪಿತ್ತಾಚ್ಚ ಕಫಾಚ್ಚ ವಾತೈಃ
ಸಹಿತಾ ತ್ರಯಃ ಸ್ಕಂದಾ ಭವಂತಿ ।
(ಪಾಹಸ್ತ್ಯ. ೧–೧೦).

ಆನೆಗೆ ಬರುವ ಒಂದು ರೋಗ: ಶರೀರ ನವೆಯುವ ಒಂದು ರೋಗ"[೧೪೧] ಈ ರೋಗವನ್ನು **ಸ್ಕಂದಾ** ಎಂದು ಕರೆಯಲಾಗುವುದು.

**ಆನಾಹ:** "ಆನೆಗೆ ಬರುವ ಒಂದು ಮಹಾರೋಗ; ಇದರಲ್ಲಿ ಎಂಟು ವಿಧಗಳು: ಅತ್ಯಾಶಿತಾ, ವಾತೋನ್ಮಥಿತ, ಸಂಸಕ್ತಭಕ್ತ, ಅಸಂಸಕ್ತ, ಅಪ್ರದುಷ್ಟ, ಸಂಪ್ರದುಷ್ಟ, ಮೃತ್ತಿಕಾಜಗ್ಧ(ಪಾಹಸ್ತ್ಯ. ೧–೧೨)."[೧೪೨]

**ಅಕ್ಷಿರೋಗ :** "ಆನೆಯ ೨೦ ಬಗೆಯ ಕಣ್ಣಿನ ರೋಗಗಳು: ಪ್ರಾವಾರಕಿ, ಔದಕಿ, ಅಂಡಾಕ್ಷ, ಕಾಚಾಕ್ಷ, ನಾಯಂಪ್ರೇಕ್ಷಿ, ಪ್ರತಿನುನ್ನ, ನಿಷ್ಪೇಷಹತ, ವಿದ್ಯುನ್ನಿಪಾತಹತ, ವಿದ್ಯುದ್ವಾರಿಹತ, ಊಷ್ಮಾಪರಿಗತ, ವರ್ತ್ಮಕ್ಲಿಷ್ಟ, ಸ್ರೋತೋಧ, ಬುದ್ಬುದ, ಅಕ್ಷಿಪಾಕ, ಪಟಲಾಕ್ಷ, ದಂಡಾಕ್ಷ, ಮುಂಜ, ಮುಂಜಜಾಲ, ಲೋಹಿತಾಕ್ಷ, ಪಿಟಕಾಕ್ಷ"[೧೪೩](ಪಾಹಸ್ತ್ಯ. ಅ. ೧೮).

ಗುಲ್ಮ(ಪೊದೆ)ಗಳಿಗೆ ಬರುವ ಜ್ವರಕ್ಕೆ ಗ್ರಂಥಿಕವೆಂದೂ, ಕಾಡಿನಲ್ಲಿ ಬೆಳೆವ ಔಷಧಿ ವೃಕ್ಷಗಳಿಗೆ ಬರುವ ಜ್ವರಕ್ಕೆ ಜ್ಯೋತಿಯೆಂದೂ, ಹೂಗಳಿಗೆ ಬರುವ ಜ್ವರಕ್ಕೆ ಪರ್ವತವೆಂದೂ, ಕಮಲಗಳಿಗೆ ಬರುವ ಜ್ವರಕ್ಕೆ ರೂಪಕವೆಂದು ಕರೆಯಲಾಗಿದೆ.

ಧಾನ್ಯಗಳಿಗೆ ಬರುವ ಜ್ವರಕ್ಕೆ ಚೂರ್ಣಕವೆಂದೂ, ಕೋದ್ರವ ಧಾನ್ಯಕ್ಕೆ ಬರುವ ಜ್ವರಕ್ಕೆ ಲಲವೆಂದೂ, ತರಕಾರಿಗಳಿಗೆ ಬರುವ ಜ್ವರಕ್ಕೆ ಮಧುಕವೆಂದೂ, ಭೂಮಿಗೆ ಬರುವ ಜ್ವರಕ್ಕೆ ಊಷರವೆಂದೂ, ನೀರಿಗೆ ಬರುವ ಜ್ವರಕ್ಕೆ ನೀಲಿಕಾವೆಂದು ಹೆಸರು.

ಪ್ರಪಂಚದಲ್ಲಿ ಜ್ವರವೊಂದೇ ಅನೇಕ ಹೆಸರುಗಳಿಂದ ಕರೆಯಲ್ಪಡುತ್ತದೆ. ಮನುಷ್ಯರನ್ನು ಬಿಟ್ಟು ಬೇರೆ ಯಾವ ಜೀವಿಗಳೂ ಈ ಜ್ವರವನ್ನು ಸಹಿಸಲು ಶಕ್ತವಲ್ಲ[೧೪೪](೬೩೯–೬೪೪).

**ಪಾಲಕ ಜ್ವರ:** ಆನೆಗೆ ಬರುವ ಪಾಲಕವೆಂಬ ಜ್ವರಕ್ಕೆ ಚಿಕಿತ್ಸೆಯು ಹೇಳಲ್ಪಡುವುದಿಲ್ಲ. ಈ ಪಾಲಕ ಜ್ವರವು ಒಳಗಿನ ಎಲ್ಲ ಧಾತುಗಳನ್ನು ಮೊದಲು ವ್ಯಾಪಿಸಿ ಅನಂತರ ಹೊರಗೆ ಕಂಡುಬರುತ್ತದೆ. ಪಾಲಕವೆಂಬ ಜ್ವರಕ್ಕೆ ಚಿಕಿತ್ಸೆ ಬಹಳ ಕಷ್ಟಸಾಧ್ಯವಾಗಿದೆ. ಆದ್ದರಿಂದಲೇ ಅನೇಕ ಜನ ಆಚಾರ್ಯರಿಂದ ಮೃತ್ಯುರೂಪವಾದ ಈ ಪಾಲಕವೆಂಬ ಜ್ವರಕ್ಕೆ ಚಿಕಿತ್ಸೆಯು ಹೇಳಲ್ಪಟ್ಟಿಲ್ಲ.[೧೪೫]

**ಆನೆಗಳ ಚಿಕಿತ್ಸಾಕ್ರಮ**

ಆನೆಗಳಿಗೆ ಉಂಟಾಗುವ ಕಾಯಿಲೆಗಳನ್ನು ಗುಣಪಡಿಸಲು ಬಳಸುವ ಔಷಧೋಪಚಾರದ ಸಸ್ಯಗಳನ್ನು ಈ ರೀತಿಯಾಗಿ ಮಾನಸೋಲ್ಲಾಸ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಪರ್ಣಿಕಾ, ಮುದ್ಗಪರ್ಣಿ, ಮಾಷಪರ್ಣಿ, ಉಗ್ರಗಂಧಾ, ಒಣಗಿದ ವಜಾ, ರಸಪಂಚಕ, ಪೂತಿ ದ್ವಯ, ಕೃಷ್ಣಪಿಪ್ಪಲಿ, ವಾಸಾ, ಆಟರೂಷಕ, ಗ್ರಂಥಿಕಾ, ಪಿಪ್ಪಲಿಮೂಲ, ಕಟೂಫಲ, ಕಾಶ್ಮರ್ಯ, ಸೌರಾಷ್ಟ್ರಿಕ, ತುವರ ಮೃತ್ತಿಕಾ, ತ್ರಿವೃತ, ತ್ರಿಸ್ನೇಹ, ಶ್ರೀವೇಷ್ಟ, ಸರಲದ್ರುಮ ನಿರ್ಯಾಸ (ಮಾನಸೋ. ೨-೮-೬೭೭).

**ಆನೆಗಳಿಗೆ ಚಿಕಿತ್ಸಾಪದ್ಧತಿಯನ್ನು ನೀಡುವವನಿಗೆ** ಆನೆಗಳ ಚಿಕಿತ್ಸಕ, ಗಜವೈದ್ಯ: ಅಮೃತಗಣಾಧಿಪತಿ, ಅಮೃತಗಣಾಧಿಪತ್ಯಸ್ಯ ಹಸ್ತಿ(ವೈದ್ಯಸ್ಯ) ಎಂದು ಕರೆಯುತ್ತಾರೆ.

ಆನೆಗಳಿಗೆ ಅವುಗಳ ಎತ್ತರಕ್ಕೆ ತಕ್ಕಂತೆ ಒಂದು ಅರತ್ನಿ(ಒಂದು ಮೊಳ ಎತ್ತರ)ಗೆ ಹತ್ತು ಪಲ ಚೂರ್ಣ ಕೊಡಬೇಕು. ಕಲ್ಕವನ್ನು ಚೂರ್ಣದ ಪ್ರಮಾಣಕ್ಕೆ ಎರಡರಷ್ಟು ಪ್ರಮಾಣ ಕೊಡಬೇಕು. ಕಷಾಯವನ್ನು ಒಂದು ಅರತ್ನಿ ಎತ್ತರಕ್ಕೆ ಒಂದು ಅಢಕ (ಒಂದು ಸೇರು=೬೪ ಪಲ) ಪ್ರಮಾಣದಲ್ಲಿ ಕೊಡಬೇಕು.

"ಆನೆಗೆ ಯಾವುದೇ ಔಷಧಿ ದ್ರವ್ಯವನ್ನು ಕೊಡುವಾಗ ದರ ಮೂಲವನ್ನು ಪ್ರಯೋಗಿಸಬೇಕು. ಯಾವುದೇ ದ್ರವೌಷಧಿಯನ್ನು ಕೊಡುವಾಗ ಅದರೊಡನೆ ನೀರನ್ನು ಸೇರಿಸಿ ದ್ರವ್ಯೌಷಧಿಯ ಸಮಭಾಗಕ್ಕೆ ಇಂಗಿಸಿ ಕೊಡಬೇಕು. ಸಕಾಲದಲ್ಲಿ ಆನೆಯನ್ನು ನಿದ್ದೆಯಿಂದ ಎಬ್ಬಿಸಬೇಕು. ಮೂತ್ರವನ್ನು ಪ್ರಯೋಗಿಸುವಾಗ ಆನೆಯ ಮೂತ್ರವನ್ನೇ ಪ್ರಯೋಗಿಸಬೇಕು.[೧೪೬]

ಆನೆಗಳಿಗೆ ಉಂಟಾಗುವ ಜ್ವರಕ್ಕೆ ಔಷಧಿ ಹೇಳುತ್ತ ಗಿಡಮೂಲಿಕೆಗಳಿಂದ ಔಷಧಿ ತಯಾರಿಸಬೇಕೆಂದು ಹೇಳಲಾಗಿದೆ. ಈ ಕೆಳಗಿನ ಗಿಡಮೂಲಿಕೆಗಳಿಂದ ಆನೆಗಳಿಗೆ ಬರುವ ಕಾಯಿಲೆಗಳನ್ನು ಗುಣಪಡಿಸಬಹುದಾಗಿದೆ.

**ಕಫ ವಾತ ದೋಷಕ್ಕೆ**

ಲಕ್ಕಿಗಿಡ, ತುಳಸಿ, ದೇವದಾರು, ಕೊನ್ನಾರಿಗಡ್ಡೆ, ಚಂಗಲ್ವಕೋಷ್ಠ, ಬೆಳ್ಳುಳ್ಳಿ, ಅತಿಮಧುರ, ವಾಯುವಿಳಂಗ, ಗಂಟುಬಾರಂಗಿ, ಸಾಸಿವೆ, ಬಿಳಿಸಾಸಿವೆ, ಮೂಲಂಗಿ, ಪಂಚಕೋಲ, ಹೊಂಗೆ, ನಾರುವ ಹುಲಿಗಲು, ಮಹಾಪಂಚಮೂಲ–ಇವೆಲ್ಲವೂ ಆನೆಯಲ್ಲಿಯ ಕಫ ಮತ್ತು ವಾತದೋಷವನ್ನು ಶಮನಮಾಡುತ್ತವೆ.

**ವಾತ ಪಿತ್ತ ದೋಷಕ್ಕೆ**

ಅಮೃತಬಳ್ಳಿ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಮೇದ, ಮಹಾಮೇದ, ಜೀವಕ, ಋಷಭುಕ, ಕಾಕೋಲಿ, ಕ್ಷೀರಕಾಕೋಲಿ, ಅಶ್ವಗಂಧಿ, ನೆಲಗುಂಬಳಗಡ್ಡೆ, ಆಷಾಢಿಬೇರು ಇವುಗಳಿಂದ ಸಿದ್ಧವಾದ ಯೋಗದ ಚೂರ್ಣ, ಕಲ್ಕ ಅಥವಾ ಕಷಾಯಗಳು ಆನೆಗಳ ವಾತ ಪಿತ್ತಗಳಿಂದ ಉಂಟಾಗುವ ಎಲ್ಲಾ ರೋಗಗಳನ್ನು ಖಂಡಿತವಾಗಿ ಹೋಗಲಾಡಿಸುತ್ತವೆ.

**ಕಫ ಪಿತ್ತ ದೋಷಕ್ಕೆ**

ಇದೇ ರೀತಿ ಕಹಿಪಡುವಲ, ಅಗಳುಶುಂಠಿ, ಚಂಗಲ್‌ಕೋಷ್ಠ, ಬೇವು, ನೆಲ್ಲಿಕಾಯಿ, ಅಮೃತಬಳ್ಳಿ, ಅತಿಭಜೆ, ಧನಿಯ, ಪರ್ಪಾಷ್ಟಕ, ಕಟುಕರೋಹಿಣಿ ಮತ್ತು ಕೊಡಸಿಗೆ ಬೀಜ ಇವು ಕಫ ಮತ್ತು ಪಿತ್ತದೋಷಗಳಿಂದ ಉಂಟಾಗುವ ರೋಗಗಳನ್ನು ನಾಶಪಡಿಸುತ್ತವೆ.

**ಉದರಶೂಲೆ ದೋಷಕ್ಕೆ**

ಹಿಂಗು, ಸೌವರ್ಚಲವಣ, ಶುಂಠಿ ಮತ್ತು ಬೆಲ್ಲಗಳನ್ನು ಬೆರೆಸಿ ಆನೆಗೆ ತಿನ್ನಿಸಬೇಕು. ಕಣ್ಣುಗಳಿಗೆ ತ್ರಿಕುಟಚೂರ್ಣದಿಂದಾಗಲಿ ಅಥವಾ ಕೇವಲ ಶುಂಠಿಚೂರ್ಣದಿಂದಾಗಲಿ ಅಂಜನ ಮಾಡಿಸಬೇಕು. ಇದರಿಂದ ಆನೆಗಳಲ್ಲಿ ಉಂಟಾಗುವ ಉದರಶೂಲೆ ಇಲ್ಲವಾಗುತ್ತದೆ.

**ಆಮವಾತ ದೋಷಕ್ಕೆ**

ಕೊಡಸಿಗೆ ತೊಗಟೆ, ಶುಂಠಿ, ಯವಕ್ಷಾರ, ಚಿತ್ರಮೂಲ, ಮೆಣಸು, ಹಿಪ್ಪಲಿ, ಬಿಳಿಸಾಸುವೆ, ವಾಯುವಿಳಂಗ, ಅತಿಬಜೆ, ಕೊನ್ನಾರಿಗಡ್ಡೆ, ಮೋಡಿ, ಅರಿಶಿಣ, ನುಗ್ಗೆ, ಸೈಂದ್ರವಲವಣ, ಗೋಮಯಚೂರ್ಣ–ಇವೆಲ್ಲವನ್ನೂ ಕುಟ್ಟಿ ಚೂರ್ಣವಾಗಿಸಿಕೊಂಡು ಈ ಯೋಗವನ್ನು ಆನೆಗೆ ಪ್ರಯೋಗಿಸಿದರೆ ಜಠರಾಗ್ನಿಯು ಚೆನ್ನಾಗಿ ಉದ್ದೀಪನಗೊಳ್ಳುತ್ತದೆ. ಇದು ಆಮವಾತವನ್ನು ಹಾಗೂ ಅದರಿಂದ ಉಂಟಾಗುವ ರೋಗಗಳನ್ನೂ ನಾಶಪಡಿಸುತ್ತದೆ.

**ಮೃದ್ದೋಹ(ಮಣ್ಣಿನ ಬಯಕೆ) ನಿವಾರಣೆಗೆ**

ಸೈಂಧವಲವಣ, ಜೀರಿಗೆ, ಜಾಪಾಳದ ಬೇರು, ಶುಂಠಿ, ತ್ರಿಫಲಾ, ಹೊಂಗೆ, ನಾರುವ ಹುಲಿಗಲು, ಮೆಣಸು, ಕಹಿಪಡುವಲದ ಬೇರು, ಬೇವಿನ ಚಿಗುರು, ಗಂಗುಂಗೆ ಬೀಜ, ಅಮೃತಬಳ್ಳಿ, ಆಡುಸೋಗೆ ಇವೆಲ್ಲವನ್ನೂ ಚೆನ್ನಾಗಿ ಚೂರ್ಣಮಾಡಿ ಉಂಡೆಕಟ್ಟಿ ಆನೆಗೆ ತಿನ್ನಿಸಿದರೆ ಮೃದ್ದೋಹದವನ್ನು(ಮಣ್ಣಿನ ಬಯಕೆ) ಹೋಗಲಾಡಿಸಿ ಅಗ್ನಿದೀಪ್ತಿಯನ್ನು ಬೇಗನೆ ಉಂಟುಮಾಡುತ್ತದೆ.

**ಕಂಠರೋಗ ನಾಶಕ್ಕೆ**

ಅಗಳು ಶುಂಠಿ, ಕಹಿಪಡುವಲ, ಚಂಗಲ್ವಕೋಷ್ಠ, ಬೇವಿನಚಕ್ಕೆ, ನೆಲಬೇವು, ಪರ್ಪಾಷ್ಟಕ, ಗಂಗುಂಗೆಬೀಜ, ಮುಂಡಗಳ್ಳಿ, ಆಡುಸೋಗೆ, ಚವ್ಯ, ಮೋಡಿ, ನುಗ್ಗೆಬೀಜ, ಬಜೆ, ಶಿವನಿಬೇರು, ರೋದ್ರದಚಕ್ಕೆ, ಚಿತ್ರಮೂಲ, ಹೆಗ್ಗುಳ್ಳ, ಮಗ್ಗಾರೆಕಾಯಿ, ಕಟಕುರೋಹಿಣಿ, ತುರಚನಬೇರು, ಅರಿಶಿಣ, ಹೊಂಗೆಬೀಜ, ತ್ರಿಫಲ, ತ್ರಿಕಟು, ತ್ರಾಯಮಾಣ, ಪುಷ್ಕರಮೂಲ, ಗಜಹಿಪ್ಲಿ, ಧಾತಕಿ ಕುಸುಮ, ಇವುಗಳ ಚೂರ್ಣವನ್ನು ಜೇನುತುಪ್ಪದೊಡನೆ ಕೊಟ್ಟರೆ ಆನೆಯ ಕಂಠರೋಗಗಳು ನಾಶವಾಗುತ್ತವೆ.

**ಶೋಫರೋಗಕ್ಕೆ**

ಸೈಂಧವಲವಣ, ಶುಂಠಿ, ಚಂಗಲ್ವಕೋಷ್ಠ, ಬಜೆ, ನುಗ್ಗೆಬೀಜ, ಅರಿಶಿಣ, ಮರದರಿಶಿಣ, ಬಿಳಿಸಾಸುವೆ, ಯವಕ್ಷಾರ ಇವೆಲ್ಲವನ್ನೂ ಚೂರ್ಣಮಾಡಿ ಅದನ್ನು ಮೊಸರಿನಲ್ಲಿ ಮಿಶ್ರಮಾಡಿ ಉಗುರುಬೆಚ್ಚಗೆ ಮಾಡಿ ಕುಡಿಸಿದರೆ ಕಫ ಮತ್ತು ವಾತದೋಷದಿಂದ ಉಂಟಾದ ಶೋಫ ರೋಗವು ಗುಣವಾಗುತ್ತದೆ. ಶೋಫಕ್ಕೆ ಕಂಬಳಿ ಇತ್ಯಾದಿಗಳನ್ನು ಸುತ್ತಿ ಯೋಗ್ಯವಾದ ರೀತಿಯಲ್ಲಿ ಸ್ವೇದನವನ್ನು ಕೂಡ ಮಾಡಿಸಬೇಕು. ಶೋಫವು ಪಾಕವಾಗಿ ಒಡೆದರೆ ಗಾಯದೊಳಕ್ಕೆ ಆನೆಯ ಲದ್ದಿಯನ್ನು ಸೈಂದವಲವಣ ಸೇರಿಸಿ ಉಪಾಯವಾಗಿ ಹಾಕುವುದರಿಂದ ಕೀವು ಉಂಟಾಗುವುದು ನಿಲ್ಲುತ್ತದೆ.

**ವಾಯು ತೊಂದರೆ, ಮೂತ್ರ ಕೃಚ್ಛ್ರ, ಅಧ್ಮಾನ, ಶೂಲ ರೋಗಗಳಿಗೆ**

ಅಶ್ವಗಂಧಿ, ಹಿಪ್ಪಲಿ, ಅರಿಶಿಣ, ವಾಯುವಿಳಂಗ, ರಸಪಂಚಕ ಅಂದರೆ ಕೆಂಪು ಬೂರಗ, ಕಾಡು ಉದ್ದು, ಕಾಡು ಹೆಸರು, ಬಜೆ, ಬೆಳ್ಳುಳ್ಳಿ ಇವೆಲ್ಲವನ್ನೂ ಒಂದೊಂದನ್ನು ಎಂಟೆಂಟು ಪಲ, ಅತ್ತಿ ಚಕ್ಕೆ ಒಂದು ಪಲ ಪ್ರಮಾಣಕ್ಕೆ ಬೆರಸಿ ಇವುಗಳೊಡನೆ ಪಂಚ ಲವಣವನ್ನು ಬೆರೆಸಿ ಆನೆಯ ಹೊಟ್ಟೆಯೊಳಗೆ ಕೊಟ್ಟರೆ ಆನೆಗೆ ಬಂದ ವಾಯು ತೊಂದರೆಯು ನಾಶಮಾಡುತ್ತದೆ. ಹಾಗೆಯೇ ಮೂತ್ರ ಕೃಚ್ಛ್ರ ರೋಗವನ್ನು, ಅಧ್ಮಾನವನ್ನು ಮತ್ತು ಶೂಲ ರೋಗವನ್ನೂ ಕೂಡ ನಾಶಗೊಳ್ಳುತ್ತವೆ.

**ಶಸ್ತ್ರ ಗಾಯಗಳ ನಿವಾರಣೆಗೆ**

ಸದ್ಯೋವ್ರಣವು(ಶಸ್ತ್ರಗಳ ಅಥವಾ ಚೂಪಾದ ಪದಾರ್ಥಗಳ ಅಘಾತದಿಂದ ಉಂಟಾಗುವ ಹೊಸ ಗಾಯಗಳು) ಉಂಟಾದಾಗ ಬೇಗನೆ ಆ ವ್ರಣದಲ್ಲಿ ರಕ್ತ ಮತ್ತು ಪಿತ್ತಗಳು ವಿಶೇಷವಾಗಿ ಕೋಪಗೊಳ್ಳುತ್ತವೆ. ಆಗ ಆ ವ್ರಣವನ್ನು ಮೂರು ದಿನಗಳ ಕಾಲ ತುಪ್ಪ ಮತ್ತು ಜೇನುತುಪ್ಪದಿಂದ ತುಂಬಬೇಕು.

**ವ್ರಣಗಳ ನಿವಾರಣೆಗೆ**

ಕರಿ ಎಳ್ಳು, ಬೇವಿನ ಎಲೆ, ಮತ್ತು ಅರಿಶಿಣಗಳನ್ನು ಚೆನ್ನಾಗಿ ಅರೆದು ಜೇನುತುಪ್ಪ ಬೆರೆಸಿ ವ್ರಣಗಳಿಗೆ ಹಾಕಿದರೆ ವ್ರಣವು ಶೋಧನೆ ಹೊಂದಿ(ದೋಷಗಳು ಹೊರಹೋಗಿ) ಚೆನ್ನಾಗಿ ಮಾಯುತ್ತವೆ.

**ಕಣ್ಣಿನ ರೋಗ ನಿವಾರಣೆಗೆ**

ಚಿಲ್ಲದಬೀಜ, ಲೋದ್ರದ ಚಕ್ಕೆ, ಅತಿಮಧುರ, ಕೆಂಪುಚಂದನ, ಕೊನ್ನಾರಿಗಡ್ಡೆ, ಕಬ್ಬು, ಮಂಜಿಷ್ಠೆ, ಮುಡಿವಾಳ, ಲಾಮಂಚದ ಬೇರು ಈ ಚೂರ್ಣಗಳಿಂದ ತಯಾರಿಸಿದ ನೇತ್ರವರ್ತಿಯಾಗಲಿ, ಚೂರ್ಣಾಂಜನವಾಗಲಿ ಅಥವಾ ಆಶ್ಚೋತನವಾಗಲಿ(ಕಣ್ಣಿಗೆ ಬಿಂದು ರೂಪದಲ್ಲಿ ಹಾಕುವ ದ್ರವ) ಆನೆಗಳಿಗೆ ಉಂಟಾಗುವ ಎಲ್ಲಾ ಬಗೆಯ ಕಣ್ಣಿನ ದೋಷಗಳನ್ನು ನಿವಾರಿಸುತ್ತದೆ.

**ಪಾದಗಳ ಬಂಧನಕ್ಕೆ**

ಕ್ಷೀರವೃಕ್ಷಗಳ ಕಷಾಯದಲ್ಲಿ ತ್ರಿಸ್ನೇಹ(ಹಸುವಿನ ತುಪ್ಪ, ಎಳ್ಳೆಣ್ಣೆ, ವಸಾ)ವನ್ನು ಹಾಕಬೇಕು. ಇದಕ್ಕೆ ತ್ರಿಫಲಾ, ಗೋರೋಜನ, ಅರಗು, ರಸಸಿಂಧೂರ, ಲೋಧ್ರದ ಚಕ್ಕೆ, ಮಹಿಷಾಕ್ಷ ಗುಗ್ಗಳು, ಗೇರುಬೀಜ, ಅರಿಶಿಣ, ಅಡಿಕೆ, ಕಾಸೀಸ, ಸೈಂಧವಲವಣ, ಕಷಾಯ ರಸವಿರುವ ಜೇಡಿಮಣ್ಣು, ರಸಾಂಜನ, ರಾಳ, ಸರಳ ದೇವದಾರುವಿನ ನಿರ್ಯಾಸ ಈ ಎಲ್ಲಾ ದ್ರವ್ಯಗಳನ್ನು ಚೆನ್ನಾಗಿ ಕುಟ್ಟಿ ಚೂರ್ಣ ಮಾಡಿ ಮೊದಲು ಹೇಳಿದ ಕ್ಷೀರವೃಕ್ಷಗಳ ಕಷಾಯದಲ್ಲಿ ಬೆರಸಿ ಒಲೆಯ ಮೇಲಿಟ್ಟು ಮೃದುವಾದ ಅಗ್ನಿ ಕೊಟ್ಟು ಸೌಟಿನಿಂದ ತೊಳೆಸುತ್ತ ವೈದ್ಯನು ಪಾಕ ಮಾಡಬೇಕು. ಇದು ಲೇಹದಂತೆ ಗಟ್ಟಿಯಾಗಿ ಅಂಟಾಗಿ ತಯಾರಾದ ಮೇಲೆ ಇದರಿಂದ ವಜ್ರಲೇಪ ಮಾಡಬೇಕು. ಆನೆಗಳಿಗೆ ಇದರಿಂದ ಪಾದಬಂಧ ಉಂಟಾಗಿ ಪಾದಗಳಿಗೆ ರಕ್ಷಣೆ ಇರುತ್ತದೆ. ಆದ್ದರಿಂದ ವಿವೇಕಿಯಾದ ವೈದ್ಯನು ಈ ಲೇಪ ಮಾಡಬೇಕು.[೧೪೭]

## ಶಸ್ತ್ರಚಿಕಿತ್ಸೆ

ಆನೆಗಳಿಗೆ ಶಸ್ತ್ರಚಿಕಿತ್ಸೆ ಮಾಡುವ ಕ್ರಮ ಪೂರ್ವದಿಂದಲೂ ಇದೆ. ಕನ್ನಡ ಕಾವ್ಯಗಳಲ್ಲಿ ಯುದ್ಧದಲ್ಲಿ ಗಾಯಗೊಂಡ ಆನೆಗಳಿಗೆ ಶಸ್ತ್ರಚಿಕಿತ್ಸೆಯ ಮೂಲಕ ಆರೈಕೆ ಮಾಡುವ ವಿವರಗಳು ದೊರೆಯುತ್ತವೆ. ಯುದ್ಧ ಮುಗಿದ ತರುವಾಯ ಸಾಯಂಕಾಲ ಯುದ್ಧದಲ್ಲಿ ನೆಟ್ಟ ಬಾಣಗಳ ಮೊನೆಯನ್ನು ಕಿತ್ತು ಔಷಧೋಪಚಾರ ಮಾಡುವ ವಿವರಗಳು ದೊರೆಯುತ್ತವೆ. 'ಜಪಾನಿ ದಾಳಿಯ ಅನಂತರ ಮತ್ತೆ ಬರ್ಮಾದ ಪುನರಾಕ್ರಮಣದವರೆಗೂ ಆನೆಯ ಶಸ್ತ್ರ ಚಿಕಿತ್ಸೆಯಲ್ಲಾ ಓಬಿರಾಯನ ಕಾಲದ್ದೇ ಆಗಿತ್ತು. ಎಡಗೈಯಲ್ಲಿ ಹತ್ತು ಅಂಗುಲ ಉದ್ದ ನಾಲ್ಕಂಗುಲ ಅಗಲ ಅಲಗಿನ ಒಂದು ಚಾಕು, ಬಲಗೈಯಲ್ಲಿ ಒಂದು ಮರದ ಕೊಂತ ಹಿಡಿದು ಆನೆಯ ಸೊಂಡಿಲು, ದಂತಗಳ ಕೆಳಗೆ ನುಸುಳಿ ಹೋಗಿ, ಆನೆಗೆ ತಲೆ ಎತ್ತಲು ಸೂಚಿಸಿ, ಕೊಂತದ ಒಂದೇ ಹೊಡೆತದಿಂದ ಆನೆಯ ಎದೆಯಲ್ಲಿನ ಕುರುವಿನೊಳಕ್ಕೆ ಹಿಡಿಯುವವರೆಗೂ ಚಾಕುವನ್ನು ನೆಡಲು ತುಂಬಾ ಧೈರ್ಯ ಬೇಕು. ಒಂದೇ ಹೊಡೆತದಲ್ಲಿ ಇದನ್ನು ಪೂರೈಸಬೇಕು. ಇನ್ನೊಂದು ಹೊಡೆತಕ್ಕೆ ಪ್ರಯತ್ನಿಸಿದರೆ ಅಪಾಯವನ್ನೆದುರಿಸಲು ಸಿದ್ಧರಾಗಿರಬೇಕು. ಆನೆ ಅದನ್ನು ಸಹಿಸುವುದಿಲ್ಲ. ಆದರೆ ಈ ಕೆಲಸವನ್ನು ಮುಗಿಸಿ ಚಕ್ಕನೆ ಪಕ್ಕಕ್ಕೆ ನೆಗೆದು ಹೊರಗೆ ಬಂದರೆ ಹತ್ತು ನಿಮಿಷಗಳ ಅನಂತರ ಮತ್ತೆ ಸೊಂಡಿಲು ಕೆಳಗೆ ಹೋಗಿ ಗಾಯ ತೊಳೆದು ಕ್ರಿಮಿನಾಶಕಗಳನ್ನು ಹಾಕಿ ಕಟ್ಟಲು ಆನೆ ಅವಕಾಶ ಕೊಡುತ್ತದೆ. ಆನೆಯನ್ನು ಮ್ಹಿತ್ ಭಂಗಿಯಲ್ಲಿ ಕುಳ್ಳಿರಿಸಿ ಬೆನ್ನಿನ ಕುರುಗಳನ್ನು ಹೀಗೆಯೇ ಇಲಾಜು ಮಾಡುವುದು. ಹುಲಿಯಿಂದಾದ ಗಾಯಗಳು ಬಹುಮಟ್ಟಿಗೆ ವಾಸಿಯಾಗುವುದು ಕಷ್ಟ, ಅನೇಕ ಆಧುನಿಕ ಔಷಧಿಗಳಿಗೂ ಅವು ಜಗ್ಗುವುದಿಲ್ಲ.'[೧೪೮] ಆಧುನಿಕ ಶಸ್ತ್ರಚಿಕಿತ್ಸೆ ಕಂಡುಹಿಡಿಯುವುದಕ್ಕೆ ಮೊದಲೇ ಶತಮಾನಗಳ ಪೂರ್ವದಲ್ಲಿಯೇ ಆನೆಯ ಕೊಳೆತ ಹುಣ್ಣುಗಳನ್ನು ಶುದ್ಧಿಗೊಳಿಸಲು ನೊಣದ ಮರಿಗಳನ್ನು ಬರ್ಮೀಯರು ಬಳಕೆ ಮಾಡುತ್ತಿದ್ದರೆಂಬುದು ತಿಳಿದುಬರುತ್ತದೆ. ಶಸ್ತ್ರಚಿಕಿತ್ಸೆಗೆ ಹೊರತಾಗಿ ಇತರ ರೋಗಗಳಿಗೆ ದೇಶೀ ರೀತಿಯ ನಾಟಿಪದ್ಧತಿಯ ಔಷದೋಪಚಾರ ಮಾಡುವ ಕ್ರಮ ಇಂದಿಗೂ ಚಾಲ್ತಿಯಲ್ಲಿದೆ. ಸಾಮಾನ್ಯವಾಗಿ ಆನೆಯ ಒಡನಾಡಿಗಳಾದ ಮಾವುತರು ಈ ರೀತಿಯ ನಾಟಿಪದ್ಧತಿಯ ಔಷದೋಪಚಾರ ವಿವರಗಳನ್ನು ಮಾತ್ರ ಮಾವುತರು ಯಾರಿಗೂ ಬಿಟ್ಟುಕೊಡುವುದಿಲ್ಲ.

## ಆರೈಕೆ

ಆನೆಗಳನ್ನು ಹೊಸದಾಗಿ ಕಟ್ಟಿಹಾಕುವುದರಿಂದ ಅವುಗಳಿಗೆ ದುಃಖವಾಗುವ ಸಾಧ್ಯತೆ ಇರುತ್ತದೆ. ಹೀಗಾಗಿ ಅದನ್ನು ಸಮಾಧಾನಗೊಳಿಸಲು ದೋಣಿಗಳಲ್ಲಿ ನೀರನ್ನು ಹಾಕಿ ಕುಡಿಸಬೇಕು. ದಿನದ ಹಗಲಿನ ಅರ್ಧಯಾಮ ಮತ್ತು ಒಂದು ನಳಿಕಾ ಪ್ರಮಾಣ ಕಾಲವು(ಸುಮಾರು ಎರಡು ಘಂಟೆ ಕಾಲ) ಉಳಿದಿರುವಾಗ ಆನೆಯನ್ನು ನೀರಿನಿಂದ ಹೊರಗೆ ಕರೆತರಬೇಕು. ಬುದ್ಧಿವಂತನಾದ ವೈದ್ಯನು ಅನಂತರ ಆನೆಯನ್ನು ಕಟ್ಟಿಹಾಕಬೇಕು. ಶತಧೌತ ಘೃತದಿಂದ ಆನೆಗೆ ಬೆಳಿಗ್ಗೆ ಮತ್ತು ಸಾಯಂಕಾಲ ಶರೀರಕ್ಕೆ ಪೂರ್ತಿಯಾಗಿ ಪರಿಷೇಕ ಮಾಡಿಸಬೇಕು. ಹೀಗೆಯೇ ಎರಡು ದಿನ ಪರಿಷೇಕ ಮಾಡಿಸಬೇಕು. ಆನೆಗೆ ಇದರಿಂದ ಶೀತವಾದರೆ ಯಾವುದಾದರೂ ತೈಲದಿಂದ ಪರಿಷೇಕ ಮಾಡಿಸಬೇಕು.

ಆನೆಗೆ ಕ್ರಮೇಣ ನೀರಿನಲ್ಲಿ ಆಟವಾಡುವ ಕಾಲವನ್ನು ಕಡಿಮೆ ಮಾಡುತ್ತಾ ಬರಬೇಕು. ಕಬ್ಬು, ತಾವರೆ ಎಸಳು, ಸಿಹಿಯಾದ ಗಿಡಬಳ್ಳಿಗಳು, ಬಾಳೆದಿಂಡು, ಗೆಣಸು, ಬಲಮುರಿಕಾಯಿ, ಕೆಸವಿನ ದಂಟು, ಅತಿಮಧುರದ ಬೇರು, ಎಲಚಿಬೇರು, ಮೋಟುಮರ, ಕಕ್ಕೆಗಿಡದ ಬೇರು ಇವೇ ಮೊದಲಾದ ಆನೆಯ ಮನಸ್ಸಿಗೆ ಸಂತೋಷವನ್ನು ಕೊಡುವ ಆಹಾರ ಪಾನೀಯಗಳನ್ನು ನೀಡಿ ಆನೆಯ ಸಂತಾಪವನ್ನು ಶಮನ ಮಾಡಲು ಪ್ರಯೋಗಿಸಬೇಕು ಎಂದು ಶಾಸ್ತ್ರಕಾರ ಹೇಳುತ್ತಾನೆ.

ಆನೆಗಳಿಗೆ ಜ್ವರ, ನೆಗಡಿ, ಕಾಮಾಲೆ, ಕಾಲುಬಾಯಿ ರೋಗ, ಚಪ್ಪೆರೋಗ, ಸಂಧಿವಾತ, ಗಳಲೆರೋಗ, ಕ್ಷಯ ರೋಗಗಳೂ ಬರುವುದುಂಟು ಹಾಗೆಯೇ ಕಾಡು ನಾಯಿಗಳಿಗೆ ಹುಚ್ಚು ಬಂದು ಅಥವಾ ಹುಚ್ಚುಬಂದ ಹುಲಿಯ ಕಡಿತದಿಂದಲೂ ಆನೆಗಳಿಗೂ ರೇಬಿಸ್ ಬರುವುದುಂಟು. ವಿಪರೀತ ಚಳಿಗೆ ದೇಹ ಒಡ್ಡಲ್ಪಟ್ಟಾಗ ನ್ಯೂಮೇನಿಯಾ ಬರುವ ಸಾಧ್ಯತೆ ಇದೆ. ಚಳಿಯ ವಾತಾವರಣದಲ್ಲಿ ಆನೆ ದೀರ್ಘಕಾಲವಿದ್ದಾಗ ದಣಿವಿನಿಂದ ಆನೆಗಳ ದೇಹ ಸುಕ್ಕುಗಟ್ಟುವುದು. ಕಣ್ಣಿನ ಊತದಿಂದಲೂ ಅವು ಬಳಲುತ್ತವೆ. ಆನೆಯ ದೇಹದೊಳಗೆ ಜಂತು ಹಾಗೂ ಲಾಡಿಹುಳಗಳಾಗುವುದುಂಟು. ಆ ಸಂದರ್ಭದಲ್ಲಿ ಅವುಗಳಿಂದ ಪಾರಾಗಲು ನಿಸರ್ಗದಲ್ಲಿ ದೊರಕುವ ಖನಿಜ ಲವಣಗಳಿಂದ ಕೂಡಿದ ಜೇಡಿಮಣ್ಣನ್ನು ತಿಂದು ಜಂತು ಭಾದೆಯಿಂದ ಪಾರಾಗುತ್ತವೆ. ಇಂಥ ನೆಲವನ್ನು ಉಪ್ಪುಗುಂಡಿಗಳೆಂದು ಕರೆಯುತ್ತಾರೆ. ಔಷಧದ ಗುಣವಿರುವ ಮತ್ತಿ, ಜಾಲರಿ ಮರಗಳ ತೊಗಟೆಯನ್ನು ತಿಂದು ಆನೆಗಳು ಹಲವು ಕಾಯಿಲೆಗಳನ್ನು ತಾವೇ ಪರಿಹರಿಸಿಕೊಳ್ಳುತ್ತವೆ. ಹೊಸದಾಗಿ ಹುಟ್ಟಿದ ಆನೆ

ಮರಿಗಳಿಗೆ 'ನೆಕ್ರೋಟಿಕ್ ಎಂಟೆರೊಕೋಲಿಟಿಸ್' ಎಂಬ ರೋಗ ಕಾಡುವುದುಂಟೆಂದು ಸಿ.ಎಚ್. ಬಸಪ್ಪನವರ್ ತಿಳಿಸುತ್ತಾರೆ.

ಅಶ್ವವೈದ್ಯದ ಕುರಿತು ಹೆಚ್ಚಿನ ಮಾಹಿತಿ ಚಾವುಂಡರಾಯನ ಕೃತಿಯಾದ ಲೋಕೋಪಕಾರ ದಲ್ಲಿ ದೊರೆಯುತ್ತದೆ. ಗಜವೈದ್ಯದ ಕುರಿತು ಲೋಕೋಪಕಾರದಲ್ಲಿ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಕೇವಲ ಎರಡೇ ಎರಡು ಪದ್ಯಗಳಲ್ಲಿ ಗಜ ವೈದ್ಯದ ವಿಚಾರವನ್ನು ಪ್ರಸ್ತಾಪಿಸಿದ್ದಾನೆ. ಅವನ ಪ್ರಕಾರ ಮೆಣಸು, ವಿಳಂಗ, ಕಳವಿಗೆ, ಚಿತ್ರಮೂಲ, ನೀಲಾಂಜನ, ರಾಶ್ಮೆ, ಕೋಷ್ಠ, ಬಜೆ, ಓಮ, ಇಂಗು, ಅತಿಬಜೆ, ಪಂಚಲವಣ, ಸಾಸಿವೆ, ಜೀರಿಗೆ, ಶುಂಠಿ, ತ್ರಿಫಲಾ, ನೇರಳೆ ತೊಗಟೆ, ತಪಸಿ, ಮೆಣಸಿನ ಬಳ್ಳಿ, ಹಿಪ್ಪಲಿ ಮೂಲ, ಹುಲಗಿಲ ಬೇರು, ಹಾಲೆಮರದ ಬೇರು, ಕಹಿ ಪಡುವಲದ ಸಮೂಲ, ಯುವಕ್ಷಾರ ಈ ಮೂಲಿಕೆಗಳನ್ನು ಕುಟ್ಟಿ ತೆಗೆದ ರಸವನ್ನು ಆನೆಗಳಿಗೆ ಕುಡಿಸಿದರೆ ಸರ್ವವ್ಯಾಧಿಗಳು ಇಲ್ಲವಾಗುತ್ತವೆ. ಈ ಎಲ್ಲಾ ಮೂಲಿಕೆಗಳ ಚೂರ್ಣವನ್ನು ಅಂಬಿಲದಲ್ಲಿ ಕದಡಿ ಕುಡಿಸುವುದರಿಂದ ಆನೆಗಳಿಗೆ ಬರುವ ಶೂಲೆ, ಗುಲ್ಮ, ಕ್ರಿಮಿ ಭಾದೆ, ಕೆಮ್ಮು, ಅರುಚಿ, ಜಡತೆ ಮುಂತಾದ ರೋಗಗಳು ನಿವಾರಣೆಗೊಳ್ಳುತ್ತವೆ ಎಂದು ತಿಳಿಸುತ್ತಾನೆ(ನೋಡಿ: ಲೋಕೋಪಕಾರ, ೯-೨೪೫, ೨೪೬). ಆನೆ ತುಂಬಾ ಬಲಿಷ್ಠ ಪ್ರಾಣಿಯಾದುದರಿಂದ ಅದಕ್ಕೆ ಮೂವತ್ತಕ್ಕೂ ಮೇಲ್ಪಟ್ಟು ಮೂಲಿಕೆಗಳಾಗಿ ಬಳಸುವಂತೆ ಚಾವುಂಡರಾಯ ತಿಳಿಸುತ್ತಾನೆ. ಆದರೆ ಮೂಲಿಕೆಗಳನ್ನು ಯಾವ ಪ್ರಮಾಣದಲ್ಲಿ ಬೆರೆಸಬೇಕು, ಯಾವ ಪ್ರಮಾಣದಲ್ಲಿ ಆನೆಗಳಿಗೆ ನೀಡಬೇಕು ಎನ್ನುವ ಕುರಿತು ಎಲ್ಲಿಯೂ ತಿಳಿಸಿರುವುದಿಲ್ಲ. ಆದರೆ ಸೋಮೇಶ್ವರನು ಮಾನಸೋಲ್ಲಾಸದಲ್ಲಿ ಆನೆಗಳಿಗೆ ಉಂಟಾಗುವ ವಿವಿಧ ರೋಗಗಳು, ಅವುಗಳಿಗೆ ಬಳಸಬೇಕಾದ ಮೂಲಿಕೆಗಳು, ಔಷಧವನ್ನು ಬಳಕೆ ಮಾಡುವ ಕ್ರಮ ಮುಂತಾದವುಗಳ ಕುರಿತು ವಿವರಿಸಿದ್ದಾನೆ.

### ಆನೆಗಳ ಆಹಾರಕ್ರಮ

ಆನೆಗಳ ಪೋಷಣೆಯನ್ನು ರಾಜನಾದವನು ಸರಿಯಾಗಿ ನೋಡಿಕೊಳ್ಳಬೇಕು. ಒಳ್ಳೆಯ ತುಪ್ಪ, ಮೊಸರಿನೊಡನೆ ಆಹಾರವನ್ನು ಬೆರಸಿಕೊಡಬೇಕು ಎಂದು ಸೋಮೇಶ್ವರನು ತಿಳಿಸುತ್ತಾನೆ. ಅಷ್ಟೇ ಅಲ್ಲದೆ ಪುಷ್ಟಿಯನ್ನು ತರುವ ಮಾಂಸಗಳ ರಸದಿಂದ ಕೂಡಿದ ಅಮೃತದಂತೆ ಸಿಹಿಯಾದ ಕಬ್ಬಿನ ಜಲ್ಲೆಗಳನ್ನು ತಿನ್ನಿಸಬೇಕು. ಗಿಳಿಯ ರೆಕ್ಕೆಗಳಂತೆ ಹಸಿರಾದ ನೋಡಲು ಕಣ್ಣಿಗೆ ಮನೋಹರವಾದ ಭತ್ತದ ಹುಲ್ಲಿನ ಸಿವುಡುಗಳನ್ನು ತಿನ್ನಿಸಬೇಕು.

ಆನೆಯೊಂದಕ್ಕೆ ಪ್ರತಿನಿತ್ಯ ೨೦೦ ಕೆ.ಜಿ. ಆಹಾರ, ೮೦ ಲೀ. ನೀರಿನ ಅಗತ್ಯವಿದೆ. ಅದು ಸಮರ್ಪಕವಾಗಿ ಕಾಡಿನೊಳಗೆ ಸಿಗದಿದ್ದಾಗ ಹೊರಗೆ ಬರುತ್ತವೆ. ಅವುಗಳಿಗೆ ಕಾಡಿನೊಳಗೆ ಬೇಕಾಗಿರುವ ಆಹಾರ ಎಂದರೆ ಪ್ರಮುಖವಾಗಿ ಹುಲ್ಲು. ಕಾಡಿನಂಚಿನಲ್ಲಿರುವ ಹಳ್ಳಿಗರು ತಮಗೆ ಸೇರಿದ ಪಶುಗಳನ್ನು ಕಾಡಿನೊಳಗೆ ಪ್ರತಿದಿನ ಬಿಡುವುದರಿಂದ ಆನೆಗಳಿಗೆ ಬೇಕಾಗಿರುವ ಹುಲ್ಲು ಕಡಿಮೆಯಾಗಿ ಆಹಾರ ಅರಸಿ ಕಾಡಿನಿಂದ ಹೊರಬರುತ್ತವೆ. ದನ ಅಥವಾ ಎಮ್ಮೆ ಪ್ರತಿನಿತ್ಯ ೨೦ ಕೆ.ಜಿ. ಹುಲ್ಲು ತಿನ್ನುತ್ತವೆ. ಹೀಗೆ ಸಾವಿರಾರು ಪಶುಗಳು ಕಾಡಿನೊಳಗೆ ಹುಲ್ಲು ತಿಂದರೆ ಆನೆಗಳಿಗೆ ಆಹಾರ ಕಡಿಮೆಯಾಗುವುದರಲ್ಲಿ ಅನುಮಾನವಿಲ್ಲ(ವಿಜಯವಾಣಿ. ೨೬.೬.೨೦೧೩, ಪು.೯).

ಹೊಸದಾದ ಗೋಧಿಯ ಅಥವಾ ಯವಧಾನ್ಯದ ಗುಗ್ಗರಿಗೆ ಅನೇಕ ವಿಧವಾದ ಹಣ್ಣುಗಳನ್ನು ಬೆರೆಸಿ ಆನೆಗೆ ತಿನ್ನಿಸುವುದರಿಂದಲೂ, ಕಾಲಕ್ಕೆ ತಕ್ಕಂತೆ ಹಸಿರಾದ ಅಥವಾ ಒಣಗಿದ ಹುಲ್ಲುಗಳನ್ನು ತಿನ್ನಿಸುವುದರಿಂದಲೂ ಅನೇಕ ವಿಧವಾದ ಕ್ಷೀರಪಾನಗಳನ್ನು ಸಕ್ಕರೆ ಬೆರಸಿ ಮಾಂಸ ರಸದೊಡನೆ ಕುಡಿಸುವುದರಿಂದಲೂ, ಎರಡುವೇಳೆ ನೀರು ಕುಡಿಸುವುದರಿಂದಲೂ, ಜಲಾಶಯಗಳಲ್ಲಿ ಸ್ನಾನ ಮಾಡಿಸುವುದರಿಂದಲೂ, ಮಣ್ಣಿನಿಂದ ತಯಾರಿಸಿದ ಮೃದುವಾದ ಹಾಸಿಗೆಗಳಿಂದಲೂ, ಆಟವಾಡಲು ಧೂಳು ಮತ್ತು ಅನೇಕ ಯೋಗ್ಯ ಆಟಿಕೆಗಳಿಂದಲೂ, ಪ್ರತಿನಿತ್ಯವೂ ಆನೆಗಳನ್ನು ಸಂತೋಷವಾಗಿರುವಂತೆ ನೋಡಿ ಕೊಂಡು ಪುಷ್ಟಿಯಾಗಿ ಬೆಳೆಯುವಂತೆ ಮಾಡಬೇಕು.

ಸೋಮನಾಥನು ಮಾಂಸದ ರಸವನ್ನು ಇತರ ಆಹಾರದೊಂದಿಗೆ ಬೆರೆಸಿ ಆನೆಗಳಿಗೆ ಕೊಡಬೇಕೆಂದು ಹೇಳಿದ್ದಾನೆ. ಪ್ರಾಯಶಃ ಆನೆಗಳು ಪೌಷ್ಟಿಕವಾಗಿ ಬೆಳೆಯಲು ಮಾಂಸಾಹಾರದ ಅಗತ್ಯವಿದೆ ಎಂದೋ ಅಥವಾ ಆ ಕಾಲದ ಅರಸರು ತಾವು ಸಾಕಿದ ಆನೆಗಳಿಗೆ ಮಾಂಸಾಹಾರದ ರಸವನ್ನು ಇತರ ಆಹಾರದೊಂದಿಗೆ ಬೆರೆಸಿಕೊಡುತ್ತಿದ್ದರೋ ಗೊತ್ತಿಲ್ಲ. ಆದರೆ ಆನೆಗಳು ಸ್ವಭಾವತಃ ಸಸ್ಯಾಹಾರಿ ಪ್ರಾಣಿಗಳು. ಅವು ತಮಗೆ ಕಿರುಕುಳ ನೀಡಿದ ಪ್ರಾಣಿ ಅಥವಾ ಮದವೇರಿದಾಗ ಎದುರಾದ ಪ್ರಾಣಿಗಳನ್ನು ಕೊಂದ ಉದಾಹರಣೆಗಳಿವೆ ಯಾದರೂ ಆ ಪ್ರಾಣಿಗಳನ್ನು ಆಹಾರವಾಗಿ ಸ್ವೀಕರಿಸಿದ ಉದಾಹರಣೆಯಿಲ್ಲ.

ಸಿ.ಎಚ್. ಬಸಪ್ಪನವರ್ ಕರ್ನಾಟಕ ಅರಣ್ಯ ಇಲಾಖೆಯಲ್ಲಿ ಅಧಿಕಾರಿಯಾಗಿ ಕಾರ್ಯ ನಿರ್ವಹಿಸಿದವರು. ಆನೆಗೆ ಸಂಬಂಧಿಸಿದಂತೆ ಅಪಾರ ಜ್ಞಾನವುಳ್ಳ ಅವರು ಕನ್ನಡದಲ್ಲಿ ಗಜಗಾಮಿನಿ ಎನ್ನುವ ಪುಸ್ತಕವೊಂದನ್ನು ಬರೆದಿದ್ದಾರೆ. ಇದರಲ್ಲಿ ಆನೆಗಳ ಆಹಾರದ ಕುರಿತಾಗಿ ವಿವರಿಸುತ್ತಾರೆ. ಆನೆಗಳು 'ಎಳೆಯ ಬಿದಿರು, ಕಬ್ಬು, ಹೊಲದಲ್ಲಿ

ಬೆಳೆದುನಿಂತಿರುವ ಬೆಳೆಗಳು ಆನೆಗಳಿಗೆ ತುಂಬಾ ಇಷ್ಟ. ದೊಡ್ಡ ಬಂಬುಗಳನ್ನು ತಿನ್ನುವಾಗ ಇಡೀ ಬಂಬಿನ ಮೆಳೆಯನ್ನು ಕಿತ್ತು ತಿನ್ನಲಾಗುವುದಿಲ್ಲ. ಒಂದೊಂದಾಗಿ ಕಾಂಡಗಳನ್ನು ಕಿತ್ತು ತಿನ್ನುವುದು. ಹಸಿರು ಬಿದಿರು, ಹಲವು ಸಸ್ಯಗಳು, ಬಿದಿರಿನ ಕಳಲೆ ಎಲ್ಲವನ್ನು ತಿನ್ನುತ್ತವೆ. ಆನೆಗಳಿಗೆ ಆಹಾರದ ಅಭಾವ ತಲೆದೋರಿದಾಗ ಅರಣ್ಯದ ನೆಲದ ಮೇಲೆ ಬಿದ್ದು ಒಣಗಿದ ಬಂಬುಗಳನ್ನೂ ತಿನ್ನುವವು. ರತನ್ ಬೆತ್ತ ಹಾಗೂ ಗಲಗು ಆನೆಗಳಿಗೆ ಪ್ರಿಯವಾದವುಗಳು. ಬಾಳೆಯ ಗಿಡವನ್ನು ಕಿತ್ತುಹಾಕಲ್ಪಟ್ಟು ಅದರ ದಿಂಡು ಮುಂಗಾಲಿನ ಸಹಾಯದಿಂದ ಎರಡು ಭಾಗವಾಗಿ ಸೀಳಿ ಕಾಂಡವನ್ನು ತಿನ್ನುತ್ತವೆ. ಹಲವು ಸಲ ಚಿಕ್ಕ ತೆಂಗಿನ ಗಿಡಗಳೂ ಕೀಳಲ್ಪಟ್ಟು ಅವುಗಳ ಎಳೆಯ ಕಾಂಡದೊಂದಿಗೆ ಟೊಂಗೆಗಳನ್ನು ಮತ್ತು ಕಾಯಿಗಳನ್ನೂ ಆನೆಗಳು ತಿನ್ನುವವು'[೧೪೯] ಎಂದು ಹೇಳುತ್ತಾರೆ.

ಆನೆಗಳಿಂದ ತಿನ್ನಲ್ಪಡುವ ರಸಭರಿತ ಸಸ್ಯಗಳಲ್ಲಿ ಕಾಡುಕೇದಿಗೆ ಹಾಗೂ ಕೊಂಡಮಯೂರ ಮುಖ್ಯವಾಗಿದ್ದು ಇವೆರಡೂ ಅರಣ್ಯದ ಗದ್ದೆ ಹಾಗೂ ಹಡ್ಲುಗಳ ಬದಿಯಲ್ಲಿ ಅಲ್ಲದೆ ನಾಲೆಹರಿಗಳಗುಂಟ ವಿಪುಲವಾಗಿ ಬೆಳೆಯುವವು. ಚದುರಂಗ(ಲ್ಯಾಂಟೀನಾ) ಎಂಬ ಹೊರದೇಶದಿಂದ ಬಂದ ಸಸ್ಯದ ಎಲೆಗಳನ್ನು ದೀರ್ಘವಾದ ಬೇಸಿಗೆ ಕಾಲ ಇಲ್ಲವೇ ಬರಗಾಲದಲ್ಲಿ ತಿನ್ನಲ್ಪಡುವವು.[೧೫೦]

ನಯಸೇನ ಹಣ್ಣುಗಳ ಹೆಸರನ್ನೇಳುತ್ತ ಬಾಳೆ, ನೇರಳೆ, ಈಳೆ, ಕಿತ್ತೀಳೆ, ತಾಳೆ, ತುಂಬುರ, ಕರ್ಜೂರ, ಇಮ್ಮಾವು, ಪೇರಿಳ, ಕಾಂಚೀಳೆ, ನಾರಂಗ, ಬೇಳ, ಇನಿದಪ್ಪ ಮೈಂದವಾಳೆ, ಕಾಗೆದೊಂಡೆಹಣ್ಣು, ಅತ್ತಿಯ ಹಣ್ಣು, ವಟಫಲ ಇತ್ಯಾದಿ ವಿವರಗಳನ್ನು ಕೊಡುತ್ತ ಬೇಳದ ಹಣ್ಣನ್ನು ಬೇಡರು ತಮ್ಮ ದೇವತೆಗಳಿಗೆ ಅರ್ಪಿಸುತ್ತಿದ್ದರು ಎಂದು ಹೇಳುತ್ತಾನೆ. ಹಾಗೆಯೇ ಬೇಳದ ಹಣ್ಣುಗಳನ್ನು ಆನೆ ತಿಂದರೆ ಅವು ಚಿಪ್ಪೊಡೆಯದೆ ಹಾಗೆಯೇ ಹೊರಬರುತ್ತವೆ, ಆದರೆ ಒಳಗಿನ ತಿರುಳು ಮಾತ್ರ ಕರಗಿಹೋಗುತ್ತದೆಂಬುದನ್ನು ಉಲ್ಲೇಖಿಸಿದ್ದಾನೆ'[೧೫೧]

ಹಾಗೆಯೇ ಬೆಂಡೆ, ತಡಸಲು, ಹೊನ್ನೆ, ಕಲ್ಲುಮುತ್ತಲು, ಅರಳಿ, ಆಲ, ಮಾವು, ನಾಯಿಬೇಲ, ಪಂಚಗಿ, ಕತ್ತಿಕಾಯಿ ಮುಂತಾದ ಗಿಡಗಳ ತೊಗಟೆಯನ್ನು ಕಿತ್ತು ತಿನ್ನುತ್ತವೆ. ಅದರಲ್ಲಿಯೂ ಬೆಂಡೆ ತೊಗಟೆ ಆನೆಗೆ ಪ್ರಿಯವಾದ ಆಹಾರವಾಗಿದೆ. ಸಾಗವಾನಿ ಮರದಲ್ಲಿ ಕಡಿಮೆ ವಯಸ್ಸಿನ ಮರದ ತೊಗಟೆ, ಕೊಂಬೆಗಳನ್ನೂ ಕಿತ್ತು ತಿನ್ನುತ್ತವೆ ಮತ್ತು ಆಲದ ಮರದ ಬಿಳಲುಗಳನ್ನು ಕಿತ್ತು ತಿನ್ನುತ್ತವೆ.

ಮುರುಕಲು ಮರದ ಮೇಲಿನ ಎಲೆಗಳು ಚಿಗಿಯುವಾಗಲೇ ಆನೆಗಳು ತಿಂದುಹಾಕುತ್ತವೆ. ನೆಲ್ಲಿ, ಅರಳಿ, ಆಲ, ಕಾರೆ, ಬಸವನಪಾದ ಮುಂತಾದ ಮರದ ಎಲೆಗಳನ್ನೂ ಆನೆಗಳು ತಿನ್ನುತ್ತವೆ. ಹುಲ್ಲಿನ ಜಾತಿಯ ಕರಡ, ಗಲಗು, ನಿಂಬೆಹುಲ್ಲು ಮುಂತಾದ ಹುಲ್ಲನ್ನೂ ಆನೆ ತಿನ್ನುತ್ತವೆ.

ಮೈಸೂರು ದಸರೆಗೆ ಆಗಮಿಸುವ ಆನೆಗಳಿಗೆ ಬೆಳಗಿನ ಆರು ಗಂಟೆ ಮೊದಲ ಭೋಜನದ ಹೊತ್ತು. ಆಗಲೇ ಬಾಣಸಿಗರು ಅರಣ್ಯ ಇಲಾಖೆ ವೈದ್ಯರ ಉಸ್ತುವಾರಿಯಲ್ಲಿ ಉದ್ದು, ಗೋಧಿ, ತರಕಾರಿ, ಈರುಳ್ಳಿ ಬೇಯಿಸಿ ಇಷ್ಟು ದಪ್ಪದ ಬೆಣ್ಣೆ ಸುರಿದು ಒಂದೊಂದು ಆನೆಗೂ ತಲಾ ಹತ್ತು ಕೆಜಿಯಷ್ಟು ದೊಡ್ಡ ಪಾತ್ರೆಗೆ ಸುರಿದು ಮುಂದಿಡುತ್ತಾರೆ. ಅವು ಆರಾಮವಾಗಿ ತಿಂದು ಮುಗಿಸಿ ವಿಶ್ರಾಂತಿ ಪಡೆಯುತ್ತವೆ. ಬೆಳಿಗ್ಗೆ ಹತ್ತು ಗಂಟೆಗೆ ಬಿಸಿಲೇರುತ್ತಿದ್ದಂತೆ ಅವುಗಳಿಗೆ ಮತ್ತೊಂದು ರೌಂಡ್ ಊಟ. ಈಗ ಭತ್ತ, ಹಸಿ ಹುಲ್ಲು, ಉಪ್ಪು, ಕಾಯಿ, ಕಬ್ಬು, ಬೆಲ್ಲ ಇನ್ನಿತರ ಪರಿಕರಗಳನ್ನು ಮಿಶ್ರ ಮಾಡಿ ತಿನ್ನಸಲಾಗುತ್ತದೆ. ಇದಾದ ನಂತರ ಆನೆಗಳ ಮೊದಲ ಸುತ್ತಿನ ತಾಲೀಮಿಗೆ ಸಿದ್ಧವಾಗುತ್ತವೆ. ಮುಂದೆ ನಡೆಯುತ್ತ ಮೈಸೂರು ಸುತ್ತುತ್ತವೆ. ತಿರುಗಾಡಿ ಲಾಯಕ್ಕೆ ಬಂದ ಮೇಲೆ ಮತ್ತೆ ವಿಶ್ರಾಂತಿ, ಸ್ನಾನ ಇತ್ಯಾದಿ ಪ್ರಕ್ರಿಯೆ. ಮಧ್ಯೆ ಮಧ್ಯೆ ಹಸಿ ಹುಲ್ಲು ಆಲದ ಸೊಪ್ಪುಗಳ ರಾಶಿ ಆನೆಗಳ ಮುಂದಿರಲೇಬೇಕು. ಸೊಪ್ಪು ತಿಂದು ನಿಂತಲ್ಲೇ ನಿದ್ದೆ ತೆಗೆದ ನಂತರ ಸಂಜೆ ನಾಲ್ಕು ಗಂಟೆಗೆ ಮತ್ತೆ ಭತ್ತ ಹುಲ್ಲು ಕಾಯಿ, ಬೆಲ್ಲ ತಿನ್ನಿಸುವ ಸರದಿ. ಇದಾದ ನಂತರ ಸಂಜೆಯ ತಾಲೀಮು. ಇಳಿ ಸಂಜೆ ಹೊತ್ತು ನಗರ ಸುತ್ತಾಡಿ ಬಂದ ಆನೆಗಳಿಗೆ ರಾತ್ರಿ ಏಳು ಗಂಟೆಗೆ ರಾತ್ರಿ ಊಟದಲ್ಲಿ ಮತ್ತೆ ಉದ್ದು, ಗೋಧಿ, ತರಕಾರಿ, ಬೆಣ್ಣೆಯ ಸಮಾರಾಧನೆ ನಡೆಯುತ್ತದೆ.[೧೫೨]

ಆನೆಗಳಲ್ಲಿ ೪೦೦೦ ಕಿಲೋಗ್ರಾಂ ಭಾರವಿರುವ ಒಂದು ಗಂಡಾನೆಗೆ ಇಪ್ಪತ್ತಾಲ್ಕು ಗಂಟೆಗಳಲ್ಲಿ ಸುಮಾರು ೧೪೦ರಿಂದ ೨೦೦ ಕಿಲೋಗ್ರಾಂ ಆಹಾರ ಬೇಕಾಗುತ್ತದೆ. ಹೆಣ್ಣಾನೆಗಳು ಕೊಂಚ ಕಡಿಮೆ ತಿನ್ನುತ್ತವೆ.

'ಆನೆಯ ಆಹಾರವು ಅದರ ದೇಹದ ಮೂಲಕ ಪ್ರಯಾಣ ಮಾಡಲು ಸುಮಾರು ಎರಡುವರೆ ದಿನಗಳು(೪೮ ತಾಸಿಗೂ ಹೆಚ್ಚು) ಹಿಡಿಯುವುದು. ಈ ಎಲ್ಲಾ ಕಾಲದಲ್ಲಿ ಅದು ಹೆಚ್ಚು ಸಮಯ ಪಚನ ಮಾಡುವ ರಸದಲ್ಲಿ ಮತ್ತು ಸೂಕ್ಷ್ಮ ಏಕಾಣುಜೀವಿಗಳ ನೊರೆಯಲ್ಲಿ ಕಳಿಯುತ್ತಲೇ ಇರುವುದು. ಚರಿತ್ರೆಯ ಆದಿಭಾಗದಲ್ಲಿ ಹಲವು ಡೈನೋಸಾರ್‌ಗಳು ಜೀರಿಗೆ ಗಿಡ ಮತ್ತು ತಾಳೆಮರಗಳನ್ನು ತಿನ್ನುತ್ತಿದ್ದಾಗ ಇಂತಹ ಸಮಸ್ಯೆಗಳನ್ನು ಎದುರಿಸಿ ದೈತ್ಯಾಕಾರವನ್ನು ತಳೆದು ಅವುಗಳನ್ನು ಪರಿಹರಿಸಿಕೊಳ್ಳುತ್ತಿದ್ದವಂತೆ'.[೧೫೩] ಆನೆಗಳು ತಮ್ಮ ಆಹಾರವನ್ನು ಜೀರ್ಣಿಸಿಕೊಳ್ಳುವುದನ್ನು ಹಾಗೂ ಆಹಾರವನ್ನು ತನ್ನ ದೇಹದಲ್ಲಿ ಕ್ರೋಡೀಕರಿ

ಸುವುದರ ಜೊತೆಗೆ ಉತ್ತಮ ಪಚನಕ್ರಿಯೆಯಿಂದ ಆರೋಗ್ಯವನ್ನು ಕಾಪಾಡಿಕೊಳ್ಳುವುದು ಆನೆಯ ವಿಶಿಷ್ಟ ಆಹಾರಕ್ರಮವೆಂದು ಗಜಗಾಮಿನಿ ಕೃತಿಯಲ್ಲಿ ವಿವರಿಸಿದ್ದಾರೆ.

ಗಜಗಳ ರೋಗ, ಆರೈಕೆ, ಚಿಕಿತ್ಸ ಕ್ರಮಗಳನ್ನು ಪ್ರಾಚೀನ ಗಜಶಾಸ್ತ್ರ ಕೃತಿಗಳಾದ ೩ನೇ ಸೋಮೇಶ್ವರನ ಮಾನಸೋಲ್ಲಾಸ, ಚಾವುಂಡರಾಯನ ಲೋಕೋಪಕಾರ, ಇತರೆ ಗಜಶಾಸ್ತ್ರ ಕೃತಿಗಳಲ್ಲಿ ಮಹತ್ವವಾದ ವಿವರಗಳನ್ನು ಉಲ್ಲೇಖಿಸಿರುವುದನ್ನು ಗಮನಿಸಬಹುದು.

**ಮಾವುತರ ಪಾತ್ರ**

ಮಾವುತರು ಹಾಗೂ ಆನೆಗಳ ನಡುವೆ ಅನ್ಯೋನ್ಯತೆ ಬಂದಾಗ ಮಾತ್ರ ಆನೆಗಳು ಮಾವುತನ ಮಾತುಗಳನ್ನು ಕೇಳುವುದು ಸಾಧ್ಯ. ಅನ್ಯೋನ್ಯತೆ ಬಾರದಿದ್ದಲ್ಲಿ ಮನುಷ್ಯನಿಗಿಂತ ಬಲಿಷ್ಠವಾದ ಪ್ರಾಣಿ ಆನೆಯಿಂದ ಮಾವುತನು ಹತನಾಗುವ ಸಂಭವವೇ ಹೆಚ್ಚು. ಹೀಗಾಗಿ ಪ್ರಾರಂಭದಲ್ಲಿ ಆನೆಗಳನ್ನು ಪಳಗಿಸುವಾಗ ಕಠಿಣ ಕ್ರಮಗಳನ್ನು ತೆಗೆದುಕೊಂಡರೂ ತರಬೇತುಗೊಂಡ ಆನೆಯೊಂದಿಗೆ ಸೌಹಾರ್ದಯುತವಾಗಿ ಸ್ನೇಹದಿಂದ ಮಾವುತ ವರ್ತಿಸಬೇಕಾಗುತ್ತದೆ. ಸಾಮಾನ್ಯವಾಗಿ ಆನೆಯನ್ನು ಪಳಗಿಸುವ ಕಾರ್ಯದಲ್ಲಿ ತೊಡಗುವವರೂ ಹಾಗೂ ಮಾವುತರಾಗುವವರು ಆನೆಗಳನ್ನು ತುಂಬಾ ಹತ್ತಿರದಿಂದ ಬಲ್ಲ ಆದಿವಾಸಿ ಸಮುದಾಯದವರಾಗಿರುತ್ತಾರೆ. ಇವರು ಸಾಮಾನ್ಯವಾಗಿ ಹಲವು ತಲೆಮಾರುಗಳಿಂದಲೂ ಮಾವುತರಾಗಿ ಕಾರ್ಯ ನಿರ್ವಹಿಸುವ ಕುಟುಂಬಗಳಿಗೆ ಸೇರಿದವ ರಾಗಿರುತ್ತಾರೆ. ಉದಾಹರಣೆಗೆ ಕರ್ನಾಟಕದಲ್ಲಿ ಮಾವುತರಾಗಿ ಕಾರ್ಯ ನಿರ್ವಸುವವರಲ್ಲಿ ಸೋಲಿಗ, ಕಾಡುಕುರುಬ ಮುಂತಾದ ಆದಿವಾಸಿ ಸಮುದಾಯಕ್ಕೆ ಸೇರಿದವರೇ ಹೆಚ್ಚಾಗಿದ್ದಾರೆ. ಆನೆ ಮತ್ತು ಮಾವುತನ ನಡುವಿನಷ್ಟು ಗಾಢವಾದ ಪ್ರಾಣಿ ಮತ್ತು ಮಾನವನ ಸಂಬಂಧ ಬೇರೊಂದು ಪ್ರಾಣಿಗಳಲ್ಲಿ ಕಂಡುಬರುವುದಿಲ್ಲ. ಏಕೆಂದರೆ ಮಾವುತನ ಸಂಜ್ಞೆಯಿಂದಲೇ ಅವನು ಸೂಚಿಸಿದ ಏನೆಲ್ಲಾ ಕೆಲಸಗಳನ್ನು ಆನೆ ಮಾಡಬಲ್ಲದು ಎಂಬುದಕ್ಕೆ ಹಲವಾರು ನಿದರ್ಶನಗಳಿವೆ. 'ಭಾರತೀಯ ಸಾಹಿತ್ಯದ ಪ್ರಕಾರ ಆನೆಯು ನೂರಾಯಿಪ್ಪತ್ತು ಮರ್ಮಸ್ಥಳ ಗಳನ್ನು ಹೊಂದಿದ್ದು ಇವುಗಳಲ್ಲಿ ಅರವತ್ತಾನ್ಲಲ್ಕು ಮರ್ಮಸ್ಥಳಗಳನ್ನು ಒಂದೇವೊಂದು ಮೆತ್ತನೆಯ ತಿವಿತದಿಂದ ಮದದಲ್ಲಿದ್ದಾಗಲೂ ಈ ದೈತ್ಯಾಕಾರಿ ಪ್ರಾಣಿಯನ್ನು ಪರಿಣಾಮ ಕಾರಿಯಾಗಿ ನಿಗ್ರಹಿಸಬಹುದು ಎಂಬುದು ತಿಳಿದುಬಂದಿದೆ.'[೧೫೪] ಒಟ್ಟಾರೆಯಾಗಿ ಮಾವುತನಿಲ್ಲದ ಸಾಕಿದ ಆನೆಯನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ. ಮಾವುತರ ದಿನಚರಿ ಮುಂಜಾನೆ ಐದು ಗಂಟೆಗೆ ಪ್ರಾರಂಭವಾಗುತ್ತದೆ. ಎದ್ದೊಡನೆ ಆನೆಗಳನ್ನು ನೋಡುವುದು ಅವರಿಗೆ ಪ್ರಿಯವಾದ ಸಂಗತಿ.

## ಮಾವುತರ ವಿಭಾಗೀಕರಣ

ಮಾವುತರ ಗುಣಸ್ವಭಾವಗಳಿಂದ ಅವರನ್ನು ವಿವಿಧ ಗುಣದವರೆಂದು ವಿಭಾಗೀಕರಣ ಮಾಡಲಾಗುತ್ತದೆ. ಇವರಲ್ಲಿ ಒಟ್ಟು ಮೂರು ಗುಣದ ಮಾವುತರನ್ನು ಗುರುತಿಸಲಾಗಿದ್ದು ಅವರಿಗೆ ಕ್ರಮವಾಗಿ ರಾಘವನ್, ಯುಕ್ತಿಮಾನ್, ಬಲವಾನ್ ಎಂದು ಗುರುತಿಸಲಾಗುತ್ತದೆ.

### ರಾಘವನ್ ಮಾವುತ

ಇವನು ತನ್ನ ಆನೆಯೊಡನೆ ಯಾವಾಗಲೂ ಮೈತ್ರಿಯಿಂದ ಇರುವನು. ಆನೆಯ ಗುಣಸ್ವಭಾವವನ್ನರಿತು ಆನೆಯ ವೈಶಿಷ್ಟ್ಯ ಮತ್ತು ಅನುಕೂಲದಂತೆ ನಡೆದುಕೊಳ್ಳುವನು. ಆನೆಗೆ ಏನೂ ಹಿಂಸೆ ಮಾಡದೆ ಅದಕ್ಕೆ ಪ್ರಿಯವಾದ ಮಾತುಗಳನ್ನಾಡಿ ಸಂತೋಷ ಪಡಿಸುವವನಾಗಿರುತ್ತಾನೆ. ಆನೆಯ ಇಷ್ಟಕ್ಕನುಗುಣವಾಗಿ ಕಾಲಕಾಲಕ್ಕೆ ಆಹಾರ ನೀರು ಯಥೇಚ್ಛವಾಗಿ ನೀಡುವವನಾಗಿರುತ್ತಾನೆ. ಈ ರೀತಿಯ ಗುಣದವನು ರಾಘವನ್ ಮಾವುತನಾಗಿರುತ್ತಾನೆ.

### ಯುಕ್ತಿಮಾನ್ ಮಾವುತ

ತನ್ನ ಆನೆ ಹಾಗೂ ತನ್ನ ಅನುಕೂಲದಂತೆ ವರ್ತಿಸುವವನಾಗಿರುತ್ತಾನೆ. ಇವನೂ ಕೂಡ ತನ್ನ ಆನೆಯನ್ನು ಎಚ್ಚರದಿಂದಲೇ ಸಾಕುವವನಾಗಿರುತ್ತಾನೆ. ಆನೆಗೆ ಯಾವ ರೀತಿಯ ತೊಂದರೆಯಾಗದಂತೆ ಹಾಗೂ ತನಗೂ ಅನುಕೂಲವಾದಂತೆ ವರ್ತಿಸುವವನೇ ಯುಕ್ತಿಮಾನ್ ಮಾವುತನಾಗಿರುತ್ತಾನೆ.

### ಬಲವಾನ್ ಮಾವುತ

ತನ್ನ ಆನೆಯ ಕುರಿತು ಏನೊಂದೂ ಚಿಂತಿಸದೆ ತನ್ನದೇ ಆದ ಜಾಣ್ಮೆ, ಶಕ್ತಿ ಸಾಮರ್ಥ್ಯಗಳನ್ನು ಚಲಾಯಿಸುವವನಾಗಿರುತ್ತಾನೆ. ಅವನು ತನ್ನ ಆನೆಗೆ ಮೇಲಿಂದ ಮೇಲೆ ಕಟುವಾದ ರೀತಿಯಲ್ಲಿ ನಿರ್ದಯಿಯಂತೆ ವರ್ತಿಸುವವನಾಗಿರುತ್ತಾನೆ. ತನ್ನ ವರ್ತನೆಯಿಂದ ಆನೆಗೆ ನೋವಾಗುತ್ತದೆಯೋ ಇಲ್ಲವೋ ಎಂಬುದನ್ನು ಗಮನಿಸುವ ಗೊಡವೆಗೆ ಹೋಗುವುದಿಲ್ಲ. ಮಾವುತನ ಈ ರೀತಿಯ ಸ್ವಭಾವದಿಂದಾಗಿ ಅವನ ಹಿಡಿತದಲ್ಲಿರುವ ಆನೆಯು ಅವನಿಗೇ ತಿರುಗಿಬೀಳುವ ಸಂದರ್ಭಗಳಿರುತ್ತವೆ. ಅಕಸ್ಮಾತ್ ಮದ ಬಂದಾಗ ಇಲ್ಲವೇ ಸಮಯಕ್ಕೆ ಸರಿಯಾಗಿ ಸಾಕಷ್ಟು ಆಹಾರ ನೀರು ನೀಡದೆ ಕಠಿಣ ಕೆಲಸಕ್ಕೆ ತೊಡಗಿಸಿದಾಗ ಆನೆಯು ಮಾವುತನ ವಿರುದ್ಧ ತಿರುಗಿಬೀಳುವ ಸಾಧ್ಯತೆಗಳು ಹೆಚ್ಚು. ಒಮ್ಮೊಮ್ಮೆ ಇಂಥ ಮಾವುತನನ್ನು ಸಾಯಿಸಲೂ ಆನೆ ಹಿಂದು ಮುಂದು ನೋಡುವುದಿಲ್ಲ.

## ಪ್ರಜ್ಞಾ ಎಂಬ ಮಾವುತೆ

ಪ್ರಜ್ಞಾ ಕರಾವಳಿ ತೀರದ ಪರಿಚಿತ ಹೆಸರು ಡಿ.ಕೆ. ಚೌಟ ಅವರ ಮಗಳು. ಬಾಲಿವುಡ್ ಮ್ಯೂಸಿಕ್ ಡೈರೆಕ್ಟರ್ ಅವರ ಸಹೋದರಿ. ಕೇರಳ ರಾಜ್ಯದಲ್ಲಿ ಆನೆಗಳನ್ನು ರೋಲ್ಸ್ ರಾಯ್ ಕಾರುಗಳು ಎಂದೇ ಈಗಲೂ ಕರೆಯಲಾಗುತ್ತದೆ. ಇಂತಹ ಮೂರು ರೋಲ್ಸ್ ರಾಯ್‌ಗಳನ್ನು ಯಾವುದೇ ಕಾಡಿನ ಕೆಲಸ ಕೊಡದೆ ತಮ್ಮ ಖರ್ಚಿನಿಂದ ಸಾಕುವ ದೇಶದ ಮೊದಲ ಮಹಿಳಾ ಮಾವುತೆ ಪ್ರಜ್ಞಾ ಚೌಟ ಆಗಿದ್ದಾರೆ.

ಪ್ರಜ್ಞಾ ಚೌಟರ ತಂದೆ ಡಿ.ಕೆ. ಚೌಟ ತಮ್ಮ ಮಗಳ ಆಸಕ್ತಿ ಕುರಿತು ಹೇಳುವ ಮಾತು ಹೀಗೆ: ಪ್ರಜ್ಞಾ ಬಾಲ್ಯದಲ್ಲಿ ತನ್ನ ತಾಯಿಯ ಜೊತೆಯಲ್ಲಿ ಕರಾವಳಿಯ ದೇವಸ್ಥಾನಗಳಿಗೆ ಹೋದಾಗ ಅಲ್ಲಿರುವ ದೇವಸ್ಥಾನದ ಆನೆಗಳನ್ನು ನೋಡಿ ಇಂತಹ ಆನೆಗಳನ್ನು ತಾನು ಸಾಕಬೇಕೆಂದು ಕನಸು ಕಾಣುತ್ತಿದ್ದಳು. ಈ ಎಲ್ಲಾ ವಿಚಾರಗಳು ನಮಗೆ ತಿಳಿಯುತ್ತಿರಲಿಲ್ಲ. ದೇವಸ್ಥಾನದ ಆನೆಗಳ ಜೊತೆಯಲ್ಲಿ ಬಹಳ ಹೊತ್ತು ಕಳೆಯುತ್ತಿದ್ದಳು. ಬಾಲ್ಯದಲ್ಲಿ ಪ್ರಜ್ಞಾರ ಮನಸ್ಸಿನೊಳಗೆ ಆನೆಗಳು ತಮ್ಮ ಜಾಗವನ್ನು ನಿರ್ಧಾರ ಮಾಡಿಕೊಂಡಿದ್ದವು. ಆನೆಗಳಿಗೆ ಮನೆಯಿಂದಲೆ ಬಾಳೆಹಣ್ಣು, ಇತರೆ ಹಣ್ಣುಹಂಪಲುಗಳನ್ನು ನೀಡುತ್ತಿದ್ದಳು. ಆನೆಗಳೆಂದರೆ ಪ್ರಜ್ಞಾಳಿಗೆ ಈಗಲೂ ಬಹಳ ಆಸಕ್ತಿ. ವರ್ಷದಲ್ಲಿ ಆರು ತಿಂಗಳು ಊರಿಗೆ ಬಂದರೆ ಸಾಕು ಬಿಡಿ. ದುಬಾರೆಯಲ್ಲಿಯೇ ಜಾಸ್ತಿ ಹೊತ್ತು ಕಳೆಯುತ್ತಾಳೆ. ಇವರಿಗೆ ಧರ್ಮವೆಂಬ ಆನೆಯ ಮೇಲೆ ವಿಶೇಷವಾದ ಪ್ರೀತಿ ಇದೆ.

ಪ್ರಜ್ಞಾ ಚೌಟ ಹುಟ್ಟಿದ್ದು ಮಾತ್ರ ಘಾನಾ ದೇಶದಲ್ಲಿ. ಕಾರಣ ಡಿ.ಕೆ. ಚೌಟ ಘಾನಾದಲ್ಲಿ ಉದ್ಯೋಗದಲ್ಲಿದ್ದರು. ರಜೆಯ ಅವಧಿಯಲ್ಲಿ ಮಂಜೇಶ್ವರದ ಮನೆಗೆ ಬಂದು ಇರುತ್ತಿದ್ದರು. ಇದೇ ಸಮಯದಲ್ಲಿ ಪ್ರಜ್ಞಾರಿಗೆ ಆನೆಯ ಮೇಲೆ ಅಂಬಾರಿ ಮಾಡುವ ಕನಸು ಇತ್ತು. ಪ್ರಜ್ಞಾ ಲಂಡನ್ ಯೂನಿವರ್ಸಿಟಿಯಲ್ಲಿ ಮಾಸ್ ಕಮ್ಯುನಿಕೇಷನ್ ವಿದ್ಯಾಭ್ಯಾಸ ಮಾಡಿದ್ದಾರೆ. ನಂತರ ಎರಡು ವರ್ಷಗಳ ಕಾಲ ಬೆಂಗಳೂರಿನ ಚಿತ್ರಕಲಾ ಅಕಾಡೆಮಿಯಲ್ಲಿದ್ದು ಅಲ್ಲಿಂದ ಲಂಡನ್ ವಿ.ವಿ.ಯಲ್ಲಿ ಪ್ರಾಚ್ಯವಾಸ್ತುಗಳ ಪದವಿ ಪಡೆದುಕೊಂಡಿದ್ದಾಳೆ. ನಂತರ ಆನೆಯ ಬದುಕಿನ ಮೇಲೆ ವಿಶೇಷ ಆಸಕ್ತಿಯನ್ನು ಇಟ್ಟುಕೊಂಡಿದ್ದಾಳೆ.

ಆನೆಗಳನ್ನು ಸಾಕುವ ವಿಧಾನ ಹಾಗೂ ಅದರ ಬದುಕಿನ ಪುಟಗಳ ಕುರಿತು ಸವಿಸ್ತಾರವಾಗಿ ಬರೆದು ಪ್ರಜ್ಞಾ ಚೌಟ ಎಲಿಫೇಂಟ್ ಕೋಡ್ ಬುಕ್ ಎಂಬ ಕೃತಿಯನ್ನು ಹೊರತಂದಿದ್ದಾರೆ. ಈಗಾಗಲೇ ಆಂಗ್ಲ ಭಾಷೆ ಹಾಗೂ ಕನ್ನಡದಲ್ಲಿ 'ಗಜಸಂಹಿತೆ' ಎನ್ನುವ

ಹೆಸರಿನಲ್ಲಿ ಹೊರತಂದಿದ್ದಾರೆ. ಆನೆಗಳನ್ನು ಸಾಕುವ ಹಾಗೂ ಮಾವುತರಿಗೆ ಈ ಕೃತಿ ಮಾರ್ಗದರ್ಶನವಾಗಲಿ ಎಂಬ ಕಾರಣಕ್ಕೆ ಈ ಕೃತಿಯನ್ನು ಬರೆಯಲಾಗಿದೆ. ಹಾಗೂ ಆನೆಗಳ ಕುರಿತು ವಿಶೇಷ ಪ್ರೀತಿ ಹೊಂದಿರುವ ಪ್ರಜ್ಞಾ ಅವರಿಗೆ ಜಗತ್ತಿನ ವಿಶಿಷ್ಟ ಪ್ರಾಣಿಗಳ ಸಾಲಿನಲ್ಲಿರುವ ಆನೆಗಳ ಬಗ್ಗೆ ಯಾವಾಗಲೂ ಆಸಕ್ತಿ ಇದ್ದೇ ಇರುತ್ತದೆ. ಆನೆಗಳ ಕುರಿತು ಸಾಕಷ್ಟು ಅಧ್ಯಯನಗಳು ನಡೆದಿಲ್ಲ. ಅದಕ್ಕಾಗಿ ಆನೆಯನ್ನು ಒಂದು ವಿಷಯವನ್ನಾಗಿ ಅಧ್ಯಯನ ಮಾಡಿದೆ. ಇನ್ನು ಕೂಡ ನನ್ನ ಅಧ್ಯಯನ ಮುಗಿದಿಲ್ಲ ಎಂದು ಪ್ರಜ್ಞಾ ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ(ವಿಜಯಕರ್ನಾಟಕ, ೮.೩.೨೦೧೨, ಪು. ೨).

ಅಸ್ಸಾಮಿ ರಾಜಮನೆತನದ ಪಾರ್ವತಿ ಬರುವಾ ಭಾರತದ ಮೊಟ್ಟಮೊದಲ ಹೆಣ್ಣು ಮಾವುತೆ ಎಂದು ಕರೆಸಿಕೊಂಡಿದ್ದಾರೆ. ಆದರೆ ಎರಡನೇ ಮಾವುತೆ ಮಾತ್ರ ಕರಾವಳಿಯ ಪ್ರಜ್ಞಾ ಚೌಟ. ಕೇರಳದ ವಯನಾಡು, ಕರ್ನಾಟಕ ಮೊದಲಾದ ಕಡೆ ಪ್ರಜ್ಞಾ ಗಂಭೀರವಾಗಿ ಆನೆಗಳ ಬಗ್ಗೆ ಅಧ್ಯಯನ ಮಾಡಿಕೊಂಡು ಮಾವುತೆ ಆಗಿದ್ದಾರೆ. ದುಬಾರೆಯ ಆನೆ ಮನೆಯಲ್ಲೂ ಆನೆಗಳ ಮೇಲೆ ದರ್ಬಾರು ಮಾಡಲು ಕೂಡಾ ಅವರೇ ಆಗಿದ್ದಾರೆ. ಆನೆ ಮನೆಯಲ್ಲಿರುವ ಎರಡು ಆನೆಗಳನ್ನು ಅಸ್ಸಾಂನಿಂದ ತರಿಸಿಕೊಂಡಿದ್ದಾರೆ. ಆದರೆ ಧರ್ಮ ಮಾತ್ರ ಈ ಕ್ಯಾಂಪ್‌ನಲ್ಲಿ ಹುಟ್ಟಿದ ತುಂಟಾನೆ ಆಗಿದೆ.

ಫ್ರಾನ್ಸ್ ದೇಶದ ಕಲಾತ್ಮಕ ನಿರ್ದೇಶಕ ಹಾಗೂ ವೈಲ್ಡ್‌ಲೈಫ್ ಫೋಟೊಗ್ರಾಫರ್ ಫಿಲಿಪ್ ಗೋತಿಯೆ ಅವರು ಫ್ರಾನ್ಸ್ ದೇಶದ ಚಿತ್ರಗಳನ್ನು ಭಾರತದಲ್ಲಿ ತೋರಿಸಲು ಬಂದಿದ್ದಾಗ ಅವರ ಪರಿಚಯ ಪ್ರಜ್ಞಾರಿಗೆ ಆಯಿತು. ಇಬ್ಬರ ಆಸಕ್ತಿ ಕೂಡ ಒಂದೇ ಆಗಿದ್ದರ ಪರಿಣಾಮ ಇಬ್ಬರಿಗೂ ಮದುವೆಯಾಯಿತು. ದಂಪತಿಗಳು ಇಬ್ಬರೂ ಸೇರಿಕೊಂಡು ಫ್ರೆಂಚ್ ಭಾಷೆಯಲ್ಲಿ ಮೊದಲಬಾರಿಗೆ 'ಹಾತಿ'(ಆನೆ) ಎನ್ನುವ ಆನೆಗಳ ಮೇಲೆ ಒಂದು ಸಿನಿಮಾ ತೆಗೆದರು. ಭಾರತದಲ್ಲಿ ಮಾತ್ರವಲ್ಲ ವಿಶ್ವದ ಎಲ್ಲಾ ದೇಶಗಳಿಂದಲೂ ಈ ಚಿತ್ರಕ್ಕೆ ಒಳ್ಳೆಯ ಅಭಿಪ್ರಾಯ ಸೃಷ್ಟಿಯಾಗಿತ್ತು. ಹಾತಿಗೆ ಕೆನಡ ಮೂಲದ ನಿರ್ಮಾಪಕ ರಾಕ್ ಡೆಮರ್ ಹಣ ಸುರಿದಿದ್ದರು. ಈ ಚಿತ್ರ ಹಲವಾರು ಅಂತಾರಾಷ್ಟ್ರೀಯ ಪ್ರಶಸ್ತಿಯನ್ನು ಪಡೆದುಕೊಂಡಿತ್ತು ದೊಡ್ಡ ದೊಡ್ಡ ಫಿಲ್ಮ್ ಫೆಸ್ಟಿವಲ್‌ನಲ್ಲಿ ಸ್ಕ್ರೀನಿಂಗ್ ಕೂಡ ಆಯಿತು.

ಇದಾದ ನಂತರ 'ದಿ ಒಲ್ಡ್ ಎಲಿಫೆಂಟಾ ರೂಟ್' ಎಂಬ ಡಾಕ್ಯುಮೆಂಟರಿ ಚಿತ್ರ ಬಂತು. ಇದರಲ್ಲಿ ಬರ್ಮಾದ ಇರಾವತಿ ನದಿತಟದಿಂದ ಭಾರತಕ್ಕೆ ವಲಸೆ ಬರುವ

ಆನೆಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಲಾಗಿತ್ತು. ಇದು ಖ್ಯಾತ ಬರಹಗಾರ ಪಿ.ಡಿ. ಸ್ಟ್ರೇಚ್ಚಿ ಅವರ 'ಎಲಿಫೆಂಟ್ ಗೋಲ್ಡ್' ಮೇಲೆ ಆಧಾರಿತ ಚಿತ್ರವಾಗಿದೆ. ಇದಾದ ನಂತರ ಎಲಿಫಸ್ ಮ್ಯಾಕ್ಸಿಮಸ್ ಎಂಬ ಡಾಕ್ಯುಮೆಂಟರಿಯಲ್ಲಿ ಆನೆಗಳ ಬದುಕಿನ ಚರಿತ್ರೆಗಳ ಜೊತೆಯಲ್ಲಿ ಏಷ್ಯಾದ ಆನೆಗಳ ಕುರಿತು ದೇವರು ಹಾಗೂ ಆನೆಗಳ ಸಂಬಂಧ ಪ್ರಜ್ಞಾ ಚೌಟರ ಇತಿಹಾಸ ಮೊದಲಾದ ವಿಚಾರಗಳ ಮೇಲೆ ಬೆಳಕು ಚೆಲ್ಲಿದೆ.

ಒಟ್ಟಾರೆಯಾಗಿ ಈ ಅಧ್ಯಯನವು ಆನೆಗಳ ಹುಟ್ಟು ಬೆಳವಣಿಗೆ, ಆನೆಗಳು ಹುಟ್ಟುವ ವನಗಳು, ಆನೆಗಳ ಬೆಳವಣಿಗೆಯ ನೈಸರ್ಗಿಕ ಪ್ರದೇಶಗಳು ಹಾಗೂ ಆ ಪ್ರದೇಶಗಳು ಪ್ರಾಚೀನ ಕಾಲದ ರಾಜರ ಆಳ್ವಿಕೆಗೆ ಒಳಪಡುವುದರೊಂದಿಗೆ ಗಜಗಳ ಹುಟ್ಟು ಮತ್ತು ಬೆಳವಣಿಗೆಗೆ ರಾಜ ಮಹಾರಾಜರು ವಿಶೇಷವಾದ ಆಸಕ್ತಿಯನ್ನು ಹೊಂದಿರುವ ಬಗ್ಗೆ ವಿವರಿಸುತ್ತದೆ. ಆನೆಗಳ ಗುಣ ಪ್ರಭೇದ, ಮಂದ ಭದ್ರ ಮೃಗ ಎಂಬ ಜಾತಿಗಳ ಆನೆಯ ವಿಶೇಷ ಲಕ್ಷಣಗಳನ್ನು ನೀಡಲಾಗಿದೆ. ಆನೆಗಳ ತರಬೇತಿ, ಸಂಜ್ಞಾ ತರಬೇತಿ, ಭಾಷಾ ತರಬೇತಿಗಳ ನೀಡುವಿಕೆ, ಮಾವುತರ ಪಾತ್ರದೊಂದಿಗೆ ಆನೆಗಳ ವಿವಿಧ ರೋಗ ಮತ್ತು ಅದರ ಆರೈಕೆ ಚಿಕಿತ್ಸಾ ವಿಧಾನಗಳು ಹಾಗೂ ಆಹಾರ ಕ್ರಮ ಕುರಿತು ಸಂಕ್ಷಿಪ್ತವಾಗಿ ಶಾಸ್ತ್ರ ಕೃತಿಗಳ ಹಿನ್ನೆಲೆಯೊಂದಿಗೆ ವಿಶ್ಲೇಷಿಸಲಾಗಿದೆ.

**ಕೊನೆಯ ಟಿಪ್ಪಣಿ**

೧. ಶ್ರೀಮತಿ ಎಚ್.ಎಸ್.(ಸಂ), ಸೌಗಂಧಿಕಾ ಪರಿಣಯ, ೨೦೦೪, ಪು. ೩೨೬.

೨. ಲೆಫ್ಟಿನೆಂಟ್ ಕರ್ನಲ್ ವಿಲಿಯಮ್, ಗಜೇಂದ್ರಲೋಕ, ೧೯೫೮, ಪು. ೨೪.

೩. ಅದೇ, ಪು. ೨೨.

೪. ವೆಂಕಟಾಚಲಶಾಸ್ತ್ರೀ(ಸಂ), ಗಜಶಾಸ್ತ್ರ ಶಬ್ದಕೋಶ, ೨೦೧೧, ಪು. ೧೧.

೫. ಕಲಬುರ್ಗಿ ಎಂ.ಎಂ.(ಸಂ), ಸೋಮೇಶ್ವರನ ಮಾನಸೋಲ್ಲಾಸ(ಗದ್ಯಾನುವಾದ) ಪ್ರಥಮ ಸಂಪುಟ, ೧೯೯೮, ಪು. ೫೮-೫೯.

೬. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೨೩೪.

೭. ಅದೇ, ಪು. ೨೩೫.

೮. ಅದೇ, ಪು. ೨೩೫.

೯. ವೆಂಕಟಾಚಲಶಾಸ್ತ್ರಿ(ಸಂ), ಗಜಶಾಸ್ತ್ರ ಶಬ್ದಕೋಶ, ೨೦೧೧, ಪು. ೩೧-೩೨.

೧೦. ಅದೇ, ಪು. ೫೮.

೧೧. ಅದೇ, ಪು. ೫೭.

೧೨. ಅದೇ, ಪು. ೫೩.

೧೩. ಅದೇ, ಪು. ೧೭.

೧೪. ಅದೇ, ಪು. ೫೭.

೧೫. ಅದೇ, ಪು. ೨೩.

೧೬. ಅದೇ, ಪು. ೪೮.

೧೭. ಅದೇ, ಪು. ೮೧.

೧೮. ಅದೇ, ಪು. ೬೧.

೧೯. ಅದೇ, ಪು. ೪೩.

೨೦. ಅದೇ, ಪು. ೭೭.

೨೧. ಅದೇ, ಪು. ೭೭.

೨೨. ಅದೇ, ಪು. ೫೪.

೨೩. ಅದೇ, ಪು. ೪೦.

೨೪. ಅದೇ, ಪು. ೨೪.

೨೫. ಅದೇ, ಪು. ೬೯.

೨೬. ಅದೇ, ಪು. ೭೯.

೨೭. ಶ್ರೀಮತಿ ಎಚ್.ಎಸ್.(ಸಂ), ಸೌಗಂಧಿಕಾ ಪರಿಣಯ, ೨೦೦೪, ಪು. ೩೩೫-೩೩೬.

೨೮. ಅದೇ, ಪು. ೩೩೬.

೨೯. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೧೭೯.

೩೦. ಲೆಫ್ಟಿನೆಂಟ್ ಕರ್ನಲ್ ವಿಲಿಯಮ್, ಗಜೇಂದ್ರಲೋಕ, ೧೯೫೮, ಪು. ೨೧.

೩೧. ಅದೇ, ಪು. ೨೫.

೩೨. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೧೮೯.

೩೩. ಅದೇ, ಪು. ೧೮೦.

೩೪. ಅದೇ, ಪು. ೧೮೦.

೩೫. ಅದೇ, ಪು. ೧೮೧.

೩೬. ಅದೇ, ಪು. ೧೮೧.

೩೭. ಅದೇ, ಪು. ೧೮೧.

೩೮. ವೆಂಕಟಾಚಲಶಾಸ್ತ್ರೀ(ಸಂ), ಗಜಶಾಸ್ತ್ರ ಶಬ್ದಕೋಶ, ೨೦೧೧, ಪು. ೬೨.

೩೯. ಅದೇ, ಪು. ೬೨.

೪೦. ಅದೇ, ಪು. ೬೨.

೪೧. ಅದೇ, ಪು. ೬೨-೬೩.

೪೨. ಅದೇ, ಪು. ೫೬.

೪೩. ಅದೇ, ಪು. ೮೨.

೪೪. ಅದೇ, ಪು. ೫೩.

೪೫. ಅದೇ, ಪು. ೪.

೪೬. ಅದೇ, ಪು. ೩೬.

೪೭. ಅದೇ, ಪು. ೧೩.

೪೮. ಅದೇ, ಪು. ೨೭.

೪೯. ಅದೇ, ಪು. ೩೬.

೫೦. ಅದೇ, ಪು. ೩೧.

೫೧. ಅದೇ, ಪು. ೯೨.

೫೨. ಅದೇ, ಪು. ೬೩.

೫೩. ಅದೇ, ಪು. ೬೩.

೫೪. ಅದೇ, ಪು. ೬೩.

೫೫. ಅದೇ, ಪು.

೫೬. ಅದೇ, ಪು. ೨೯.

೫೭. ಮಲ್ಲೇಪುರಂ ಜಿ. ವೆಂಕಟೇಶ(ಸಂ), ಶಿವತತ್ವ ರತ್ನಾಕರ, ೧೯೯೯, ಪು. ೭೨೪.

೫೮. ಅದೇ, ಪು. ೭೨೪-೭೨೫.

೫೯. ವೆಂಕಟಾಚಲಶಾಸ್ತ್ರೀ(ಸಂ), ಗಜಶಾಸ್ತ್ರ ಶಬ್ದಕೋಶ, ೨೦೦೧, ಪು. ೫೯.

೬೦. ಮಲ್ಲೇಪುರಂ ಜಿ. ವೆಂಕಟೇಶ(ಸಂ), ಶಿವತತ್ವ ರತ್ನಾಕರ, ೧೯೯೯, ಪು. ೭೨೫.

೬೧. ವೆಂಕಟಾಚಲಶಾಸ್ತ್ರೀ(ಸಂ), ಗಜಶಾಸ್ತ್ರ ಶಬ್ದಕೋಶ, ೨೦೦೧, ಪು. ೬೩.

೬೨. ಮಲ್ಲೇಪುರಂ ಜಿ. ವೆಂಕಟೇಶ(ಸಂ), ಶಿವತತ್ವ ರತ್ನಾಕರ, ೧೯೯೯, ಪು. ೭೨೫.

೬೩. ವೆಂಕಟಾಚಲಶಾಸ್ತ್ರೀ(ಸಂ), ಗಜಶಾಸ್ತ್ರ ಶಬ್ದಕೋಶ, ೨೦೦೧, ಪು. ೬೬.

೬೪. ಶ್ರೀಮತಿ ಎಚ್.ಎಸ್.(ಸಂ), ಸೌಗಂಧಿಕಾ ಪರಿಣಯ, ೨೦೦೪, ಪು. ೩೨೭.

೬೫. ಅದೇ, ಪು. ೩೨೭.

೬೬. ಅದೇ, ಪು. ೩೨೭.

೬೭. ಅದೇ, ಪು. ೩೨೭.

೬೮. ಕಲಬುರ್ಗಿ ಎಂ.ಎಂ., ಸೋಮೇಶ್ವರನ ಮಾನಸೋಲ್ಲಾಸ(ಗದ್ಯಾನುವಾದ) ಪ್ರಥಮ ಸಂಪುಟ, ೧೯೯೮, ಪು. ೬೪.

೬೯. ಅದೇ, ಪು. ೬೫.

೭೦. ಅದೇ, ಪು. ೬೫, ೬೬.

೭೧. ವೆಂಕಟಾಚಲಶಾಸ್ತ್ರೀ(ಸಂ), ಗಜಶಾಸ್ತ್ರ ಶಬ್ದಕೋಶ, ೨೦೦೧, ಪು. ೬೬-೬೭.

೭೨. ಅದೇ, ಪು. ೬೭-೬೮.

೭೩. ಅಯ್ಯಂಗಾರ್ ಎಚ್.ಎಸ್.(ಸಂ), ಲೋಕೋಪಕಾರ, ೨೦೦೨, ಪು. ೨೫೭.

೭೪. ಅದೇ, ಪು. ೨೫೮.

೭೫. ಅದೇ, ಪು. ೨೫೮.

೭೬. ಅದೇ, ಪು. ೨೫೮.

೭೭. ಅದೇ, ಪು. ೨೫೯.

೭೮. ಅದೇ, ಪು. ೨೫೯.

೭೯. ಅದೇ, ಪು. ೨೫೯.

೮೦. ಅದೇ, ಪು. ೨೬೦.

೮೧. ರಂಗಸ್ವಾಮಿ, ಚಾವುಂಡರಾಯನ ಲೋಕೋಪಕಾರ: ಒಂದು ಅಧ್ಯಯನ, ೧೯೯೬, ಪು. ೩೫೭–೩೫೮.

೮೨. ಅದೇ, ಪು. ೩೫೮.

೮೩. ಶ್ರೀಮತಿ ಎಚ್.ಎಸ್.(ಸಂ), ಸೌಗಂಧಿಕಾ ಪರಿಣಯ, ೨೦೦೪, ಪು. ೩೩೧, ೩೫೨.

೮೪. ಅದೇ, ಪು. ೩೩೩–೩೩೫.

೮೫. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೨೦೦.

೮೬. ಲೆಫ್ಟಿನೆಂಟ್ ಕರ್ನಲ್ ವಿಲಿಯಮ್, ಗಜೇಂದ್ರಲೋಕ, ೧೯೪೨, ಪು. ೨೪.

೮೭. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೨೭.

೮೮. ಅದೇ, ಪು. ೨೯.

೮೯. ಶ್ರೀಮತಿ ಎಚ್.ಎಸ್.(ಸಂ), ಸೌಗಂಧಿಕಾ ಪರಿಣಯ, ೨೦೦೪, ಪು. ೩೩೨–೩೩೩.

೯೦. ಲೆಫ್ಟಿನೆಂಟ್ ಕರ್ನಲ್ ವಿಲಿಯಮ್, ಗಜೇಂದ್ರಲೋಕ, ೧೯೪೨, ಪು. ೨೧.

೯೧. ಶ್ರೀಮತಿ ಎಚ್.ಎಸ್.(ಸಂ), ಸೌಗಂಧಿಕಾ ಪರಿಣಯ, ೨೦೦೪, ಪು. ೩೩೬.

೯೨. ಅದೇ, ಪು. ೩೩೭.

೯೩. ಅದೇ, ಪು. ೩೩೭.

೯೪. ಅದೇ, ಪು. ೩೩೭–೩೩೮.

೯೫. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೬೮.

೯೬. ಕಲಬುರ್ಗಿ ಎಂ.ಎಂ.(ಸಂ), ಸೋಮೇಶ್ವರನ ಮಾನಸೋಲ್ಲಾಸ(ಗದ್ಯಾನುವಾದ) ಪ್ರಥಮ ಸಂಪುಟ, ೧೯೯೮, ಪು. ೬೨–೬೩.

೯೭. ಅದೇ, ಪು. ೬೩.

೯೮. ಶ್ರೀಮತಿ ಎಚ್.ಎಸ್.(ಸಂ), ಸೌಗಂಧಿಕಾ ಪರಿಣಯ, ೨೦೦೪, ಪು. ೩೩೫

೯೯. ಅದೇ, ಪು. ೩೩೨.

೧೦೦. ವೆಂಕಟಾಚಲಶಾಸ್ತ್ರೀ(ಸಂ), ಗಜಶಾಸ್ತ್ರ ಶಬ್ದಕೋಶ, ೨೦೧೧, ಪು. ೭೩

೧೦೧. ಅದೇ, ಪು. ೭೫.

೧೦೨. ಅದೇ, ಪು. ೭೬.

೧೦೩. ಅದೇ, ಪು. ೭೩.

೧೦೪. ಅದೇ, ಪು. ೫.

೧೦೫. ಅದೇ, ಪು. ೫–೬.

೧೦೬. ಅದೇ, ಪು. ೯.

೧೦೭. ಅದೇ, ಪು. ೯–೧೦.

೧೦೮. ಅದೇ, ಪು. ೧೨.

೧೦೯. ಅದೇ, ಪು. ೧೨.

೧೧೦. ಅದೇ, ಪು. ೧೪.

೧೧೧. ವೆಂಕಟಾಚಲಶಾಸ್ತ್ರಿ(ಸಂ), ಗಜಶಾಸ್ತ್ರ ಶಬ್ದಕೋಶ, ೨೦೧೧, ಪು. ೨೮–೨೯.

೧೧೨. ಅದೇ, ಪು. ೧೭.

೧೧೩. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೨೧೧.

೧೧೪. ಅದೇ, ಪು. ೨೧೧.

೧೧೫. ಅದೇ, ಪು. ೨೧೧.

೧೧೬. ಅದೇ, ಪು. ೨೧೨.

೧೧೭. ಅದೇ, ಪು. ೨೧೦.

೧೧೮. ಲೆಫ್ಟಿನೆಂಟ್ ಕರ್ನಲ್ ವಿಲಿಯಮ್, ಗಜೇಂದ್ರಲೋಕ, ೧೯೪೨, ಪು. ೩೩.

೧೧೯. ಅದೇ, ಪು. ೩೩.

೧೨೦. ಕಲಬುರ್ಗಿ ಎಂ.ಎಂ.(ಸಂ), ಮಾನಸೋಲ್ಲಾಸ(ಗದ್ಯಾನುವಾದ), ೧೯೯೮, ಪು.೬೮.

೧೨೧. ಅದೇ, ಪು. ೬೯.

೧೨೨. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೨೧೯.

೧೨೩. ಕಲಬುರ್ಗಿ ಎಂ.ಎಂ.(ಸಂ), ಮಾನಸೋಲ್ಲಾಸ(ಗದ್ಯಾನುವಾದ), ೧೯೯೮, ಪು. ೬೯-೭೦.

೧೨೪. ಅದೇ, ಪು. ೭೦.

೧೨೫. ಅದೇ, ಪು. ೭೦-೭೧.

೧೨೬. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೪೫.

೧೨೭. ಅದೇ, ಪು. ೨೨೫.

೧೨೮. ಅದೇ, ಪು. ೨೨೫.

೧೨೯. ಅದೇ, ಪು. ೨೨೫.

೧೩೦. ಅದೇ, ಪು. ೨೨೫.

೧೩೧. ವೆಂಕಟಾಚಲಶಾಸ್ತ್ರೀ(ಸಂ), ಗಜಶಾಸ್ತ್ರ ಶಬ್ದಕೋಶ, ೧೯೯೪, ಪು. ೩೬-೩೭.

೧೩೨. ಅದೇ, ಪು. ೩೬.

೧೩೩. ಅದೇ, ಪು. ೫೧.

೧೩೪. ಅದೇ, ಪು. ೫೧.

೧೩೫. ಅದೇ, ಪು. ೫೭.

೧೩೬. ಅದೇ, ಪು. ೬೫.

೧೩೭. ಅದೇ, ಪು. ೭೪.

೧೩೮. ಅದೇ, ಪು. ೮೦.

೧೩೯. ಅದೇ, ಪು. ೮೧.

೧೪೦. ಅದೇ, ಪು. ೮೨.

೧೪೧. ಅದೇ, ಪು. ೮೯.

೧೪೨. ಅದೇ, ಪು. ೧೧.

೧೪೩. ಅದೇ, ಪು. ೧.

೧೪೪. ಕಲಬುರ್ಗಿ ಎಂ.ಎಂ.(ಸಂ), ಸೋಮೇಶ್ವರನ ಮಾನಸೋಲ್ಲಾಸ(ಗದ್ಯಾನುವಾದ) ಪ್ರಥಮ ಸಂಪುಟ, ೧೯೯೮, ಪು. ೧೦೧-೧೦೨.

೧೪೫. ಅದೇ, ಪು. ೧೦೨.

೧೪೬. ಅದೇ, ಪು. ೧೦೧.

೧೪೭. ಅದೇ, ಪು. ೧೦೩, ೧೦೫.

೧೪೮. ಲೆಫ್ಟಿನೆಂಟ್ ಕರ್ನಲ್ ವಿಲಿಯಮ್, ಗಜೇಂದ್ರಲೋಕ, ೧೯೪೨, ಪು. ೪೨-೪೩.

೧೪೯. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೪೦-೪೧.

೧೫೦. ಅದೇ, ಪು. ೪೧.

೧೫೧. ಮಲ್ಲಾಪುರ ಬಿ.ವಿ., ನಯಸೇನ ಮತ್ತು ಅವನ ಕೃತಿಗಳು, ೧೯೭೮, ಪು. ೩೨೩.

೧೫೨. ಗೌರಿ ಸುಂದರ್(ಸಂ), ಮೈಸೂರು ದಸರಾ ಜಂಬೂಸವಾರಿ, (ಲೇ), ಪು. ೧೮೧.

೧೫೩. ಬಸಪ್ಪನವರ ಸಿ.ಎಚ್., ಗಜಗಾಮಿನಿ, ೨೦೦೫, ಪು. ೪೫.

೧೫೪. ಅದೇ, ಪು. ೨೧೮.

## ಅಧ್ಯಾಯ ಐದು

# ಕರ್ನಾಟಕದಲ್ಲಿ ಗಜಸಂಸ್ಕೃತಿ

**ಭಾ**ರತೀಯ ಪರಂಪರೆಯಲ್ಲಿ ಆನೆಗೆ ವಿಶಿಷ್ಟ ಮಾದರಿಯ ಆಚರಣಾಕ್ರಮಗಳಿವೆ. ಗಜಮುಖ ಗಣಪನಿಂದಾಗಿ ಆನೆಗೆ ಪೂಜ್ಯತೆಯ ಭಾವ ಬಂದಿದೆ ಎನಿಸುತ್ತದೆ. ಇಂದಿಗೂ ಮಠಮಾನ್ಯ, ದೇವಸ್ಥಾನಗಳಲ್ಲಿರುವ ಆನೆಗಳನ್ನು ಗಣೇಶನ ಅವತಾರವೆಂದೇ ಭಕ್ತರು ಭಾವಿಸುವುದನ್ನು ಕಾಣಬಹುದಾಗಿದೆ. ಪ್ರಾಚೀನ ಭಾರತದಲ್ಲಿ ಮನುಷ್ಯನಿಗೆ ಉಪಯೋಗವಾಗುವ ಪ್ರಾಣಿಗಳಲ್ಲಿ ಹಸು, ಕುದುರೆಗಳೊಂದಿಗೆ ಆನೆಗೆ ವಿಶೇಷವಾದ ಗೌರವ ದೊರೆಯುತ್ತಿತ್ತು. ಅದರ ವಿಶಿಷ್ಟ ಆಕಾರವೇ ಆನೆಯ ಕುರಿತಾಗಿ ಭಯ, ಗೌರವಗಳು ಮನುಷ್ಯನಲ್ಲಿ ಹುಟ್ಟಿಸಿವೆಯಂದರೆ ತಪ್ಪಾಗಲಾರದು.

### ೧. ನಂಬಿಕೆ

ಆನೆಯು ಲಕ್ಷ್ಮಿಯ ವಾಹನವೆಂಬ ನಂಬಿಕೆ ಇದೆ. ಹೀಗಾಗಿಯೇ ಅಷ್ಟಲಕ್ಷ್ಮಿಯರಲ್ಲಿ ಆನೆಯ ಮೇಲೆ ಕುಳಿತ ಗಜಲಕ್ಷ್ಮಿಯೂ ಒಬ್ಬಳು. 'ಬುದ್ಧಗಯಾ, ಬರಹಟ್, ಅಮರಾವತಿ ಮತ್ತು ಉದಯಗಿರಿಯ ಹಾಳುಬಿದ್ದ ದೇವಾಲಯಗಳಲ್ಲಿ ಧನಲಕ್ಷ್ಮಿಯು ಆನೆಯೊಡನೆ ಕಾಣಿಸಿಕೊಳ್ಳುತ್ತಿರುವುದನ್ನು ಈಗಲೂ ನೋಡಬಹುದು.'[೧] ಆನೆಗಳಲ್ಲಿಯೇ ಉತ್ತಮ ಲಕ್ಷಣವನ್ನು ಹೊಂದಿದ ಆನೆಯು ಐರಾವತ ಆನೆ ಎಂದು ಹೇಳಲಾಗುತ್ತದೆ. ಗಜಶಾಸ್ತ್ರದ ಕೃತಿಗಳಲ್ಲಿ ಐರಾವತ ಆನೆಯ ಭುಜದ ಮೇಲ್ಭಾಗದಲ್ಲಿ ಕಾಮಧೇನು ಹಸುವಿಗಿರುವಂತೆ ರೆಕ್ಕೆಗಳಿವೆ. ಅಂದರೆ ಪವಿತ್ರವಾದ ಐರಾವತ ಆನೆಗೆ ರೆಕ್ಕೆಗಳಿದ್ದವು ಎಂಬ ನಂಬಿಕೆ ಇಂದಿಗೂ ಜನಜನಿತವಾಗಿದೆ.

ಅಮರಾವತಿಯ ದೇವಾಲಯವೊಂದರಲ್ಲಿ ಆನೆಯನ್ನು ವಿಚಿತ್ರ ಪ್ರಾಣಿಯಂತೆ ಕೆತ್ತಲಾಗಿದೆ. ಮುಂಭಾಗದಲ್ಲಿ ಆನೆಯ ತಲೆಯಿದ್ದು ಹಿಂಭಾಗದ ದೇಹವು ಮೀನಿನಾಕಾರದಲ್ಲಿದೆ. 'ಮಹಾಭಾರತದಲ್ಲಿ ಇಂತಹ ಪ್ರಾಣಿಗಳನ್ನು 'ಮೀನವಾಜಿ' ಅಥವಾ 'ಗಜಕ್ರಹಷಾ' ಎಂದು ವರ್ಣಿಸಲಾಗಿದೆ.'[೨] ಇಂಥದೇ ಒಂದು ಶಿಲ್ಪ ಹಂಪೆಯ ದೇವಾಲಯವೊಂದರ ಭಿತ್ತಿಯ ಮೇಲಿದೆ.

ಕರ್ನಾಟಕದ ಪ್ರಸಿದ್ಧ ಸಾಮ್ರಾಟರಾದ ವಿಜಯನಗರದ ಅರಸರು ಕಟ್ಟಿಸಿದ ದೇವಾಲಯದ ಕಂಬಗಳಲ್ಲಿ ಇದಕ್ಕಿಂತಲೂ ಭಿನ್ನವಾದ ಶಿಲ್ಪಗಳಿವೆ. ಸಿಂಹದ ಮುಖ ದೇಹಗಳನ್ನು ಹೊಂದಿದ ಪ್ರಾಣಿಯು ಆನೆಯ ಸೊಂಡಿಲನ್ನು ಹೊಂದಿರುತ್ತದೆ. ಈ ಪ್ರಾಣಿಯನ್ನು ವ್ಯಾಳಿ ಎಂದು ಕರೆಯಲಾಗುತ್ತದೆ. ವ್ಯಾಳಿಯು ಆನೆ ಹಾಗೂ ಸಿಂಹಗಳ ಅಂಶದಿಂದ ಕೂಡಿದ ಪ್ರಾಣಿಯಾಗಿದ್ದು ತುಂಬಾ ಬಲಿಷ್ಠವಾದ ಪ್ರಾಣಿ ಎಂದು ನಂಬಲಾದ ಕಾಲ್ಪನಿಕ ಪ್ರಾಣಿಯಾಗಿದೆ. ಈ ಪ್ರಾಣಿಯಿಂದ ಕೂಡಿದ ಕಂಬಗಳನ್ನು ಹೊತ್ತ ದೇವಾಲಯವು ಎಂದಿಗೂ ಮುಕ್ಕಾಗುವುದಿಲ್ಲ ಎಂಬ ನಂಬಿಕೆ ಇದ್ದುದಾಗಿ ತಿಳಿದುಬರುತ್ತದೆ.

ಅದೇ ರೀತಿಯಾಗಿ ಬಿಳಿಯಾನೆಯ ಕುರಿತಾಗಿ ಭಾರತೀಯರಲ್ಲಿ ಪವಿತ್ರವಾದ ಭಾವನೆ ಇದೆ. ಐರಾವತ ಆನೆಯು ಬಿಳಿಯದಾಗಿದ್ದು ಅದು ಆನೆಗಳಲ್ಲಿಯೇ ಅತ್ಯುತ್ತಮ ವಾದುದು, ದೇವಲೋಕದ ಇಂದ್ರನ ಆನೆಯೆಂಬ ನಂಬಿಕೆ ಇದೆ. ಮಾಯಾದೇವಿಯ ಗರ್ಭದಲ್ಲಿ ಬಿಳಿಯಾನೆಯೊಂದು ಪ್ರವೇಶಿಸಿತು, ಅದೇ ಸಿದ್ಧಾರ್ಥನ ರೂಪದಲ್ಲಿ ಹೊರಬಂದು ಬುದ್ಧನಾಯಿತು ಎಂಬ ನಂಬಿಕೆ ಇದೆ. 'ಬುದ್ಧನ ತಾಯಿ ಮಾಯಾವತಿಯು ಬಿಳಿಯಾನೆ ಯೊಂದು ತನ್ನ ಗರ್ಭ ಸೇರಿದಂತೆ ಕನಸು ಕಂಡಳಂತೆ. ಅದನ್ನು ಮಾರನೇ ದಿನ ತಮ್ಮ ಆಸ್ಥಾನದ ಜ್ಯೋತಿಷಿಗಳಿಗೆ ತಿಳಿಸಿದಾಗ ರಾಣಿಯು ಜನ್ಮ ನೀಡಲಿರುವ ಮಗುವು ಒಬ್ಬ ಸುಪ್ರಸಿದ್ಧ ರಾಜ ಇಲ್ಲವೇ ಮಹಾನ್ ಯೋಗಿಯಾಗುವನೆಂದು ಭವಿಷ್ಯ ನುಡಿದರು. ಈ ಕಥೆಯು ಭರ್‌ಹಟ್‌ನಲ್ಲಿರುವ ಸ್ತೂಪವೊಂದರಲ್ಲಿ ಚಿತ್ರಿಸಲಾಗಿದೆ'[೩] 'ಬಿಳಿಯಾನೆಯು ಭವ್ಯವಾದ ಕೈಲಾಸ ಪರ್ವತವೆಂದೂ, ಅವಕ್ಕೆ ನಾಲ್ಕು ಕೋರೆಗಳೂ, ಎಲ್ಲಾ ಬಗೆಯ ಆಭರಣಗಳೂ, ಕರ್ಣಾನಂದ ನೀಡುವ ನಿನಾದ ಘಂಟೆಗಳಿಂದ ಕೂಡಿದ್ದವು ಎಂದು ವಾಲ್ಮೀಕಿಯ ರಾಮಾಯಣದಲ್ಲಿ ವರ್ಣಿಸಲಾಗಿದೆ'.[೪] ವಿಯಟ್ನಾಮಿನ ಜನ ಬಿಳಿಯಾನೆಯನ್ನು ಒಬ್ಬ ರಾಜನ ಅವತಾರವೆಂದು ನಂಬಿದ್ದಾರೆ. ಹದಿನೆಂಟು ಕಾಲುಗುರು ಇರುವ ಆನೆಯು ಸುಲಕ್ಷಣವಾದುದೆಂಬ ನಂಬಿಕೆ ಇಂದಿಗೂ ಪ್ರಚಲಿತವಿದೆ. ಹದಿನೆಂಟಕ್ಕಿಂತ ಕಡಿಮೆ ಉಗುರು ಇರುವ ಆನೆಯು ಆಪತ್ತನ್ನು ತರುತ್ತದೆ ಎಂದು ಹೇಳಲಾಗುತ್ತದೆ. ಅಷ್ಟೇ

ಅಲ್ಲದೆ ಸರಿಯಾದ ಅಳತೆ ಇಲ್ಲದೆ ವಕ್ರತೆ ಅಥವಾ ದೈಹಿಕ ನ್ಯೂನತೆಯಿಂದ ಕೂಡಿದ ಆನೆಯು ಅವಲಕ್ಷಣದ ಆನೆ ಎಂಬ ನಂಬಿಕೆ ಜನಜನಿತವಾಗಿದೆ.

ಉತ್ತಮ ಗುಣದ ಆನೆಯಲ್ಲಿ ದೇವಾನುದೇವತೆಗಳು ನೆಲೆಸಿದ್ದಾರೆಂಬ ನಂಬಿಕೆ ಇದೆ. ಆನೆಯ ದೇಹದ ಯಾವ ಯಾವ ಭಾಗಗಳಲ್ಲಿ ಯಾವ್ಯಾವ ದೇವತೆಗಳು ನೆಲೆಸಿದ್ದಾರೆಂಬುದನ್ನು ಸೌಗಂಧಿಕಾ ಪರಿಣಯದಲ್ಲಿ ವಿವರಿಸಿದ್ದಾರೆ. ಆ ವಿವರಗಳು ಈ ಕೆಳಗಿನಂತಿವೆ.

'ಗಜಗಳ ಶಿರಸ್ಸಿನಲ್ಲಿ ಬ್ರಹ್ಮದೇವನು, ಹಣೆಯಲ್ಲಿ ಕುಮಾರಸ್ವಾಮಿಯು, ಕುಂಭಸ್ಥಳದಲ್ಲಿ ವೀರಭದ್ರನು, ನೇತ್ರಗಳಲ್ಲಿ ಸೂರ್ಯ ಚಂದ್ರರು, ಸೊಂಡಿಲಿನ ಕೊನೆಯಲ್ಲಿ ವಿಘ್ನೇಶ್ವರನು, ಶ್ವಾಸದಲ್ಲಿ ಏಕದಶಾ ರುದ್ರರು, ಮುಖದಲ್ಲಿ ಭಾಗ್ಯಲಕ್ಷ್ಮಿಯು, ಕೊಂಬುಗಳಲ್ಲಿ ವೀರ ಲಕ್ಷ್ಮಿಯು, ಕೊಂಬುಗಳ ಕೊನೆಯಲ್ಲಿ ಧರ್ಮನು, ಕಪೋಲಗಳಲ್ಲಿ ನೃಸಿಂಹಸ್ವಾಮಿಯು, ನಾಲ್ಕು ಪಾದಗಳಲ್ಲಿ ನಾಲ್ಕು ವೇದಗಳು, ಸೊಂಡಿಲ ಮಧ್ಯದಲ್ಲಿ ಮಹಾವಿಷ್ಣುವು, ನಖಾಗ್ರಗಳಲ್ಲಿ ಅಷ್ಟಮೀ ಚಂದ್ರನು, ಮೇಗದಲ್ಲಿ ವಾಯುವು, ನಾಭಿಯಲ್ಲಿ ಅಗ್ನಿಯು, ಹೊಟ್ಟೆಯಲ್ಲಿ ವಿಧಾತೃವು, ಗುಹ್ಯದಲ್ಲಿ ಪ್ರಜಾಪತಿಯು, ಮಿಗಿಲಾದ ಅಂಗಗಳಲ್ಲಿ ಲೋಕಭಾರವಂ ವಹಿಸುವ ಸರ್ವಾಧಿಪತಿಗಳೂ ಕೂಡ ವಾಸವಾಗಿರುವರು.'[೫] ಹೀಗೆ ಆನೆಯ ಪ್ರತಿಯೊಂದು ಅಂಗದಲ್ಲಿಯೂ ದೇವಾನುದೇವತೆಗಳು ನೆಲೆಸಿರುವರು ಎಂಬ ನಂಬಿಕೆ ಇದೆ. ಇಂದಿಗೂ ಆನೆಯನ್ನು ಆಕಳಿನಂತೆ ದೇವತೆಗಳನ್ನು ಹೊತ್ತು ತಿರುಗುವ ಪೂಜ್ಯ ಪ್ರಾಣಿ ಎಂದು ಭಾವಿಸಲಾಗುತ್ತದೆ.

ಈ ಭೂಮಿಯನ್ನು ಅಷ್ಟ ದಿಕ್ಕುಗಳಲ್ಲಿಯೂ ದಿಕ್ಪಾಲಕರು ಹೊತ್ತುನಿಂತಿದ್ದಾರೆ ಎಂಬ ನಂಬಿಕೆ ಇರುವಂತೆಯೇ ಭೂಮಿಯನ್ನು ಎಲ್ಲಾ ದಿಕ್ಕುಗಳಲ್ಲಿಯೂ ಆನೆಯೆ ಹೊತ್ತುನಿಂತಿವೆ ಎಂಬ ನಂಬಿಕೆ ಭಾರತೀಯರಲ್ಲಿದೆ. ಬಹುತೇಕ ದೇವಾಲಯದ ಕೆಳಭಾಗದಲ್ಲಿ ಆನೆಗಳ ಸಾಲು ಚಿತ್ರಗಳು ಕೆತ್ತಲ್ಪಟ್ಟಿರುತ್ತವೆ. ಉದಾಹರಣೆಗೆ ಬೇಲೂರು, ಹಳೇಬೀಡಿನ ದೇವಾಲಯಗಳನ್ನು ನೋಡಬಹುದು. ಭೂಲೋಕ, ದೇವಲೋಕವನ್ನು ಹೊತ್ತಿರುವವೇ ಆನೆಗಳು ಎಂಬ ಕಲ್ಪನೆಯೊಂದರಿಂದಾಗಿಯೇ ಶಿಲ್ಪಿಗಳು ಈ ರೀತಿಯ ಶಿಲ್ಪಗಳನ್ನು ಕೆತ್ತಲು ಕಾರಣವಾಗಿವೆ.

ಬಿಳಿಗಿರಿ ರಂಗನಾಥನ ಹೆಂಡತಿಯು ಆ ಪ್ರದೇಶದಲ್ಲಿ ನೆಲೆಸಿರುವ ಸೋಲಿಗ ಬುಡಕಟ್ಟಿಗೆ ಸೇರಿದವಳೆಂಬ ನಂಬಿಕೆ ಇದೆ. ಹೀಗಾಗಿ ರಂಗನಾಥನನ್ನು ತಮ್ಮ ಹೆಣ್ಣನ್ನು ಮದುವೆಯಾದ ಭಾವನೆಂದು ಹೇಳುತ್ತಾರೆ. ಬಿಳಿಗಿರಿ ರಂಗನಾಥನ ಕುರಿತು ಹಾಡು ಹೇಳುವಾಗ, ಕಥೆಯಲ್ಲಿ ರಂಗನಾಥನೇ ಆನೆಯ ರೂಪದಲ್ಲಿ ತಮ್ಮ ಹಟ್ಟಿಗಳಿಗೆ ಭೇಟಿ

ಕೊಡುತ್ತಾನೆಂಬ ನಂಬಿಕೆ ಆ ಬುಡಕಟ್ಟಿನಲ್ಲಿದೆ. ಇಂದಿಗೂ ತಮ್ಮ ಹಟ್ಟಿಗೆ ಬರುವ ಆನೆಗಳು ಸೋಲಿಗರನ್ನು ಏನೂ ಮಾಡುವುದಿಲ್ಲ, ಆನೆಯ ರೂಪದಲ್ಲಿ ರಂಗನಾಥ ಬರುವುದರಿಂದಲೇ ತಮಗಾವ ತೊಂದರೆ ಇಲ್ಲಿಯವರೆಗೂ ಬಂದಿಲ್ಲ ಎಂದು ಸೋಲಿಗರು ತಿಳಿಸುತ್ತಾರೆ.

ಆನೆಗೂ ನಾಯಿಗೂ ಹೊಂದಾಣಿಕೆಯಾಗುತ್ತದೆ. ನಾಯಿ ಆನೆ ಸ್ನೇಹದಿಂದಿರುತ್ತವೆಯೆಂದು ಹೇಳಲಾಗುತ್ತದೆ. ಆದರೆ ಆನೆ ನಾಯಿಗಳು ಒಂದಕ್ಕೊಂದು ಹೊಂದಿಕೊಂಡು ಜೀವನ ನಡೆಸುವುದು ಸಾಧ್ಯವಾಗದ ವಿಚಾರವೆಂದು ವಿದ್ವಾಂಸರು ಹೇಳುತ್ತಾರೆ. ಆನೆ ಬಿಡಾರಗಳಲ್ಲಿರುವ ಮಾವುತರ ಕುಟುಂಬದವರು ನಾಯಿಗಳನ್ನು ಸಾಕುತ್ತಾರೆ. ಈ ರೀತಿ ಸಾಕಿದ ನಾಯಿಗಳಿಗೆ ಆನೆಗಳು ಹೆದರುತ್ತವೆ ಎಂಬ ನಂಬಿಕೆ ಇದೆ. ಆದರೆ ಆನೆಗಳು ನಾಯಿಗೆ ಹೆದರುತ್ತವೆಂಬುದಕ್ಕೆ ಯಾವುದೇ ದೃಷ್ಟಾಂತಗಳಾಗಲೀ, ಉದಾಹರಣೆಗಳಾಗಲಿ ದೊರೆಯುವುದಿಲ್ಲ. ಕನ್ನಡದಲ್ಲಿ ಆನೆ ಮತ್ತು ನಾಯಿಗೆ ಸಂಬಂಧಿಸಿದಂತೆ ಪ್ರಚಲಿತ ಗಾದೆಯೊಂದಿದೆ. ಆನೆ ಹೋಗುತ್ತಿರುತ್ತದೆ, ನಾಯಿ ಬೊಗಳುತ್ತಿರುತ್ತದೆ. ನಾಯಿ ಬೊಗಳುತ್ತದೆಂದು ಆನೆ ಎಂದಾದರೂ ತಿರುಗಿ ನೋಡುತ್ತದೆಯೆ? ನಾಯಿಯ ಬೊಗಳುವಿಕೆಯನ್ನು ನಿರ್ಲಕ್ಷಿಸಿ ಅದು ತನ್ನ ಪಾಡಿಗೆ ತಾನು ಹೋಗುತ್ತಿರುತ್ತದೆ.

ಆನೆಗಳು ಯಾವುದಾದರೂ ಕಾರ್ಯಕ್ರಮಕ್ಕೆ ಹೋಗಿಬಂದಾಗ ಮನುಷ್ಯರು ತಮ್ಮ ಮಕ್ಕಳಿಗೆ ತೆಗೆದಂತೆ ಮಾವುತನು ಆನೆಗೆ ಆಸರ ತೆಗೆಯುತ್ತಾನೆ. ಸಾರ್ವಜನಿಕ ಕಾರ್ಯಕ್ರಮಕ್ಕೆ ಹೋದಾಗ ತನ್ನ ಆನೆಗೆ ದುಷ್ಟಕಣ್ಣು ತಾಗಿರುವ ಸಾಧ್ಯತೆ ಇರುತ್ತದೆ. ಆಸರ ತೆಗೆಯುವುದರಿಂದ ದುಷ್ಟಕಣ್ಣುಗಳ ದೃಷ್ಟಿಯಿಂದ ಆನೆ ಪಾರಾಗುತ್ತದೆಂಬ ನಂಬಿಕೆ ಮಾವುತರಲ್ಲಿದೆ.

'ಅನೇಕ ಆನೆ ಮರಿಗಳು ಹಾವಿನ ಕಡಿತದಿಂದ ಸಾಯುತ್ತವೆ ಎಂದು ಊಜಿಗಳ (ಮಾವುತ) ನಂಬಿಕೆ' ಇದೆ. ಆದರೆ ನಿಜವಾಗಿಯೂ ಆನೆ ಮರಿಗಳು ಹಾವಿಗೆ ಹೆದರುವುದಿಲ್ಲ. ಹಾಗೂ ಆನೆಗಳು ಹಾವಿನ ಕಡಿತದಿಂದ ಸಾವನ್ನಪ್ಪಿದ ಘಟನೆಗಳ ಉದಾಹರಣೆ ದೊರೆಯುವುದಿಲ್ಲ. 'ಹಾವು ಕಡಿದರೆ ಆನೆಯ ಬಾಲದ ಕೂದಲು ಉದುರುತ್ತವೆ ಎಂಬ ನಂಬಿಕೆ ಬರ್ಮೀಯರದಾಗಿದೆ. ಆದರೆ ಇದು ಸಹ ಋಜುವಾತಾಗಬೇಕಾಗಿದೆ.'[೬] ಅದೇ ರೀತಿಯಾಗಿ 'ಇಲಿಯನ್ನು ಕಂಡರೆ ಆನೆಗೆ ಬಹಳ ಭಯ ಎಂಬ ನಂಬಿಕೆ ಇದೆ.'[೭] ಆನೆಯ ಸೊಂಡಿಲಿನೊಳಗೆ ಇಲಿ ತೂರಿ ರಾದ್ಧಾಂತ ಮಾಡುತ್ತದೆ. ಈ ಕಾರಣಕ್ಕಾಗಿಯೇ ಇಲಿಯನ್ನು ಕಂಡರೆ ಆನೆ ಹೆದರುತ್ತದೆ ಎಂದು ಹೇಳಲಾಗುತ್ತದೆ. ಪ್ರಾಯಶಃ ಈ ಕಾರಣಕ್ಕಾಗಿಯೇ ಆನೆಯ ಮುಖದ ಗಣಪನಿಗೆ ಇಲಿಯನ್ನೇ ವಾಹನವಾಗಿ ಮನುಷ್ಯ

ನೋಡುವುದು. ಮಾನವನ ವಿರೋಧಾಭಾಸ ಪ್ರಿಯತೆಗೆ ಇದು ಉತ್ತಮವಾದ ಉದಾಹರಣೆ. ಆದರೆ ವಾಸ್ತವವಾಗಿ ಆನೆಯ ಸೊಂಡಿಲಿನೊಳಗೆ ಇಲಿ ಹೋಗುವುದು ಅಸಾಧ್ಯವಾದ ಮಾತಾಗಿದೆ. ಅಕಸ್ಮಾತ್ ಇಲಿಯು ಆನೆಯ ಸೊಂಡಿಲಿನೊಳಗೆ ಹೋದೀತೆಂದೇ ಭಾವಿಸೋಣ, ಆದರೆ ಆನೆ ಒಮ್ಮೆ ಸೊಂಡಿಲಿನಿಂದ ಸೀನಿದರೆ ಇಲಿಯು ಕೋವಿಯೊಳಗಿನ ಗುಂಡಿನಂತೆ ಹೊರಬಂದು ತನ್ನ ಪ್ರಾಣವನ್ನು ಕಳೆದುಕೊಳ್ಳಬೇಕಾಗುತ್ತದೆ.

ಆನೆಯ ತುಳಿತದಿಂದ ಇಲ್ಲವೇ ಹೊಡೆತದಿಂದ ಮಾವುತ ಸತ್ತರೆ ಮಾವುತನ ಕುಟುಂಬದವರು ಆನೆ ಲಾಯದ ಮುಖಂಡನಲ್ಲಿ ಪತ್ರವೊಂದನ್ನು ಒಯ್ಯುವ ಪದ್ಧತಿ ಬರ್ಮೀಯರೂ ಹಾಗೂ ಭಾರತೀಯ ಬುಡಕಟ್ಟುಗಳಲ್ಲಿ ಕಂಡುಬರುತ್ತದೆ. ಈ ಪತ್ರದಿಂದ ಲೌಕಿಕವಾಗಿ ಮಾವುತನ ಕುಟುಂಬಕ್ಕೆ ಯಾವುದೇ ತರಹದ ಲಾಭವಿಲ್ಲ. 'ಮಾವುತ ಸತ್ತ ಮಾಹಿತಿ ಕೊಡುವ ಪತ್ರದ ಅವಶ್ಯಕತೆ ಇರುವುದು ಅಡವಿಯ(ನಾಟ್) ದೇವತೆಗಳಿಗೆ. ಸತ್ತ ಮಾವುತನ ಆತ್ಮವನ್ನು ತಮ್ಮ ಲೋಕಕ್ಕೆ ಸೇರಿಸಿಕೊಳ್ಳುವುದಕ್ಕೆ ಮುನ್ನ ಆ ದೇವತೆಗಳು ಈ ಮಾಹಿತಿ ಪತ್ರವನ್ನು ಕೇಳುತ್ತಾರೆ'[೮] ಎಂಬ ನಂಬಿಕೆ ಇದೆ. ಆನೆಗಳಲ್ಲಿ ಆಕಾಶದ ಕಡೆ ಮುಖ ಮಾಡಿದ ಅರ್ಧ ಚಂದ್ರಾಕೃತಿಯ ಹಾಲಿನ ಕೆನೆಯ ಬಣ್ಣದ ದಂತಗಳಿರುವ ಆನೆಗಳು ಶ್ರೇಷ್ಠವಾದ ಆನೆಗಳೆಂಬ ನಂಬಿಕೆ ಇದೆ. ಹಾಗೆಯೇ ಭೂಮಿಯ ಕಡೆ ಬಾಗಿದಂತೆ ದಂತಗಳಿರುವ ಆನೆಗಳು ಶ್ರೇಷ್ಠವಾದ ಆನೆಗಳಲ್ಲ. ಅವು ಅಪಶಕುನದ ಪ್ರತೀಕ ಎಂಬ ನಂಬಿಕೆಯೂ ಇದೆ. ಅದೇ ರೀತಿಯಾಗಿ ಕ್ಯಾನ್‌ಜೀಟ್ ಎಂಬ ವಿಶಿಷ್ಟ ದಂತಗಳಿರುವ ಆನೆಗಳು ಸರ್ವ ಶ್ರೇಷ್ಠವಾದ ಆನೆಗಳು, 'ಇಂಥ ಆನೆಗಳು ನೆಲದ ಮೇಲಿದ್ದರೂ ದೇವಲೋಕದ್ದೇ ಎನ್ನುವಷ್ಟು ಅಪೂರ್ವವಾದುದೆಂದು ಬರ್ಮೀಯರು ನಂಬಿಕೆ. ಈ ಆನೆಗಳು ಆನೆಗಳ ದೊರೆಯೆಂದೇ ಅವರು ಭಾವಿಸುತ್ತಾರೆ. ಕ್ಯಾನ್‌ಜಿಟ್ ಆನೆಯ ಬಲಕ್ಕೆ ಹೆದರಿ ಇನ್ನಿತರ ಆನೆಗಳು ಅದರ ಅಡಿಯಾಳಾಗಿ ತಲೆಬಾಗುತ್ತವೆಂಬ ನಂಬಿಕೆ ಬರ್ಮೀಯರಲ್ಲಿದೆ'.[೯]

'ವಯಸ್ಸಾದ ಗಂಡಾನೆಗಳು ಸಂಕಟ ಸಮಯದಲ್ಲಿ ತಮ್ಮನ್ನು ರಕ್ಷಿಸಿಕೊಳ್ಳಲು ಹಾಗೂ ಗಾಯಗೊಂಡಾಗ ಸಹಾಯ ಪಡೆಯಲು ಚೇಲಾ ಎಂಬ ಕಿರಿಯಾನೆಯ ಸಹಾಯಹಸ್ತ ಪಡೆಯುವುದೆಂಬ ನಂಬಿಕೆ ಇದೆ.'[೧೦] ಆನೆಗಳು ಸಹ ಮನುಷ್ಯರಂತೆ ಹತ್ತಿರದ ರಕ್ತಸಂಬಂಧಿಗಳ ಜೊತೆ ದೈಹಿಕ ಸಂಪರ್ಕ ಬೆಳೆಸಲಾರವೆಂಬ ನಂಬಿಕೆ ಇದೆ. ಹಾಗೆಯೇ ಆನೆಗಳು ತುಂಬಾ ನಾಚಿಕೆಯ ಸ್ವಭಾವವನ್ನು ಹೊಂದಿದ ಪ್ರಾಣಿ. ಹೀಗಾಗಿ ಅವು ಸಂಭೋಗವನ್ನು ಮಾಡುವಾಗ ಯಾರಿಗೂ ತಿಳಿಯದಂತೆ ಗುಟ್ಟಾಗಿ ಸಂಭೋಗ ಕ್ರಿಯೆ ನಡೆಸುತ್ತವೆ ಎಂಬ ನಂಬಿಕೆ ಜನಜನಿತವಾಗಿದೆ.

'ರೋಮಿನ ಗ್ರಂಥಕರ್ತ ಪ್ಲಿನೆ(ಕ್ರಿ.ಶ. ೨೩–೭೯) ಎಂಬಾತನು ಆನೆಗಳು ಗುಪ್ತವಾಗಿ ಸಂಭೋಗ ನಡೆಸುತ್ತವೆಂದು ನಂಬಿದ್ದನು'[೧೧] ಆನೆಗಳು ಸಂಭೋಗ ಮಾಡುವುದನ್ನು ಮನುಷ್ಯರು ನೋಡಬಾರದು, ನೋಡಿದರೆ ಅವರಿಗೆ ಒಳಿತಾಗುವುದಿಲ್ಲ ಎಂದು ನಂಬಲಾಗಿದೆ. ಇದೇ ರೀತಿ ಕಾಗೆಗಳು ಹಾಗೂ ಹಾವುಗಳ ಸಂಭೋಗ ಕ್ರಿಯೆಯನ್ನು ನೋಡಬಾರದು, ನೋಡಿದರೆ ಅವರಿಗೆ ಅಪಾಯ ತಪ್ಪಿದ್ದಲ್ಲ ಎಂಬ ನಂಬಿಕೆಯೂ ಇದೆ. ಕಾಗೆಗಳ ಸಂಭೋಗ ಕ್ರಿಯೆಯನ್ನು ನೋಡಿದರೆ ಆ ವ್ಯಕ್ತಿ ಸಾಯುತ್ತಾನೆ. ಅವನ ಸಾವನ್ನು ತಪ್ಪಿಸಲೆಂದೇ ನೀಲಿ ಸುದ್ದಿಯನ್ನು ಹತ್ತಿರದ ಬಂಧುವರ್ಗಕ್ಕೆ ತಲುಪಿಸಲಾಗುತ್ತದೆ. ನೀಲಿ ಸುದ್ದಿಯನ್ನು ಕೇಳಿ ದುಃಖಿಸುತ್ತ ಬಂದ ಬಂಧುಗಳಿಗೆ ನೀಲಿ ಸುದ್ದಿ ಕಳಿಸಿದವರು ಸಿಹಿ ಊಟ ಮಾಡಿ ಕಳಿಸುತ್ತಾರೆ. ಇಂದಿಗೂ ಬುಡಕಟ್ಟು ಸಮುದಾಯದವರು ಕಾಡಿನಲ್ಲಿ ಆನೆಯ ಸಂಭೋಗ ಕ್ರಿಯೆಯನ್ನು ನೋಡಿದರೆ ತಮ್ಮ ಆದಿಮ ದೈವಕ್ಕೆ ಕೋಳಿ ಬಲಿ ನೀಡಿ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾರೆ.

'ಕರಿ ಹಂಸ ಸಿಂಹ ಶರಗತಿ ಸಮ ಪಂಚಧಾರೆಯಿರುತ್ತಮವೂ..' ಯಾವುದೇ ಅಶ್ವದಲ್ಲಿ ಆನೆ, ಹಂಸ, ಸಿಂಹ, ಶರಗತಿಗಳ ಲಕ್ಷಣವುಳ್ಳ ಕುದುರೆಯು ಉತ್ತಮ ಜಾತಿಯದಾಗಿರುತ್ತದೆ ಎಂದು ಅಶ್ವಶಾಸ್ತ್ರ ಹೇಳುತ್ತದೆ. ಅಂದರೆ ಆನೆ ಎಂಬುದು ಶುಭ ಸೂಚಕ ಅಂಶವನ್ನೊಳಗೊಂಡಿದ್ದುದು ಎಂಬ ನಂಬಿಕೆ ಇದೆ.

ಆನೆಯ ತಲೆಯಲ್ಲಿ ಮುತ್ತು ಇರುವುದೆಂದು ನಂಬಿಕೆ ಇದ್ದುದಾಗಿ ತಿಳಿದುಬರುತ್ತದೆ. ಇದಕ್ಕೆ ಉದಾಹರಣೆಯಾಗಿ ದೇವಿ ಪುರಾಣದಲ್ಲಿ ಉಲ್ಲೇಖಿತವಾದಂತೆ 'ಸಿಂಹವು ಆನೆಯ ತಲೆಯನ್ನು ಇಬ್ಭಾಗ ಮಾಡಿ ಮುತ್ತನ್ನು ಕೊಂಡುಹೋಯಿತು ಎಂಬ ಉಲ್ಲೇಖ ದೊರೆಯುತ್ತದೆ'. ಅರ್ಧನಾರೇಶ್ವರನು ಒಂದು ಮಗ್ಗಲು ಆನೆಯೊಳಗಿನ ಮುತ್ತುಗಳ ಮಾಲೆಯನ್ನು ಮತ್ತೊಂದು ಮಗ್ಗಲು ತಲೆಬುರುಡೆಗಳನ್ನೂ ಧರಿಸಿರುತ್ತಾನೆ ಎಂಬ ಉಲ್ಲೇಖಗಳು ದೊರೆಯುತ್ತವೆ.'[೧೨]

ಪುರಾತನ ಭಾರತದಲ್ಲಿ ಆನೆಯು ದೀರ್ಘಾಯುಷ್ಯ ಹೊಂದಿರುವ ಪ್ರಾಣಿ ಎಂದು ನಂಬಲಾಗಿತ್ತು. ಧೀರ್ಘಾಯುಷಿ ಮನುಷ್ಯರನ್ನು ಆನೆಗಳಿಗೆ ಹೋಲಿಸಲಾಗುತ್ತದೆ. ಅಂತಹ 'ಧೀರ್ಘಾಯುಷಿಗಳನ್ನು ಗಜಪ್ರಾಣರೆಂದು ಕರೆಯಲಾಗುತ್ತದೆ.'[೧೩]

ಆನೆಗಳು ತಮ್ಮ ಕೊನೆಯ ದಿನಗಳಲ್ಲಿ ಮರಣವನ್ನು ಆಹ್ವಾನಿಸಲು ಅಜ್ಞಾತ ಸ್ಥಳಕ್ಕೆ ತೆರಳುತ್ತವೆಂದು ಸೋಲಿಗ ಮುಂತಾದ ಬುಡಕಟ್ಟು ಸಮುದಾಯಗಳು ನಂಬಿವೆ. ಎಮರ್‌ಸನ್ ಟೆರಂಟ್ ಅವರು ದಾಖಲಿಸಿರುವಂತೆ ಆಡಮ್ ಶಿಖರದ ಪೂರ್ವಕ್ಕೆ ಇರುವ ಕೊಳ್ಳದಲ್ಲಿರುವ

ಬಂಡೆಗಳ ಮಧ್ಯ ಹಾದುಹೋಗುವ ಕೊರಕಲು ದಾರಿಯಲ್ಲಿ ಚಲಿಸಿ ತಮ್ಮ ಮರಣದ ಸ್ಥಳವನ್ನು ತಲುಪುತ್ತವೆ ಎಂಬ ನಂಬಿಕೆಯನ್ನು ಹೊಂದಿದ್ದಾರೆ ಎಂದು ತಿಳಿಸುತ್ತಾರೆ.'[೧೪] ಭಾರತೀಯ ಆದಿವಾಸಿಗಳು ಸಹ ಆನೆಗಳು ತಮ್ಮ ಪೂರ್ವಜರು ಹೋದ ಸ್ಥಳಕ್ಕೆ ಹೋಗಿ ಕೊನೆಗೊಳ್ಳುತ್ತವೆ ಎಂದು ನಂಬಿದ್ದಾರೆ. ಆದರೆ ವಾಸ್ತವವಾಗಿ ಆನೆಗಳು ವಯೋಸಹಜ ವೃದ್ಯಾಪ್ಯದಿಂದಾಗಿ ದುರ್ಬಲಗೊಂಡು ಕಾಡಿನ ಮಧ್ಯದಲ್ಲಿ ಎಲ್ಲೋ ಒಂದು ಕಡೆ ಮರಣವನ್ನಪ್ಪುತ್ತವೆ. ಹಾಗೆಯೇ ಆನೆಯ ಗರ್ಭಧಾರಣೆಯ ಕಾಲದ ಬಗ್ಗೆಯೂ ಹಲವು ನಂಬಿಕೆಗಳಿವೆ. ಗರ್ಭದಲ್ಲಿರುವ ಮರಿಯು ಹೆಣ್ಣಾದರೆ ಇಪ್ಪತ್ತೆರಡು ತಿಂಗಳು ಹಾಗೂ ಗಂಡಾಗಿದ್ದರೆ ಇಪ್ಪತ್ತೈದು ತಿಂಗಳವರೆಗೆ ಮರಿಗಳು ಗರ್ಭದೊಳಗಿರುತ್ತವೆಂಬ ನಂಬಿಕೆಯೂ ಇದೆ. ಶ್ರೀಲಂಕಾದ ಆದಿವಾಸಿಗಳು ಇಂದು ಪ್ರತಿಯೊಂದು ಶಕ್ತಿಯನ್ನೂ ಕುದುರೆಗಳ ಶಕ್ತಿಗೆ ಹೋಲಿಸಲಾಗುತ್ತದೆ. ಆದರೆ ಪ್ರಾಚೀನ ಭಾರತೀಯರು ಆನೆಯ ಶಕ್ತಿಗೆ ಪ್ರತಿಯೊಂದು ಶಕ್ತಿಯನ್ನು ಹೋಲಿಸುತ್ತಿದ್ದರು. ಮಹಾಭಾರತದ ಭೀಮನಿಗೆ ಒಂದು ಸಾವಿರ ಆನೆಗಳ ಬಲವಿತ್ತು ಎಂದು ಜನಪದ ಕಥೆಯೊಂದರಲ್ಲಿ ಹೇಳಲಾಗಿದೆ. ಜನಪದ ಕಥೆಗಳಲ್ಲಿ ವನರಾಜನೆಂದರೆ ಆನೆಯೇ ಆಗಿದೆ. ಪ್ರಾಯಶಃ ಅದರ ಆಕಾರ, ನಡಿಗೆ ಎಲ್ಲವನ್ನು ಪರಿಗಣಿಸಿ ಆನೆಯನ್ನು ವನರಾಜನೆಂದು ಕರೆದಿರಬೇಕು.

## ೨. ಆಚರಣೆ

ಆನೆಯನ್ನು ಗಣಪತಿಯ ರೂಪದಲ್ಲಿ ಭಾರತದಾದ್ಯಂತ ಪೂಜಿಸಲಾಗುತ್ತದೆ. ಭಾರತೀಯ ಹಿಂದೂಗಳು ಯಾವುದೇ ಪೂಜೆ ಮಾಡುವುದಕ್ಕೆ ಮೊದಲು ಗಣಪತಿಗೆ ಪೂಜೆ ಮಾಡಿ ತರುವಾಯ ಇತರ ದೇವತೆಗಳಿಗೆ ಪೂಜೆಯನ್ನು ನೆರವೇರಿಸುವರು. ಹಿಂದೂ ಸಂಪ್ರದಾಯದ ಬಹುತೇಕ ದೇವಾಲಯದೊಳಗೆ ಗಣೇಶನ ಪ್ರತಿಮೆ ಇರುವುದು ಕಂಡುಬರುತ್ತದೆ. ಗಣೇಶನನ್ನು ಏಕೆ ಮೊದಲಿಗೆ ಪೂಜಿಸಲಾಗುತ್ತದೆ, ಗಣೇಶನಿಗೆ ಆ ವಿಚಿತ್ರವಾದ ಆನೆಯ ಮುಖ, ಡೊಳ್ಳುಹೊಟ್ಟೆ, ಸಣ್ಣ ಕೈಕಾಲುಗಳು ಏಕೆ ಇವೆ ಎಂಬುದಕ್ಕೆ(ಆನೆಯ) ಇರುವ ಪೌರಾಣಿಕ ಕಥೆಯೊಂದು ಬಹುತೇಕ ಭಾರತೀಯರಿಗೆಲ್ಲಾ ಗೊತ್ತು.

ಸಂಚಾರಿಯಾದ ಶಿವ ಲೋಕ ಸಂಚಾರಕ್ಕೆ ಹೋದಾಗ ಸುಮ್ಮನೆ ಕೂತ ಪಾರ್ವತಿಯು ತನ್ನ ಮೈಮೇಲಿನ ಮಣ್ಣನ್ನು ತಿಕ್ಕಿ ತೆಗೆದು ಸಂಗ್ರಹಿಸುತ್ತಿದ್ದಳಂತೆ. ಹೀಗೆ ದಿನಾಲೂ ಕೂಡಿಟ್ಟ ಮಣ್ಣಿನೊಳಗೆ ಒಂದು ಬೊಂಬೆ ಮಾಡಿ ಅದಕ್ಕೆ ಜೀವ ಬರಿಸಿದಳಂತೆ (ಜೀವಕಾಳು ತುಂಬಿದಳು). ಹೀಗೆ ಜೀವಪಡೆದ ಗೊಂಬೆಯನ್ನು ತನ್ನ ಮಗನಾಗಿ ಕಾವಲಿಗೆ ಇರಿಸಿಕೊಂಡಳಂತೆ. ಒಮ್ಮೆ ಪಾರ್ವತಿಯು ಸ್ನಾನ ಮಾಡುವಾಗ ಕದವಿರದ

ತನ್ನ ಮನೆಗೆ ಈ ಗಣೇಶನನ್ನೇ ಕಾವಲಿಗೆ ಕೂಡಿಸಿದಳು. ಅದೇ ಸಂದರ್ಭದಲ್ಲಿ ಆ ಮನೆಗೆ ಬಂದ ಶಿವನನ್ನು ಗಣೇಶನು ಒಳಪ್ರವೇಶಿಸಲು ಬಿಡುವುದಿಲ್ಲ. ಒಳಗೆ ಬಿಡು ಎಂದು ಕೇಳಿದಾಗ ತನ್ನ ತಾಯಿ ಸ್ನಾನ ಮಾಡುತ್ತಿರುವುದಾಗಿ ತಿಳಿಸುತ್ತಾನೆ. ಇದರಿಂದ ಕುಪಿತನಾದ ಶಿವನು ಬಾಗಿಲು ಕಾಯುವ ಈ ಹುಡುಗನ ರುಂಡವನ್ನು ಕತ್ತರಿಸಿ ಮನೆಯೊಳಗೆ ಹೋಗುತ್ತಾನೆ. ಸ್ನಾನ ಮಾಡಿ ಹೊರಬಂದ ಪಾರ್ವತಿ ತನ್ನ ಮಗನಿಗಾದ ದುರವಸ್ಥೆಯನ್ನು ನೋಡಿ ಅದಕ್ಕೆ ಕಾರಣನಾದವನು ತನ್ನ ಗಂಡನೆಂದು ತಿಳಿದು ಗಂಡನೊಂದಿಗೆ ತನ್ನ ಮಗನನ್ನು ಬದುಕಿಸಿಕೊಡುವಂತೆ ಜಗಳವಾಡುತ್ತಾಳೆ. ಕೊನೆಗೆ ಹೆಂಡತಿಯ ಸಂತೃಪ್ತಿಗಾಗಿ ಜೀವಭರಿಸಲು ಒಪ್ಪಿದ ಶಿವನಿಗೆ ಮುಂಡ ಮಾತ್ರ ಕಂಡುಬರುತ್ತದೆ. ರುಂಡವು ಕತ್ತರಿಸಿದಾಗ ಎಲ್ಲಿಯೋ ಬಿದ್ದುಹೋಗಿರುತ್ತದೆ. ರುಂಡ ಸಿಗುವುದೇ ಇಲ್ಲ. ಕೊನೆಗೆ ತನ್ನ ಗಣ ಪರಿವಾರಕ್ಕೆ ಪೂರ್ವದಿಕ್ಕಿನಲ್ಲಿರುವ ಯಾವುದಾದರೂ ಒಂದು ವ್ಯಕ್ತಿಯ ರುಂಡ ತರಲು ಹೇಳುತ್ತಾನೆ. ಆದರೆ ರುಂಡ ಹುಡುಕುತ್ತಾ ಹೋದ ಗಣಗಳಿಗೆ ರುಂಡ ಸಿಗುವುದೇ ಇಲ್ಲ. ಕೊನೆಗೆ ದಾರಿಯಲ್ಲಿ ಕಂಡುಬಂದ ಆನೆಯೊಂದರ ರುಂಡವನ್ನೇ ಗಣಪರಿವಾರ ತೆಗೆದುಕೊಂಡು ಬರುತ್ತಾರೆ. ಆ ಮಗುವಿನ ದೇಹಕ್ಕೆ ಆನೆಯ ರುಂಡವನ್ನಿರಿಸಿ ಜೀವಕಾಳು ತುಂಬಲಾಗುತ್ತದೆ. ಅಂದಿನಿಂದ ಪಾರ್ವತಿಯ ಮಗನಾದ ಗಣೇಶನಿಗೆ ಆನೆಯ ರುಂಡ ಬರುತ್ತದೆ. ಪಾರ್ವತಿಯ ಮಗನಾದುದರಿಂದ ಶಿವನಿಗೂ ಗಣಪತಿಯು ಮಗನಾಗುತ್ತಾನೆ. ಅಷ್ಟೇ ಅಲ್ಲ, ಗಣಗಳೆಲ್ಲರಿಗೂ ಇವನೇ ಅಧಿಪತಿಯಾಗುತ್ತಾನೆ. ಹೀಗಾಗಿ ಇವನಿಗೆ ಗಣಪತಿ ಎಂಬ ಹೆಸರು ಬಂದಿತು ಎಂದು ಪೌರಾಣಿಕ ಕಥೆ ತಿಳಿಸುತ್ತದೆ. 'ಆನೆಯು ಗಣೇಶನೊಂದಿಗೆ ನೇರವಾಗಿ ಸಂಬಂಧ ಹೊಂದಿದುದರಿಂದ ಅದನ್ನು ಹಸುವಿಗಿಂತ ಹೆಚ್ಚು ಪವಿತ್ರವಾದುದೆಂದು ಪರಿಗಣಿಸಬಹುದು'[೧೫]

ಯುದ್ಧ ಸನ್ನದ್ಧರಾದ ಸೈನಿಕರು ತಮ್ಮ ಆಯುಧ, ಆನೆ, ಕುದುರೆಗಳನ್ನು ಅರ್ಚಿಸುವ ಬಗೆಯ ಕುರಿತು ಪಂಪನು ತನ್ನ ಕಾವ್ಯಗಳೆರಡರಲ್ಲಿಯೂ ತಿಳಿಸಿದ್ದಾನೆ. ಅವನ ವಿಕ್ರಮಾರ್ಜುನ ವಿಜಯ ಕಾವ್ಯದಲ್ಲಿ ಒಂದು ಕಡೆ 'ಭದ್ರಮನನುಮಪ್ಪ ವಿಜಯ ಗಜಮುಮನಕ್ಷಯ ರಥಾಸ್ವಕೇತನ ಶರಾಸನ ಶರಧಿ ವಿಚಿತ್ರ ತನುತ್ರ ವಿವಿಧಾಸ್ತ್ರಶಸ್ತ್ರಗಳುಮಂ ಗಂಧ ಧೂಪ ದೀಪಗಳಿಂದರ್ಚಿಸಿ ಪೊಡೆವಟ್ಟಾಗಳ್'[೧೬] ಎಂದು ತಿಳಿಸಿದ್ದಾನೆ. ಇಲ್ಲಿ ಯುದ್ಧಪೂರ್ವದಲ್ಲಿ ಸಮಗ್ರವಾಗಿ ಪೂಜಿಸುವ ಕ್ರಮದ ವಿವರಗಳಿವೆ. ಹಾಗೆಯೇ ಆದಿಪುರಾಣದಲ್ಲಿ ಅಳ್ತಿಯಿಂದರ್ಚಿಸುವ ತುರಂಗದಂತಿರಥಸಂಕುಳಂ.. ಪೂಜಿಸುವ ಜಿನೇಂದ್ರ ಬಿಂಬಂ'.[೧೭] ಎಂದು ತಿಳಿಸುತ್ತಾನೆ. ಆದಿಪುರಾಣ ಧಾರ್ಮಿಕ ಕಾವ್ಯವಾದುದರಿಂದ ಈ ಕಾವ್ಯದಲ್ಲಿ ಯುದ್ಧಪೂರ್ವದ ಪೂಜೆಯಲ್ಲಿ ಜಿನಬಿಂಬವನ್ನ ಪೂಜಿಸುವನು.

ಆನೆಯೊಳಗೆ ವಿಶೇಷವಾಗಿ ತರಬೇತು ನೀಡುವ ಪೂರ್ವದಲ್ಲಿ ಹಲವಾರು ಪೂಜೆಗಳನ್ನು ಮಾಡಲಾಗುತ್ತದಂತೆ. ಈ ಕುರಿತು ಹಲವಾರು ಮೂಢನಂಬಿಕೆಗಳು ತರಬೇತುದಾರರಲ್ಲಿವೆ ಎಂದು ಆನೆಗಳ ಕುರಿತು ಎಲಿಫೆಂಟ್ ಬಿಲ್ಸ್ ಕೃತಿಯನ್ನು ರಚಿಸಿರುವ ಲೆಫ್ಟಿನೆಂಟ್ ಕರ್ನಲ್ ವಿಲಿಯಮ್ಸ್ ತಿಳಿಸುತ್ತಾರೆ. ‘ಆನೆಗಳಿಗೆ ತರಬೇತಿ ನಿಜವಾಗಿ ಆರಂಭವಾಗುವ ಮೊದಲು ನಾಟ್ ಅಥವಾ ಕಾಡಿನ ದೇವತೆಗಳಿಗೆ ಪೂಜೆಯನ್ನು ಅರ್ಪಿಸಲಾಗುತ್ತದೆ.[೧೮]

ಆನೆ ಮರಿಗಳಿಗೆ ಹೆಸರಿಡುವ ಕಾರ್ಯಕ್ರಮವನ್ನು ಆನೆಯನ್ನು ನೋಡಿಕೊಳ್ಳುವ ಮಾವುತರು ಮಾಡುತ್ತಾರೆ. ಆನೆಗೆ ಹೆಸರಿಡುವ ದಿನ ಆನೆಯ ಶಿಬಿರದ ಬಳಿ ಒಂದು ಸಣ್ಣ ಮಂಟಪ ಕಟ್ಟುತ್ತಾರೆ. ಸಾಲು ದೀಪಗಳು ಬೆಳಗಿ ಆರಿಹೋಗುವ ರೀತಿಯನ್ನು ಅನುಸರಿಸಿ ನಾಮದ ದಿನವನ್ನು ಗೊತ್ತುಮಾಡುತ್ತಾರೆ.[೧೯]

**ನೀರಾಜನ ಆಚರಣೆ**

ದೇವರ ಮುಂದೆ ಹಚ್ಚುವ ದೀಪಗಳಿಗೆ ನೀಲಾಂಜನವೆಂಬ ಪದ ಬಳಕೆಯಲ್ಲಿದೆ. ನೀಲಾಂಜನವೆಂದರೆ ನೀಳವಾಗಿರುವ ದೀಪಸ್ಥಂಭಗಳು ಎನ್ನುವ ಅರ್ಥವಿದೆ. ಈ ನೀಲಾಂಜನ ಪದವು ನೀರಾಜನ ಪದದಿಂದ ಬಂದಿದೆ. ‘ವಿಶೇಷವಾಗಿ ನವ ವಧೂವರರಿಗೆ, ವಿಜಯಯಾತ್ರೆಗೆ ಹೊರಡುವ ಯೋಧರಿಗೆ, ವಿಜಯಶಾಲಿಯಾಗಿ ಮರಳಿದ ಅರಸರಿಗೆ, ವಿಶೇಷ ಸಾಧನೆಗೈದ ಜನನಾಯಕರಿಗೆ ದೀಪದ ಆರತಿ ಬೆಳಗುವುದು ಸಂಪ್ರದಾಯವಾಗಿತ್ತು. ಇದಲ್ಲದೆ ರಾಜಲಾಂಛನ ಗಳಿಗೆ, ಸಾರ್ವಭೌಮತ್ವಕ್ಕೆ ಸೇರಿದ ಪಟ್ಟದ ಆನೆ, ಪಟ್ಟದ ಕುದುರೆ, ಆಯುಧ ಮುಂತಾದವುಗಳಿಗೆ ಈ ಬಗೆಯ ದೀಪದಾರತಿ ಬೆಳಗಿ ವಿಶೇಷವಾಗಿ ಪೂಜಿಸಲಾಗುತ್ತಿತ್ತು. ಕಾಶ್ಮೀರದಲ್ಲಂತೂ ಇದಕ್ಕೊಂದು ಪ್ರಮುಖ ಸ್ಥಾನವಿತ್ತು.’[೨೦] ಎಂದು ನಿರಾಜನದ ಆಚರಣೆ ಕುರಿತು ಪ್ರಬಂಧವೊಂದ ರಲ್ಲಿ ವಿವರಿಸಲಾಗಿದೆ.

ರಘುವಂಶದ ಮಹಾರಾಜ ದಿಗ್ವಿಜಯಕ್ಕೆ ಹೊರಡುವಾಗ ಅರಮನೆಯಲ್ಲಿ ಅರಸನಿಗೆ ದಿಗ್ವಿಜಯಿಯಾಗಿ ಮರಳಿ ಬಾ ಎಂದು ಸಾಧ್ವಿಮಣಿಗಳು ಆರತಿ ಬೆಳಗಿ ಕಳಿಸುತ್ತಾರೆ ಎಂದು ಕಾಳಿದಾಸನು ತನ್ನ ರಘುವಂಶದಲ್ಲಿ ವಿವರಿಸುತ್ತಾನೆ. ನೀರಾಜನ ವಿಧಿಯ ಕುರಿತು ತಿಳಿಸುತ್ತ ಹವಿಸ್ಸನ್ನು ಸಮರ್ಪಿಸುತ್ತಾ ವಾಜಿಗಳ ಪೂಜೆ ನಡೆಯುತ್ತಿತ್ತು ಎಂಬ ಉಲ್ಲೇಖ ಇದೆ. ಇಲ್ಲಿ ವಾಜಿ ಎಂಬುದನ್ನು ವಿಶೇಷ ಅರ್ಥದಲ್ಲಿ ಬಳಸಲಾಗಿದೆ. ‘ಕಾಮುಂದಕ ನೀತಿಶಾಸ್ತ್ರದಲ್ಲಿ ಸೈನಿಕರ ಆನೆ, ಕುದುರೆಗಳನ್ನು ವಿಧಿಪೂರ್ವಕವಾಗಿ ಆರತಿ ಬೆಳಗುವ ವಿಧಿಯ ಕುರಿತು ಉಲ್ಲೇಖವಿದೆ’[೨೧] ಅಗ್ನಿ ಪುರಾಣದಲ್ಲಿ ‘ರಾಜಲಾಂಛನಗಳಾದ ಛತ್ರಿ, ಖಡ್ಗ, ಬಿಲ್ಲುಬಾಣ, ದುಂದುಭಿ, ಧ್ವಜ, ಪತಾಕೆಗಳೊಂದಿಗೆ ಆನೆ, ಕುದುರೆಗಳನ್ನು ಅಲಂಕರಿಸಿ ಮಂತ್ರೋಚ್ಚಾರಣೆಯ ಮೂಲಕ ಪೂಜೆ ಮಾಡಬೇಕು’ ಎಂದು ತಿಳಿಸುತ್ತದೆ.

ವರಾಹಮೀರನ ಬೃಹತ್ ಸಂಹಿತೆಯಲ್ಲಿ ನೀರಾಜಿತ ಎಂಬ ಪದ ಬಳಕೆಯಲ್ಲಿದೆ. ನೀರಾಜಿತವೆಂದರೆ ಬೆಳಗುವುದು ಎಂಬರ್ಥದಲ್ಲಿ ಬಳಸಲಾಗಿದೆ. ಇದೇ ಅರ್ಥದಲ್ಲಿ ಶಂಕರಾಚಾರ್ಯರು ನೀರಾಜಿತೆ ಎಂಬ ಪದ ಬಳಸಿದ್ದಾರೆ. ಸೌಂದರ್ಯ ಲಹರಿಯಲ್ಲಿ ಮುಕುಂದ ಬ್ರಹ್ಮೇಂದ್ರ ಮುಕುಟ ನೀರಾಜಿತ ಪದಾಮ್ ಎಂದು ಹೇಳಿದ್ದಾರೆ. ಇಲ್ಲಿ ನೀರಾಜಿತವೆಂದರೆ ಬೆಳಗು, ಹೊಳೆ ಎಂಬರ್ಥದಲ್ಲಿ ಬಳಕೆಗೊಂಡಿದೆ. ನೀರಾಜಿತವೇ ನೀರಾಜನವೆಂದು ಮುಂದೆ ಬಳಕೆಗೊಂಡಿರಬೇಕು.

ಯುದ್ಧ ಸನ್ನದ್ದವಾಗಿ ಹೊರಟಾಗ ಹಾಗೂ ವಿಜಯಶಾಲಿಯಾಗಿ ಹಿಂದುರುಗಿದಾಗ, ರಾಜ್ಯದೊಳಗೆ ವ್ಯಾಧಿಗಳು ಕಾಣಿಸಿಕೊಂಡಾಗ ಈ ನೀರಾಜನ ಆಚರಣೆ ಮಾಡಬೇಕೆಂದು ಕೌಟಿಲ್ಯನು ತಿಳಿಸುತ್ತಾನೆ.

ವರಾಹಮೀರನ ಬೃಹತ್ ಸಂಹಿತೆಯ ನಲವತ್ತಾನ್ಲಕನೇ ಅಧ್ಯಾಯದಲ್ಲಿ ನೀರಾಜನ ವಿಧಿಯ ಕುರಿತು ಇಪ್ಪತ್ತೆಂಟು ಶ್ಲೋಕಗಳಲ್ಲಿ ವಿವರಿಸಲಾಗಿದೆ. ವರಾಹಮಿಹಿರನ ಪ್ರಕಾರ ಸೂರ್ಯೋದಯ ಅಥವಾ ರಾತ್ರಿ ಬೆಳದಿಂಗಳ ವೇಳೆ ಆಕಾಶ ಶುಭ್ರವಾಗಿದ್ದಾಗ ಆನೆ, ಕುದುರೆ, ಯೋಧರಿಗೆ ಈ ನೀರಾಜನ ವಿಧಿ ಮಾಡಬೇಕು ಎಂದು ತಿಳಿಸುತ್ತಾನೆ. ಈ ವಿಧಿ ಆಚರಿಸಲು ಆಷಾಢ ಮಾಸದ ಏಕಾದಶಿಯಾದ ನಾಲ್ಕು ತಿಂಗಳ ತರುವಾಯ ಎನ್ಮೀನ ಕಾರ್ತಿಕದ ಏಕಾದಶಿಯಂದು ಭಗವಂತನು ಯೋಗನಿದ್ರೆಯಿಂದ ಹೊರಬರುತ್ತಾನಂತೆ. ಅಂತಹ ದಿನ ಈ ಆಚರಣೆಯನ್ನು ಮಾಡುವುದು ಸೂಕ್ತ. ಇಲ್ಲವಾದರೆ ಆಶ್ವಯುಜ ಮಾಸದ ಶುಕ್ಲ ಪಕ್ಷ ಎಂಟು, ಹನ್ನೆರಡು ಅಥವಾ ಹದಿನೈದನೇ ದಿನ ನೀರಾಜನ ವೃತ ಮಾಡುವುದು ಸೂಕ್ತ ಎಂಬ ಅಭಿಪ್ರಾಯ ವರಾಹಮೀರನದಾಗಿದೆ.'[೨೨]

ಉತ್ತರ ಭಾರತದಲ್ಲಿ ಇಂದಿಗೂ ಈ ಆಚರಣೆಯನ್ನು ಕಾರ್ತಿಕ ಮಾಸದ ಕೃಷ್ಣ ಪಕ್ಷದ ದ್ವಾದಶಿಯಿಂದ ಹಿಡಿದು ಕಾರ್ತಿಕ ಶುದ್ಧ ಪ್ರಥಮ ತಿಥಿಯವರೆಗೆ ನೀರಾಜನ ವಿಧಿಯ ಹಬ್ಬವನ್ನು ವಿಶೇಷವಾಗಿ ಆಚರಿಸಲಾಗುತ್ತದೆ. 'ಹಿಂದೆ ಈ ಹಬ್ಬವನ್ನು ರಾಜ ಮಹಾರಾಜರು ಆಚರಿಸುತ್ತಿದ್ದರು. ರಾಜಧಾನಿಯ ಈಶಾನ್ಯ ಭಾಗದಲ್ಲಿ ಪ್ರಶಸ್ತವಾದ ಭೂಮಿಯನ್ನು ಗುರುತಿಸಿಕೊಂಡು ಅದರೊಳಗೆ ವಿಶಾಲವಾದ ಮಂಟಪವನ್ನು ರಚಿಸಿ ಹಲಸು, ದೇವದಾರು ಮಾವಿನ ಎಲೆಗಳಿಂದ ತೋರಣ ರಚಿಸಿ ಮಂಟಪವನ್ನು ಅಲಂಕರಿಸಲಾಗುತ್ತಿತ್ತು. ಮಂಟಪದೊಳಗೆ ಮೂರು ಕಮಾನುಗಳ ಮೂರು ದ್ವಾರ ರಚನೆ ಮಾಡಲಾಗುತ್ತದೆ. ಅಲ್ಲೊಂದು ಯಾಗಶಾಲೆ ರಚಿಸಲಾಗುತ್ತದೆ. ಯಾಗಶಾಲೆಯನ್ನು ಔದುಂಬರ, ಸಾಲವೃಕ್ಷ, ಅರ್ಜುನ ಮರಗಳಿಂದ ಹಾಗೂ ಕುಶ ಹುಲ್ಲನ್ನು ಬಳಸಿ ರಚಿಸಬೇಕು.

ಯಾಗಶಾಲೆಯನ್ನು ಮತ್ಸ್ಯ, ಧ್ವಜ, ಚಕ್ರಗಳಿಂದ ಅಲಂಕರಿಸಬೇಕು. ಬಿದಿರಿನ ಬಾಗಿಲನ್ನು ಮಾಡಬೇಕು. ಐದು ವಿಧದ ಎಲೆ, ಪೂರ್ಣ ಕುಂಭಗಳಿಂದ ಯಾಗಶಾಲೆ ತುಂಬಿರಬೇಕು. ಬಿಳಿಸಾಸಿವೆ, ಅಕ್ಕಿ ಮುಂತಾದವನ್ನು ಕೇಸರಿಯಲ್ಲಿ ಅದ್ದಿ ತಯಾರಿಸಿದ ಹಗ್ಗಕ್ಕೆ ಕಟ್ಟಿ ಆ ಹಗ್ಗವನ್ನು ಆನೆ, ಕುದುರೆಗಳ ಕೊರಳಿಗೆ ಕಟ್ಟಿರಬೇಕು. ಈ ರೀತಿ ಕೇಸರಿ ಹಗ್ಗದಿಂದ ಕೊರಳನ್ನು ಅಲಂಕರಿಸಿದ ಆನೆ ಕುದುರೆಗಳನ್ನು ಪೂಜಾಗೃಹಕ್ಕೆ ಕರೆತರಬೇಕು. ತರುವಾಯ ಮಂತ್ರಘೋಷಗಳ ಸಮೇತ ಆನೆ, ಕುದುರೆಗಳಿಗೆ ಶುಭ ಸ್ನಾನ ಮಾಡಿಸಬೇಕು. ನಂತರ ಏಳು ದಿನಗಳವರೆಗೆ ಸೂರ್ಯ, ವರುಣ, ವಿಶ್ವದೇವ, ಬ್ರಹ್ಮ, ಇಂದ್ರ, ವಿಷ್ಣುವನ್ನು ಉದ್ದೇಶಿಸಿ ಮಂತ್ರಘೋಷಣೆ ಮಾಡುತ್ತಾ ಈ ಪ್ರಾಣಿಗಳಿಗೆ ಪೂಜಿಸಬೇಕು. ಪೂಜಾ ವೇಳೆಯಲ್ಲಿ ಪೂಜೆಗೆ ಒಳಗಾದ ಆನೆ ಕುದುರೆಗಳಿಗೆ ಯಾವುದೇ ರೀತಿಯ ಶಿಕ್ಷೆ ನೀಡಬಾರದು. ಆ ಪ್ರಾಣಿಗಳು ಸಂತೋಷದಿಂದ ಇರುವಂತೆ ನೋಡಿಕೊಳ್ಳಬೇಕು. ಏಳು ದಿನಗಳ ತರುವಾಯ ಎಂಟನೇ ದಿನ ಸೂರ್ಯೋದಯಕ್ಕೆ ಮಂಟಪದ ದಕ್ಷಿಣ ಭಾಗದಲ್ಲಿ ಮರದ ತೊಗಟೆ, ಹುಲ್ಲನ್ನು ಬಳಸಿ ಉತ್ತರಾಭಿಮುಖವಾಗಿ ಒಂದು ಕುಟೀರವನ್ನು ನಿರ್ಮಿಸಬೇಕು. ಕುಟೀರದ ಮುಂಭಾಗದಲ್ಲಿ ಹೋಮಕುಂಡ ನಿರ್ಮಿಸಬೇಕು. ಹೋಮಕ್ಕಾಗಿ ಸಮಿಧೆ ಹಾಗೂ ಹೋಮೋಪಕರಣಗಳನ್ನು ಇರಿಸಿಕೊಂಡಿರಬೇಕು. ಹೋಮಕ್ಕೆ ಹೋಮದ ಸಾಮಗ್ರಿಗಳನ್ನು ಅರ್ಪಿಸಲು ಬೆಳ್ಳಿ ಅಥವಾ ಚಿನ್ನದ ಸೌಟನ್ನು ಉಪಯೋಗಿಸಬೇಕು. ಯಜ್ಞಕುಂಡದ ಎದುರು ಭಾಗದಲ್ಲಿ ಗಜವೈದ್ಯ, ಅಶ್ವ ವೈದ್ಯ, ದೈವಜ್ಞರೊಂದಿಗೆ ಮಹಾರಾಜನು ಕುಳಿತುಕೊಳ್ಳಬೇಕು. ಮಂತ್ರಘೋಷಗಳೊಂದಿಗೆ ಯಜ್ಞ ವಿಧಿಗಳನ್ನು ಪೂರೈಸಿದ ತರುವಾಯ ಪೂಜೆಗೆ ಒಳಗಾದ ಆನೆ ಕುದುರೆಗಳನ್ನು ಈ ಕುಟೀರಕ್ಕೆ ಕರೆತರಬೇಕು. ಈ ಕುಟೀರಕ್ಕೆ ಬಂದು ನಿಲ್ಲುವ ಆನೆ, ಕುದುರೆಗಳ ನಿಲ್ಲುವ ಭಂಗಿಯ ಮೇಲೆ ಮಹಾರಾಜನ ಮುಂದಿನ ಭವಿಷ್ಯ ನಿರ್ಣಯಗೊಳ್ಳುತ್ತದೆ. ಆನೆ ಕುದುರೆಗಳಿಗೆ ಔದುಂಬರದ ವೃಕ್ಷಶಾಖೆಯನ್ನು ಶುದ್ಧೋದಕದಲ್ಲಿ ಅದ್ದಿ ಆ ಜಲವನ್ನು ಆನೆ ಕುದುರೆಗಳ ಮೇಲೆ ಸಿಂಪಡಿಸಬೇಕು. ತರುವಾಯ ರಾಜ ಹಾಗೂ ಸೈನಿಕರ ಮೇಲೆ ಶುದ್ಧ ಜಲ ಸಿಂಪಡಿಸಬೇಕು. ಸೂರ್ಯನು ಸ್ವಾತಿ ನಕ್ಷತ್ರದೊಳಗಿರುವವರೆಗೆ ವಿವಿಧ ಗಜಶಾಲೆ, ಅಶ್ವಶಾಲೆಗಳಲ್ಲಿ ಒಂದೊಂದು ದಿನ ಒಂದೊಂದು ಕಡೆ ಈ ಪೂಜಾವಿಧಿಗಳು ನಡೆಯುತ್ತಿದ್ದವು. ಗಜಾಶ್ವಗಳ ಕ್ಷೇಮವನ್ನು ನೋಡಿಕೊಳ್ಳಲು ಪಶುವೈದ್ಯರು ನಿರಂತರವಾಗಿ ಮಂಟಪದ ಬಳಿಯೇ ಇರುತ್ತಿದ್ದರು.

ಈ ವ್ರತದಲ್ಲಿ ಮಹಾರಾಜನ ವಿರೋಧಿಗಳ ಮಣ್ಣಿನ ಮೂರ್ತಿಯನ್ನು ಮಾಡಿ ಪ್ರತಿಷ್ಠಾಪಿಸಲಾಗುತ್ತಿತ್ತು. ಪುರೋಹಿತನು ಮಂತ್ರೋಚ್ಚಾರಣೆ ಮಾಡುತ್ತ ಆ ಮಣ್ಣಿನ ಮೂರ್ತಿಗೆ ತಿವಿದುರುಳಿಸಲಾಗುತ್ತಿತ್ತು. ತರುವಾಯ ಪೂಜಾ ವಿಧಿ ಕೊನೆಗೊಂಡ ನಂತರ

ಗಜಾಶ್ವಗಳಿಗೆ ಪ್ರಸಾದ ನೀಡಿ ರಾಜನು ಯುದ್ಧ ಸನ್ನದ್ಧನಾಗಿ ತೆರಳುತ್ತಿದ್ದನು. ಆಭರಣ, ಛತ್ರ–ಚಾಮರಗಳೊಂದಿಗೆ ಆನೆಯನ್ನೇರಿ ರಾಜನಾದವನು ಉತ್ತರಾಭಿಮುಖವಾಗಿ ಇಲ್ಲವೇ ಈಶಾನ್ಯಮುಖವಾಗಿ ಚಲಿಸುತ್ತಿದ್ದನು.

ಸೂರ್ಯನು ಸ್ವಾತಿ ನಕ್ಷತ್ರದಿಂದ ವಿಶಾಖ ನಕ್ಷತ್ರಕ್ಕೆ ಪ್ರವೇಶಿಸಿದ ದಿನ ವಿಶೇಷ ಪೂಜೆ ನಡೆಸಲಾಗುತ್ತಿತ್ತು. ಆನೆಯ ಮೇಲೇರಿ ಹೊರಬಂದ ತರುವಾಯ ಭೇರಿ ನಗಾರಿಗಳು ಮೊಳಗುತ್ತಿದ್ದವು.

ನೈವೇದ್ಯವನ್ನು ಮಂತ್ರಪೂರ್ವಕವಾಗಿ ಸಮರ್ಪಿಸಬೇಕು. ಸೂರ್ಯನು ಚಿತ್ತಾ ನಕ್ಷತ್ರ ಪ್ರವೇಶಿಸಿದ ದಿನದಿಂದ ಸ್ವಾತಿ ನಕ್ಷತ್ರಕ್ಕೆ ಹೋಗುವ ದಿನದವರೆಗೂ ನೀರಾಜನ ವಿಧಿಯನ್ನು ಆಚರಿಸಬೇಕು.[೨೩]

ದ್ವಾದಶಿಯಂದು ನಡೆಸುತ್ತಿದ್ದ ಪೂಜೆಗೆ ನೀರಾಜನ ದ್ವಾದಶಿ ಎನ್ನುತ್ತಿದ್ದರು. ಆ ರಾತ್ರಿ ವಿಷ್ಣು ಏರುತ್ತಾನೆಂದು ನಂಬಿ ವಿಷ್ಣುವಿನ ಮುಂದೆ ದೀಪಗಳನ್ನು ಬೆಳಗುತ್ತಿದ್ದರು. ವಿಷ್ಣುವಿನೊಂದಿಗೆ ಸೂರ್ಯ, ಶಿವ, ಗೌರಿ ಹಾಗೂ ಗೋಶಾಲೆಯೊಳಗಿರುವ ಹಸು ಕರುಗಳು ಮತ್ತು ಆನೆ, ಕುದುರೆಗಳನ್ನು ಆಯುಧಗಳನ್ನು ಪೂಜಿಸಲಾಗುತ್ತಿತ್ತು. ಒಬ್ಬ ಮುತ್ತೈದೆಯು ರಾಜನಿಗೆ ವಿಶೇಷವಾಗಿ ಆರತಿ ಎತ್ತುತ್ತಿದ್ದಳು. ಈ ರೀತಿ ಆರತಿಯನ್ನು ಮೂರು ಬಾರಿ ಮಾಡಲಾಗುತ್ತಿತ್ತು. ಹೀಗೆ ಮಾಡುವುದರಿಂದ ರಾಜ್ಯದಲ್ಲಿ ಶಾಂತಿ ನೆಲೆಸುತ್ತದೆ, ರೋಗರುಜಿನಗಳು ದೂರವಾಗುತ್ತವೆ ಎಂಬ ನಂಬಿಕೆ ಇತ್ತು.

ಹೇಮಾದ್ರಿಯ ಪ್ರಕಾರ ಈ ಪದ್ಧತಿಯನ್ನು ಅಜಪಾಲನೆಂಬ ಅರಸನು ಚಾಲನೆಗೆ ತಂದನೆಂದು ಹೇಳಲಾಗುತ್ತದೆ.

ಗೋವಿಂದ ವೈದ್ಯನು ರಚಿಸಿದ ಕಂಠೀರವ ನರಸರಾಜ ವಿಜಯ(ಕ್ರಿ.ಶ. ೧೬೪೮) ಕಾವ್ಯದಲ್ಲಿ ನೀರಾಜನ ವ್ರತದಲ್ಲಿ ೧ ದೊರೆರಾಯ ನರಸೇಂದ್ರನ ಮಹಾನವಮಿಯ ಪುರದುತ್ಸವ, ೨ ನರಸೇಂದ್ರನ ಮಹಾನವಮಿಯ ಒಡ್ಡೋಲಗದ ಉತ್ಸವದ, ೩ ಬಲ್ ಸಿರಿಯ ಸಂಭ್ರಮದ ಭೂಪನ ಪೂಜೆ, ೪ ವಿಜಯದಶಮಿಯ ಜಂಬೂಸವಾರಿ– ವಿವರಗಳು ದೊರೆಯುತ್ತವೆ. ಇದೇ ಕಾವ್ಯದ ಸಾಲುಗಳನ್ನು ಈ ಕೆಳಗಿನಂತೆ ನೋಡಬಹುದು.

'ಗಜಶಾಲೆ ಹಯಗಳ ಲಾಯ ದಿವ್ಯಾಯುಧ
ವ್ರಜವ ಪೂಜಿಪ ಭದ್ರಭವನ
ರಜತ ಸುವರ್ಣ ರತ್ನದ ಕಾಂತಿಯಿಂದ ನೆರೆ
ತ್ರಿಜಗಕಚ್ಚರಿಯ ಬೀರಿದವು' ॥೧॥

ತೊಳಗುವಾಶ್ವೀಜ ಮಾಸದ ಶುಕ್ಲ ಪಕ್ಷದೊ
ಳಳವಟ್ಟ ಪ್ರಥಮ ದಿವಸದೆ
ಗಳಿನೋಲಗಶಾಲೆ ಪುಣ್ಯಾರ್ಚನೆ ಹೋಮ
ವೆಳಸಿತು ವಿಪ್ರರಿಂದಾಗ ॥ ೨ ॥

ಗಜಶಾಲೆ ಹಯಗಳ ಲಾಯ ದಿವ್ಯಾಯುಧ
ವಜ್ರಗಳ ಮಂಟಪಗಳಿಗೆ
ದ್ವಿಜರೈದಿ ಹೋಮ ಪುಣ್ಯಾರ್ಚನೆ ಪೂಜೆಯ
ತ್ರಿಜಗ ನಲಿಯೆ ರಚಿಸಿದರು ॥ ೩ ॥

ತವೆ ಜಯಘೋಷಗಳಿಂದ ಕಂಠೀರವ
ಭುವನೇಶ್ವರನರ್ತಿಯಲಿ
ನವರತ್ನದ ಗದ್ದುಗೆಯಲಿ ಮಂಡಿಸಿ
ಸುವಿಲಾಸದೊಳಗೆ ರಂಜಿಸಿದ ॥ ೪ ॥

ಇಂತಪ್ಪೋಲಗಮೆಂಟು ದಿವಸ ಪರಿ
ಯಂತರ ಸಕಲ ಸಂಭ್ರಮದೆ
ಸಂತೋಷವ ಸರ್ವಜನಕ ಬೀರುತಲ
ತ್ಯಂತ ಸೌಖ್ಯದಲೊಪ್ಪಿದದು ॥ ೫ ॥

ಬಳಿಕೊಂಭತ್ತನೆಯಾದಿನದೆ ಚಂಡಿಕಾ
ಲಲನೆಯ ನವಲಕ್ಷ್ಮಿಯರ
ವಿಲಸಿತೋತ್ಸವ ಪೂಜೆಗೆ ಶುಭಲಗ್ನವ
ಸಲೆ ಜೋಯಿಸಿಗರುಸಿದರು ॥ ೬ ॥

ಗಜಲಕ್ಷ್ಮಿ ಹಯಲಕ್ಷ್ಮಿಯಾಯುಧಲಕ್ಷ್ಮಿಯರ್
ನಿಜವಾದ ದಾನಲಕ್ಷ್ಮಿಯರ
ಭುಜಲಕ್ಷ್ಮಿ ಸೌಭಾಗ್ಯ ಸಿರಿ ಕೀರ್ತಿಲಕ್ಷ್ಮಿಯ
ಭಜಿಸಿ ಪ್ರತ್ಯಕ್ಷಗೆಸಿದರು ॥ ೭ ॥

ಶಾರದಲಕ್ಷ್ಮಿ ಸಾಮ್ರಾಜ್ಯ ಲಕ್ಷ್ಮಿಯ ಭಕ್ತಿ
ಸಾರದೊಳಗೆ ಪೂಜೆಮಾಡೆ
ಧಾರಿಣೀಶ್ವರ ಕಂಠೀರವೇಂದ್ರನ ಮೆಚ್ಚಿ
ಸೇರಿದರ್ನವಲಕ್ಷ್ಮಿಯರು ॥೮॥

ಮಂಗಳಾರತಿಗಳು ಮುದ್ದುಕೋಲಾಟಗಳ್
ಸಂಗೀತ ಸುಖಭೋಗಗಳು
ಹಿಂಗದೊಪ್ಪಿದುವಾಯುಧ ಮಂಟಪದ ದಿ
ವ್ಯಾಂಗಣದೊಳಗೇನೆಂಬೆ ॥೯॥

ತುರುಗ ಗಜಾವಳಿ ಚಂಡಿಕಾದೇವಿಗೆ
ಹರುಷದೆ ಕಾಣಿಕೆಗೈದು
ವರವ ಪೆಡೆದು ಕಂಠೀರವೇಶ್ವರನಂ
ದರಮನಗೈತಂದನಾಗ ॥೧೦॥

ದೊರೆರಾಯ ನರಸರಾಜೇಂದ್ರ ಸಿಂಗರಗೈದು
ಪರಮೋತ್ಸವದೊಳಗಾಗ
ಹರುಷದೊಳಗೆ ಜಂಬಿಸಾರೆಗೈತರುತಿಹ
ಸಿರಿಯ ಸಂಭ್ರಮವನೇವೇಳ್ವೆ' ॥೧೧॥

ಮೇಲಿನ ಎಲ್ಲ ಸಾಲುಗಳು ನಿರಾಜನ ವ್ರತಾಚರಣೆಯ ಕ್ರಮದ ವಿವರಗಳನ್ನು ನೀಡುವ ಕಾವ್ಯದ ಸಾಲುಗಳಾಗಿವೆ.

### ದಸರಾ ಆಚರಣೆ

ಕರ್ನಾಟಕ ಇತಿಹಾಸದಲ್ಲಿ ಸುವರ್ಣಯುಗವನ್ನು ಸೃಷ್ಟಿಸಿ ವಿಜಯನಗರ ಸಾಮ್ರಾಜ್ಯ ಕಟ್ಟಿ ವೈಭವದಿಂದ ಮೆರೆದವರು ವಿಜಯನಗರ ಅರಸರು. ಅವರ ಕಾಲದಲ್ಲಿ ಆರಂಭಗೊಂಡು ಆಚರಿಸಲ್ಪಡುತ್ತಿದ್ದ ನವರಾತ್ರಿ ಉತ್ಸವದ ವಿಜಯ ದಶಮಿಯ ದಸರಾ ಮಹೋತ್ಸವ ಇಂದಿಗೂ ನಡೆದುಕೊಂಡು ಬಂದಿದ್ದು, ಈ ಬಾರಿ ೪೦೭ನೇ ದಸರಾ ಮಹೋತ್ಸವವನ್ನು ಆಚರಿಸುತ್ತಿದೆ. ಈ ಉತ್ಸವವನ್ನು ವೀಕ್ಷಿಸಲು ದೇಶ-ವಿದೇಶಗಳ ಗಣ್ಯಾತಿಗಣ್ಯರು, ಪ್ರವಾಸಿಗರು, ಇಲ್ಲಿಗೆ ಭೇಟಿ ನೀಡಿದ ದಾಖಲೆಗಳುಂಟು. ಅಷ್ಟೆ ಅಲ್ಲ ೧೧ನೇ ಶತಮಾನದಲ್ಲೇ ಇಲ್ಲಿ ಭೇಟಿ ನೀಡಿದ್ದ ವಿದೇಶಿ ಪ್ರವಾಸಿಗರಾದ ಅಲ್ಬೆರೋನಿ, ೧೫-೧೬ನೇ ಶತಮಾನದಲ್ಲಿ

ಬಂದಿದ್ದ ಪರ್ಶಿಯಾದ ಅಬ್ದುಲ್ ರಜಾಕ್, ಇಟಲಿಯ ನಿಕೋಲಕೌಂಟಿ, ಪೋರ್ಚಗಿಷಿನ ಡೋಮಿಂಗೋಪಾಯಸ್(೧೫೨೦-೧೫೨೨) ಮೊದಲಾದವರು ವಿಜಯನಗರ ಸಾಮ್ರಾಜ್ಯದ ವೈಭವೋಪೇತವಾದ ಈ ಮಹೋತ್ಸವವನ್ನು ಕೊಂಡಾಡಿ ತಮ್ಮ ಪ್ರವಾಸ ಕಥನಗಳಲ್ಲಿ ದಾಖಲಿಸಿದ್ದಾರೆ.

ವಿಜಯ ದಶಮಿಯ ದಸರಾ ಮಹೋತ್ಸವವನ್ನು ವಿಜಯನಗರ ಸಾಮ್ರಾಜ್ಯದ ಪತನದ ನಂತರ ಮುಂದುವರಿಸಿಕೊಂಡು ಬಂದವರು ಯದುವಂಶದ ಮೈಸೂರು ಒಡೆಯರು. ಇವರಲ್ಲಿನ ೯ನೇ ಆಳ್ವಿಕೆಯ ರಾಜ ಒಡೆಯರು(೧೫೭೮-೧೬೧೭) ಅಂದು ತಮ್ಮ ರಾಜಧಾನಿಯಾಗಿದ್ದ ಶ್ರೀರಂಗಪಟ್ಟಣದಲ್ಲಿ ೧೬೧೦ರಲ್ಲಿ ವಿಜಯನಗರದ ರಾಜ ಪರಂಪರೆಯಂತೆ ನವರಾತ್ರಿ ಉತ್ಸವದ ವಿಜಯ ದಶಮಿಯ ದಸರಾ ಮಹೋತ್ಸವವನ್ನು ಮೊದಲಿಗೆ ಆರಂಭಿಸಿದರು.

ದಸರಾ ಕಾಲದ ಅಶ್ವಯುಜ ಪಾಡ್ಯದ ದಿನ ನಸುಕಿನಲ್ಲಿಯೇ ಎದ್ದು ಮಂಗಳ ಸ್ನಾನ ಮಾಡಿ ರಾಣಿಯೊಡಗೂಡಿ ಚಾಮುಂಡೇಶ್ವರಿಯನ್ನು ಪೂಜಿಸಿ ನವರಾತ್ರಿಯ ವ್ರತಕ್ಕಾಗಿ ಕಂಕಣ ತೊಡಲಾಗುತ್ತದೆ. ತರುವಾಯ ಸಿಂಹಾಸನಕ್ಕೆ ಪೂಜೆ ಸಲ್ಲಿಸಿ ಸಿಂಹಾಸನಾರೂಢರಾದ ಅರಸರು ಖಾಸಗಿ ದರ್ಬಾರನ್ನು ನಡೆಸಲಾಗುತ್ತದೆ.

ಆದರೆ ನವರಾತ್ರಿ ಪ್ರಾರಂಭವಾಗುವುದಕ್ಕೆ ಪೂರ್ವದಲ್ಲಿಯೇ ಒಂದು ತಿಂಗಳ ಪೂರ್ವದಲ್ಲಿ ಗಜಪಡೆಯನ್ನು ಆನೆ ಸಾಕಾಣಿಕಾ ಕೇಂದ್ರಗಳಾದ ಶಿವಮೊಗ್ಗದ ಸಕ್ರೆಬೈಲು ಹಾಗೂ ಕೊಡಗಿನಿಂದ ಸುಮಾರು ಹತ್ತು ಆನೆಗಳನ್ನು ಕರೆಸಿಕೊಳ್ಳಲಾಗುತ್ತದೆ. ತಮ್ಮ ಬಿಡಾರದಿಂದ ಮೈಸೂರು ನಗರಕ್ಕೆ ತಮ್ಮ ಮಾವುತರ ಕುಟುಂಬಗಳೊಂದಿಗೆ ಬರುವ ಈ ಆನೆಗಳಿಗೆ ಮೈಸೂರಿನ ಅರಸರು ಪೂಜಿಸಿ ನಾಡತೋಪನ್ನು ಹಾರಿಸಿ ಸ್ವಾಗತಿಸುತ್ತಾರೆ. ಹೀಗೆ ಮೈಸೂರಿಗೆ ಬಂದು ನೆಲೆ ನಿಂತ ಆನೆಗಳು ದಸರಾ ಆಚರಣೆಗೆ ಸಜ್ಜಾಗಲು ಪ್ರತಿದಿನ ತರಬೇತಿಯಲ್ಲಿ ತೊಡಗುತ್ತವೆ. ವಾಸ್ತವವಾಗಿ ಹಿಂದೆ ರಾಜನ ಆಡಳಿತವಿದ್ದಾಗ ಆನೆಗಳು ಅರಮನೆಯ ಲಾಯದಲ್ಲಿಯೇ ಇರುತ್ತಿದ್ದವು. ಆದರೆ ರಾಜರ ಆಡಳಿತ ಕೊನೆಗೊಂಡು ಭಾರತವು ಪ್ರಜಾಸತ್ತಾತ್ಮಕ ಸರ್ಕಾರವಾಗಿ ಮಾರ್ಪಟ್ಟ ತರುವಾಯ ಭಾರತದೊಳಗೆ ಮೈಸೂರು ರಾಜ್ಯವು ವಿಲೀನಗೊಂಡ ತರುವಾಯ ಅರಮನೆಯ ಆನೆಗಳು ಆನೆ ಬಿಡಾರಕ್ಕೆ ತೆರಳಿದವು. ಅಂದಿನಿಂದ ಇಂದಿನವರೆಗೂ ದಸರಾ ಉತ್ಸವಕ್ಕೆ ಆನೆಗಳನ್ನು ಆನೆ ಬಿಡಾರಗಳಿಂದ ತರಿಸಿಕೊಳ್ಳಲಾಗುತ್ತದೆ.

ಮೈಸೂರಿನ ಅರಸರು ಸಿಂಹಾಸನಾರೋಹಣ ಮಾಡಿ ಖಾಸಗಿ ದರ್ಬಾರನ್ನು ನವರಾತ್ರಿಯವರೆಗೂ ಮುಂದುವರಿಸುತ್ತಾರೆ. ದಶಮಿಯ ಹಿಂದಿನ ದಿನ ಆಯುಧ ಪೂಜೆ

ಮಾಡುವ ಅರಸರು ತರುವಾಯ ದಸರಾ ಉತ್ಸವದಲ್ಲಿ ಪ್ರಮುಖ ಆಕರ್ಷಣೆಯಾದ ಪಟ್ಟದ ಆನೆ(ಅಂಬಾರಿಯನ್ನು ಹೊರುವ ಆನೆ) ಪಟ್ಟದ ಕುದುರೆ ಹಾಗೂ ಎತ್ತುಗಳಿಗೆ ಸಾಂಪ್ರದಾಯಿಕವಾಗಿ ಪೂಜೆ ಸಲ್ಲಿಸುತ್ತಾರೆ.

ಹತ್ತನೇ ದಿನ ದಶಮಿಯಂದು ರಾಜನು ತನ್ನ ರಾಜ ಪರಿವಾರದೊಡನೆ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಬನ್ನಿ ಮಂಟಪಕ್ಕೆ ತೆರಳಿ ಬನ್ನಿ ಮರವನ್ನು ಪೂಜಿಸುತ್ತಾನೆ. ಬನ್ನಿ ಎಲೆಗಳನ್ನು ಕಿತ್ತು ತನ್ನ ಪರಿವಾರಕ್ಕೆ ಬನ್ನಿ ಕೊಡುವ ಮೂಲಕ ವಿಜಯ ದಶಮಿಯ ಆಚರಣೆ ಮುಕ್ತಾಯಗೊಳ್ಳುತ್ತದೆ. ಹೀಗೆ ಆನೆ ಅಂಬಾರಿಯೊಡನೆ ರಾಜನು ತೆರಳುವಾಗ ಅಂಬಾರಿ ಹೊತ್ತ ಪಟ್ಟದಾನೆಯೊಂದಿಗೆ ಸಹಚರ ಆನೆಗಳು, ಅದರ ಹಿಂಭಾಗಕ್ಕೆ ಯೋಧರನ್ನೊಳಗೊಂಡ ಕುದುರೆಗಳು, ರಾಣಿ ಪರಿವಾರವನ್ನು ಹೊತ್ತ ರಥಗಳು, ಎತ್ತುಗಳಿಂದ ಕೂಡಿದ ರಥಗಳು, ಮುಂಭಾಗದಲ್ಲಿ ಅರಮನೆಯ ಒಡ್ಡೋಲಗ, ಮೇಳವನ್ನು ಮಾಡುವ ಭಜಂತ್ರಿಗಳು, ಸಂಗೀತಗಾರರು, ವಿವಿಧ ಛದ್ಮ ವೇಷಧಾರಿಗಳನ್ನು ಈ ಮೆರವಣಿಗೆ ಒಳಗೊಂಡಿರುತ್ತದೆ. ಜಯಚಾಮರಾಜೇಂದ್ರ ಒಡೆಯರ ಕಾಲದಿಂದ ರಾಜನ ಬದಲಿಗೆ ಚಾಮುಂಡೇಶ್ವರಿಯ ಮೂರ್ತಿಯನ್ನು ಅಂಬಾರಿಯೊಳಗಿರಿಸುವ ಸಂಪ್ರದಾಯ ಪ್ರಾರಂಭವಾಗಿದೆ.

ವಿಜಯ ದಶಮಿ ಹಬ್ಬವನ್ನು ದೇವತೆಗಳು ರಾಕ್ಷಸರನ್ನು ಸಂಹರಿಸಿದ ಸಂಕೇತವಾಗಿ ಆಚರಿಸಲಾಗುತ್ತದಂತೆ. ರಾಕ್ಷಸರನ್ನು ಸಂಹರಿಸಲು ಪಾರ್ವತಿಯೇ ಚಾಮುಂಡಿಯ ಅವತಾರ ತಾಳಿ ಒಂಬತ್ತು ದಿನಗಳು ದೇವಾನುದೇವತೆಗಳ ಶಕ್ತಿಯನ್ನು ಧರಿಸಿಕೊಂಡು ಸಿಂಹವಾಹಿನಿ ಯಾಗಿ ಈ ನವರಾತ್ರಿಯ ಕಾಲದಲ್ಲಿಯೇ ರಾಕ್ಷಸ ಮಹಿಷಾಸುರನನ್ನು ಸಂಹರಿಸಿದಳೆಂಬ ನಂಬಿಕೆ ಇದೆ. ಆ ನೆನಪಿಗಾಗಿಯೇ ಈ ವಿಜಯ ದಶಮಿ ಹಬ್ಬದ ಆಚರಣೆ ಮಾಡಲಾಗುತ್ತದೆ ಎಂದು ಹೇಳಲಾಗುತ್ತದೆ. ಹಾಗೆಯೇ ಮತ್ತೊಂದು ಕಥೆಯ ಪ್ರಕಾರ ಲಂಕೆಯ ಮೇಲೆ ದಂಡೆತ್ತಿಹೋದ ರಾಮನು ರಾವಣನನ್ನು ಸಂಹರಿಸಿ ವಿಜಯ ಸಾಧಿಸಿದ ದಿನ ಈ ವಿಜಯದಶಮಿ ಎಂದೇ ಹೇಳಲಾಗುತ್ತದೆ. ಮಹಾಭಾರತದಲ್ಲಿ ಕೌರವರಿಂದ ಅಜ್ಞಾತವಾಸ ಅನುಭವಿಸುತ್ತಿದ್ದ ಪಾಂಡವರು ವಿರಾಟ ರಾಜನಲ್ಲಿ ವೇಷ ಮರೆಸಿಕೊಂಡು ಆಶ್ರಯದಲ್ಲಿದ್ದರು. ಇದರ ಸುಳಿವು ತಿಳಿದು ಕೌರವರು ವಿರಾಟ ರಾಜನ ಮೇಲೆ ದಂಡೆತ್ತಿ ಬಂದು ಅವರ ಪಶು ಸಂಕುಲವನ್ನು ಅಟ್ಟಿಸಿಕೊಂಡು ಹೋಗಲು ಮುಂದಾದಾಗ ಬೃಹನ್ನಳೆಯ ವೇಷಧಾರಿ ಅರ್ಜುನನು ಬನ್ನಿ ಮರದಲ್ಲಿ ಮರೆಮಾಚಿಟ್ಟಿದ್ದ ತಮ್ಮ ಆಯುಧಗಳನ್ನು ತೆಗೆದು ಕೌರವರ ಸೇನೆಯನ್ನು ಹಿಮ್ಮೆಟ್ಟಿಸಿದನಂತೆ. ಈ ವಿಜಯದ

ಸಂಕೇತವಾಗಿ ಬನ್ನಿ ಮರಕ್ಕೆ ಪೂಜೆ ಸಲ್ಲಿಸಿದ ನೆನಪಿಗಾಗಿ ಒಡ್ಡೋಲಗವನ್ನೊಳಗೊಂಡು ಹೋಗಿ ಬನ್ನಿ ಮರವನ್ನು ಪೂಜಿಸುವ ಮತ್ತು ಬನ್ನಿಯನ್ನು ಹಂಚುವ ಸಂಪ್ರದಾಯ ಬೆಳೆದುಬಂದಿತು ಎಂದು ಹೇಳಲಾಗುತ್ತದೆ.

## ಮೈಸೂರು ದಸರಾ ಜಂಬೂಸವಾರಿಯಲ್ಲಿ ಆನೆಗಳ ಇತಿಹಾಸ

ನಮ್ಮ ಭಾರತೀಯ ಸಂಸ್ಕೃತಿಯ ಚರಿತ್ರೆಯಲ್ಲಿ ಮೈಸೂರು ದಸರಾ ಹೊರತುಪಡಿಸಿದರೆ ಇಷ್ಟೊಂದು ಸುದೀರ್ಘ ಕಾಲ ನಡೆದುಬಂದಿರುವ ಮತ್ತೊಂದು ಹಬ್ಬ ಕಾಣಸಿಗುವುದು ಬಹಳ ಅಪರೂಪ. ಅಧಿದೇವತೆ ಶ್ರೀ ಚಾಮುಂಡೇಶ್ವರಿಯ ಆರಾಧನೆಯೊಂದಿಗೆ ಆರಂಭವಾಗುವ ನವರಾತ್ರಿ ವೈಭವದ ವಿಜಯದಶಮಿಯ ಈ ಮೈಸೂರು ದಸರಾ ಮಹೋತ್ಸವ ಜಂಬೂಸವಾರಿಯೊಂದಿಗೆ ತೆರೆಕಾಣುತ್ತದೆ. ನಾಡಹಬ್ಬ ಮೈಸೂರು ದಸರಾ ಮಹೋತ್ಸವದ ಪ್ರಮುಖ ಆಕರ್ಷಣೆ ಜಂಬೂಸವಾರಿ. ರಾಜ್ಯ, ಹೊರರಾಜ್ಯ, ದೇಶ-ವಿದೇಶಗಳಿಂದಲೂ ಲಕ್ಷಾಂತರ ಜನರು ಜಂಬೂಸವಾರಿಯನ್ನು ವೀಕ್ಷಿಸಲು ಆಗಮಿಸುತ್ತಾರೆ.

**ಅಂಬಾರಿ:** ಸುಮಾರು ೭೫೦ ಕೆ.ಜಿ. ಚಿನ್ನದ ಅಂಬಾರಿಯಲ್ಲಿ ವೀರಾಜಮಾನರಾಗಿರುವ ತಾಯಿ ಚಾಮುಂಡೇಶ್ವರಿ ದೇವಿ ಮೆರವಣಿಗೆಗೆ ಪ್ರಮುಖ ಆಕರ್ಷಣೆ. ಮೈಸೂರು ಆರಮನೆಯ ರಸ್ತೆಯ ತುಂಬಾ ಪ್ರವಾಹದೋಪಾದಿಯಲ್ಲಿ ಜನಸಾಗರದ ನಡುವೆ ತಾಯಿ ಚಾಮುಂಡೇಶ್ವರಿ ಅಂಬಾರಿಯನ್ನು ಹೊತ್ತ ಬಲರಾಮ ಆನೆಯು ಗಂಭೀರವದನನಾಗಿ ಹೆಜ್ಜೆಗಳನ್ನು ಇಡುತ್ತಾ ಸಾಗುತ್ತದೆ. ಇಪ್ಪತ್ನಾಲ್ಕು ಕುಶಾಲ ತೋಪುಗಳ ಸದ್ದಿನ ಹಿನ್ನೆಲೆಯಲ್ಲಿ ಮೈಸೂರು ನಗರದ ಕೆ.ಆರ್. ವೃತ್ತ, ಸಯ್ಯಾಜಿರಾವ್ ರಸ್ತೆ ಮೂಲಕ ಬನ್ನಿಮಂಟಪದತ್ತ ಬಲರಾಮ ಚಿನ್ನದ ಅಂಬಾರಿಯನ್ನು ಹೊತ್ತು ನಡೆಯುವ ದೃಶ್ಯ ಮನಸೂರೆಗೊಳಿಸುತ್ತದೆ.

ಅಂಬಾರಿ ಹೊತ್ತ ಆನೆಗಳ ಇತಿಹಾಸ ಮೈಸೂರು ದಸರಾ ಎಂದರೆ ನೆನಪಾಗುವುದು ಅಂಬಾರಿ ಮತ್ತು ಆನೆ. ಕೃಷ್ಣದೇವರಾಯ ಒಡೆಯರ್ ಕಾಲದಲ್ಲಿ ಪಿರಿಯಾಪಟ್ಟಣದ ಬೆಟ್ಟದಪೂರದ ಬಳಿ ಸೆರೆ ಸಿಕ್ಕ ಜಯಮಾರ್ತಾಂಡ ಆನೆ ಮೈಸೂರು ದಸರಾದಲ್ಲಿ ಮೊದಲ ಅಂಬಾರಿ ಹೊತ್ತ ಆನೆ ಆಗಿದೆ. ಒಡೆಯರ್ ಕಾಲದಲ್ಲಿ ಪ್ರಾರಂಭವಾದ ವಿಜಯದಶಮಿಯಿಂದ ಅಂದಾಜು ನಲವತ್ತೈದು ವರ್ಷಗಳ ಕಾಲ ಚಿನ್ನದ ಅಂಬಾರಿಯನ್ನು ಹೊತ್ತ ಹಿನ್ನೆಲೆಯಲ್ಲಿ ಈ ಆನೆಯು ಮಹಾರಾಜರ ಪ್ರೀತಿಗೆ ಪಾತ್ರವಾಗಿತ್ತು. ಆರಮನೆಯ ಮಹಾದ್ವಾರಗಳಲ್ಲೊಂದಾದ ಜಯಮಾರ್ತಾಂಡ ದ್ವಾರಕ್ಕೆ ಈ ಆನೆಯ ಹೆಸರನ್ನು ಇಡಲಾಗಿದೆ.

**೧೯೦೨ರಿಂದ ಅಂಬಾರಿ ಹೊತ್ತ ಆನೆಗಳೆಂದರೆ:** ವಿಜಯಬಹದ್ದೂರ್, ನಂಜುಂಡ, ರಾಮಪ್ರಸಾದ್, ಮೋತಿಲಾಲ್, ಸುಂದರ್ ರಾಜ್, ಐರಾವತ, ಗಜೇಂದ್ರ, ಬಿಳಗಿರಿ,

ರಾಜೇಂದ್ರ, ಧ್ರೋಣ, ಅರ್ಜುನ, ಬಲರಾಮ, ಅರ್ಜುನ. ೧೯೩೫ರಲ್ಲಿ ಐರಾವತ ಆನೆಯನ್ನು ಹಾಲಿವುಡ್ ಚಿತ್ರ 'ದಿ ಎಲಿಫೆಂಟ್ ಬಾಯ್'ಗೆ ಬಳಸಿಕೊಳ್ಳಲಾಯಿತು. ಆನೆಯ ಮಾವುತನೇ ಈ ಚಿತ್ರದ ನಾಯಕ, ಚಿತ್ರ ಜಗತ್ತಿನಾದ್ಯಂತ ಪ್ರದರ್ಶನಗೊಂಡಿತ್ತು. ಆ ಮಾವುತ ಬೇರೆ ಯಾರು ಅಲ್ಲ ಏಳು ವರ್ಷದ ಹುಡುಗ ಮೈಸೂರಿನ ಸಾಬು.

**ಬಿಳಿಗಿರಿ:** ಈ ಆನೆಯು ಅಂಬಾರಿ ಹೊತ್ತ ಆನೆಗಳಲ್ಲಿ ಅತ್ಯಂತ ದೈತ್ಯ ಆನೆಯಾಗಿದ್ದು ಇದರ ಎತ್ತರ ೧೦.೫ ಅಡಿ ಸುಮಾರು ೭ ಸಾವಿರ ಕೆ.ಜಿ. ತೂಕವಿರವ ಈ ಆನೆಯು ೧೯೭೫ರಲ್ಲಿ ಮರಣ ಹೊಂದಿತ್ತು. ಈ ಆನೆಯ ಮಾವುತ ಗೌಸ್ ಅಂತ. ಬಿಳಿಗಿರಿ ಹೆಗ್ಗಳಿಕೆಗೆ ಏನೆಂದರೆ ಇದೇ ಮಹಾರಾಜನನ್ನು ಹೊತ್ತೊಯ್ದ ಕೊನೆಯ ಆನೆ.

**ರಾಜೇಂದ್ರ:** ಈ ಆನೆಯು 'ಗಂಧದ ಗುಡಿ' ಚಿತ್ರದಲ್ಲಿ ಡಾ. ರಾಜಕುಮಾರ ಈ ಆನೆಯ ದಂತದ ಮೇಲೆ ಕುಳಿತು ಹಾಡನ್ನು ಚಿತ್ರಿಕರಿಸುವ ದೃಶ್ಯ ಜನಪ್ರಿಯವಾಗಿದೆ. ಈ ಆನೆಯು ಗಂಧದ ಗುಡಿ ಚಿತ್ರದ ಒಂದು ಭಾಗವಾಗಿ ಚಿತ್ರದ ಉದ್ದಕೂ ಪಾತ್ರ ವಹಿಸಿದೆ. ಚಿತ್ರಿಕರಣದ ಸಮಯದಲ್ಲಿ ಡಾ. ರಾಜಕುಮಾರ ಅವರಿಗೆ ಅಚ್ಚುಮೆಚ್ಚಿನ ಆನೆ ಇದಾಗಿತ್ತು.

**ಧ್ರೋಣ:** ಈ ಆನೆಯು ೧೦.೨೫ ಅಡಿ ಎತ್ತರವನ್ನು ಹೊಂದಿದ್ದು, ಸುಮಾರು ೬೪೦೦ ಕೆ.ಜಿ. ತೂಕದ ಆನೆ ಆಗಿತ್ತು. ೧೮ ವರ್ಷ ಸತತವಾಗಿ ಅಂಬಾರಿಗೆ ಬೆನ್ನುಕೊಟ್ಟ ಖ್ಯಾತಿ ಧ್ರೋಣಕ್ಕೆ ಇದೆ. ಇದು ಕಿರುತೆರೆಯಲ್ಲಿ ಪ್ರಸಾರವಾಗುತ್ತಿದ್ದ ಜನಪ್ರಿಯ ಧಾರವಾಹಿ 'ದಿ ಸೋರ್ಡ್ ಆಫ್ ಟಿಪ್ಪುಸುಲ್ತಾನ್'ನ ಟಿಪ್ಪು ಪಾತ್ರಧಾರಿಯನ್ನು ಹೊತ್ತೊಯ್ದದ್ದು ಇದೇ ಧ್ರೋಣ. ೧೯೯೮ರಲ್ಲಿ ಹೈಟೆನ್ಷನ್ ವಿದ್ಯುತ್ ತಗುಲಿ ಧ್ರೋಣ ಸಾವನ್ನಪ್ಪಿತ್ತು.

**ಅರ್ಜುನ:** ಧ್ರೋಣನ ನಂತರ ಅರ್ಜುನ ಒಮ್ಮೆ ಅಂಬಾರಿ ಹೊತ್ತಿದ್ದ. ಆದರೆ ನಂತರದ ದಿನಗಳಲ್ಲಿ ಮಾವುತನನ್ನು ಕೊಂದ ಆರೋಪದಲ್ಲಿ ಅರ್ಜುನನ್ನು ಉತ್ಸವದಿಂದ ಹೊರಗುಳಿಸಲಾಯಿತು.

**ಬಲರಾಮ:** ಅರ್ಜುನ ನಂತರ ಬಲರಾಮನಿಗೆ ಅಂಬಾರಿ ಹೊರಿಸಲಾಯಿತು, ಬಲರಾಮ ಶಾಂತ ಸ್ವಭಾವದ ಆನೆಯಾಗಿದ್ದು ೧೯೮೭ರಲ್ಲಿ ಕಟ್ಟೆಪುರದಲ್ಲಿ ಬಲರಾಮ, ಗಜೇಂದ್ರ, ವಿಕ್ರಮ, ಹರ್ಷ, ಪ್ರಶಾಂತ ಈ ಐದು ಆನೆಗಳನ್ನು ಹಿಡಿದಿದ್ದರು. ೧೧ ವರ್ಷಗಳ ಕಾಲ ಅಂಬಾರಿ ಹೊತ್ತ ಬಲರಾಮನಿಗೆ ಕಳೆದ ವರ್ಷ(೨೦೧೫) ನಿವೃತ್ತಿ ದೊರೆತಿದೆ.

**ಅರ್ಜುನ:** ಧ್ರೋಣನ ಮರಣಾನಂತರ ಒಮ್ಮೆ ಅಂಬಾರಿ ಹೊತ್ತಿದ ಅರ್ಜುನ ಗುಣದಲ್ಲಿ ಸ್ವಲ್ಪ ಕಿಟಲೆ ಸ್ವಾಭಾವವಿರುವ ಅರ್ಜುನನ ಮೇಲೆ ಸಾಕಷ್ಟು ಟೀಕೆಗಳು ಬಂದಿತ್ತು. ಆದರೂ ಬಲರಾಮನಿಗೆ ವಯಸ್ಸಾದ ಕಾರಣ ಕಳೆದ ವರ್ಷದಿಂದ ಅಂಬಾರಿ ಹೊರುವ ಜವಾಬ್ದಾರಿ ಅರ್ಜುನನಿಗೆ ನೀಡಲಾಗಿದೆ. ಅರ್ಜುನ ಬರೋಬ್ಬರಿ ೫೫೩೫ ಕೆ.ಜಿ. ತೂಕವನ್ನು ಹೊಂದುವ ಮೂಲಕ ತಂಡದ ಎಲ್ಲ ಆನೆಗಳಿಗಿಂತಲೂ ಬಲಿಷ್ಠನಾಗಿದ್ದಾನೆ.

**ಆನೆಗಳ ಭೋಜನ:** ಮೈಸೂರು ದಸರಾಕ್ಕೆ ಸುಮಾರು ಒಂದು ತಿಂಗಳು ಇರುವಾಗಲೇ ನಾಗರಹೊಳೆಯ ವೀರನಹೊಸಹಳ್ಳಿಯಿಂದ ಆರು ಆನೆಗಳ ಮೊದಲ ತಂಡದ ಗಜಪಯಣ ಮೈಸೂರಿಗೆ ಆಗಮಿಸಿದರೆ, ಆ ನಂತರ ದಸರಾ ಹಬ್ಬಕ್ಕೆ ಕೆಲವೇ ದಿನಗಳ ಅಂತರದಲ್ಲಿ ಉಳಿದ ಆರು ಆನೆಗಳ ಎರಡನೇ ತಂಡ ಬರುತ್ತದೆ. ಈ ಗಜಪಡೆಗೆ ಮೈಸೂರಿನ ಅರಮನೆ ಆವರಣದಲ್ಲಿ ದಿನನಿತ್ಯ ವಿವಿಧ ಬಗೆಯ ಭೂರಿಭೋಜನ. ಅದರಲ್ಲೂ ಜಂಬೂಸವಾರಿಯಲ್ಲಿ ೭೫೦ ಕೆ.ಜಿ. ತೂಕದ ಚಿನ್ನದ ಅಂಬಾರಿ ಹೊತ್ತು ಸಾಗುವ ಅರ್ಜುನನಿಗೆ ವಿಶೇಷ ಸತ್ಕಾರಗಳು ನಡೆಯುತ್ತವೆ. ಉದ್ದು, ಗೋಧಿ, ಕುಸುಲಕ್ಕಿ, ಈರುಳ್ಳಿ, ಹಸಿ ತರಕಾರಿಗಳ ದೊಡ್ಡ ಉಂಡೆ, ಜೊತೆಗೆ ಬೆಣ್ಣೆ, ಭತ್ತ, ತೆಂಗಿನಕಾಯಿ, ಹಿಂಡಿ, ಕಬ್ಬು, ಬೆಲ್ಲ, ಉಚ್ಚೆಳ್ಳು, ಮೊದಲಾದವುಗಳು ವಿವಿಧ ಬಗೆಯ ಆಹಾರಗಳನ್ನು ನೀಡಲಾಗುತ್ತದೆ. ಅಲ್ಲದೇ ಹಸಿರು ಮೇವುಗಳಾಗಿ ಆಲದ ಮರದ ಸೊಪ್ಪು, ಹುಲ್ಲನ್ನು ಆಗಾಗ್ಗೆ ನೀಡಲಾಗುತ್ತದೆ. ದಿನಕ್ಕೆ ಎರಡು ಬಾರಿ ಆವರಣದ ತೊಟ್ಟಿಯಲ್ಲಿ ಮಜ್ಜನದ ವೈಭೋಗ ನಡೆಯುತ್ತದೆ.

**ಜಂಬೂಸವಾರಿ ತಾಲೀಮು:** ಜಂಬೂಸವಾರಿಯಲ್ಲಿ ಯಾವುದೇ ರೀತಿಯ ಅಡೆತಡೆಗೆ ಬಗ್ಗದೆ ಮುನ್ನಡೆಯಲು ಸಿದ್ಧವಾಗಿರಲು ಅರ್ಜುನನಿಗೆ ಸುಮಾರು ೭೫೦ ಕೆ.ಜಿ. ತೂಕದ ಮರದ ಅಂಬಾರಿಯನ್ನು ಉಳಿದ ಆನೆಗಳಿಗೆ ಮರಳಿನ ಮೂಟೆಯನ್ನು ಕಟ್ಟಿ ದಿನಕ್ಕೊಮ್ಮೆ ಅರಮನೆಯಿಂದ ಸಯಾಜಿರಾವ್ ರಸ್ತೆಯಲ್ಲಿ ಬನ್ನಿಮಂಟಪದವರೆಗೆ ಕಡ್ಡಾಯವಾಗಿ ತಾಲೀಮು ನಡೆಸುತ್ತಾರೆ. ಈ ಗಜಪಡೆಯ ಉಸ್ತುವಾರಿಗೆ ಮಾವುತರು, ಕಾವಡಿಗರು, ಇರುವುದರೊಂದಿಗೆ ಪಶುವೈದ್ಯಾಧಿಕಾರಿಗಳಿಂದ ಆಗಾಗ ಆನೆಗಳ ತಪಾಸಣೆಯೂ ನಡೆಯುತ್ತದೆ. ಈ ಗಜಪಡೆಯನ್ನು ಸುರಕ್ಷಿತವಾಗಿ ನೋಡಿಕೊಳ್ಳಲು ಮಾವುತರ ಕುಟುಂಬಗಳಿಗೆ ಅರಮನೆಯ ಆವರಣದಲ್ಲಿ ತಾತ್ಕಾಲಿಕವಾಗಿ ವಾಸ್ತವ್ಯದ ವ್ಯವಸ್ಥೆ ಮಾಡಲಾಗಿರುತ್ತದೆ. ಸುಮಾರು ಒಂದೂವರೆ ತಿಂಗಳಿಗೂ ಹೆಚ್ಚು ಕಾಲ ದಿನನಿತ್ಯ ಆನೆಗಳಿಗೆ ಕಠಿಣ ತಾಲೀಮು ನಡೆಸಿ ದಸರಾ ದಿನದಂದೂ ಕಣ್ಣುಕುಕ್ಕಿಸುವಂತಹ ವೇಷಭೂಷಣಗಳಿಂದ ಕಂಗೊಳಿಸುತ್ತ ಗಂಭೀರ್ಯದ ಹೆಜ್ಜೆಯನ್ನಿಡುತ್ತ ಮೆರವಣಿಗೆಯಲ್ಲಿ ಸಾಗುವ ಗಜಪಡೆಗಳ ನಡೆ ರೋಚಕವಾಗಿದೆ(ಅರಳಿಕಟ್ಟೆ, ೨೨, ಸೆಪ್ಟೆಂಬರ್, ೨೦೧೭).

ವಿಜಯದಶಮಿಯ ಕೊನೆಯ ದಿನ ರಾಜನಾದವನು ಸೀಮೋಲ್ಲಂಘನೆ ಮಾಡಬೇಕು ಎಂದು ಪುರಾಣಗಳಲ್ಲಿ ಉಲ್ಲೇಖಿಸಲಾಗಿದೆಯಂತೆ. ಹೀಗಾಗಿಯೇ ಮೈಸೂರಿನ ಅರಸರು ಜಂಬೂಸವಾರಿ ಮಾಡುವ ಆಚರಣೆ ಬೆಳೆದುಬಂದಿತು ಎಂದು ಹೇಳಲಾಗುತ್ತದೆ.

## ಕೊನೆಯ ಟಿಪ್ಪಣಿ

೧. ಬಸಪ್ಪನವರ್ ಸಿ.ಎಚ್., ಗಜಗಾಮಿನಿ, ೨೦೦೫, ಪು. ೬೨.

೨. ಅದೇ, ಪು. ೬೩.

೩. ಅದೇ, ಪು. ೬೪.

೪. ಅದೇ, ಪು. ೬೪.

೫. ಶ್ರೀಮತಿ ಎಚ್.ಎಸ್. (ಸಂ), ಸೌಗಂಧಿಕಾ ಪರಿಣಯ, ೧೪ನೇ ಆಶ್ವಾಸ, ೨೦೦೪, ಪು. ೩೩೩.

೬. ಲೆಫ್ಟಿನೆಂಟ್ ಕರ್ನಲ್ ವಿಲಿಯಮ್, ಗಜೇಂದ್ರ ಲೋಕ, ೧೯೪೨, ಪು. ೫೭.

೭. ಅದೇ, ಪು. ೫೭.

೮. ಅದೇ, ಪು. ೭೩–೭೪.

೯. ಅದೇ, ಪು. ೮೦–೮೧.

೧೦. ಬಸಪ್ಪನವರ್ ಸಿ.ಎಚ್., ಗಜಗಾಮಿನಿ, ೨೦೦೫, ಪು. ೫೨.

೧೧. ಅದೇ, ಪು. ೧೭೮.

೧೨. ಅದೇ, ಪು. ೫೫.

೧೩. ಅದೇ, ಪು. ೫೬.

೧೪. ಅದೇ, ಪು. ೫೬.

೧೫. ಬಸಪ್ಪನವರ್ ಸಿ.ಎಚ್., ಗಜಗಾಮಿನಿ, ೨೦೦೫, ಪು. ೬೨.

೧೬. ಅನಂತರಂಗಾಚಾರ್ ಎನ್. (ಸಂ), ಪಂಪ ಭಾರತ, ೧೦, ೧೯೭೩, ಪು. ೪೬.

೧೭. ಕುಂದಣಗಾರ ಕೆ.ಜಿ., ಅನಂತ ಅಣ್ಣರಾವ್ ಚೌಗಲಿ, ಆದಿಪುರಾಣ, ೧೯೫೭, ಪು. ೧೪, ೯೦.

೧೮. ಲೆಫ್ಟಿನೆಂಟ್ ಕರ್ನಲ್ ವಿಲಿಯಮ್ಸ್, ಗಜೇಂದ್ರ ಲೋಕ, ೧೯೫೮, ಪು. ೩೦.

೧೯. ಅದೇ, ಪು. ೩೦.

೨೦. ಕಲ್ಲಯ್ಯ ಹಿರೇಮಠ, 'ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ೨೦೦೯, ಪು. ೨೬೮, ೧೨೫.

೨೧. ಅದೇ, ಪು. ೨೬೮, ೧೨೫.

೨೨. ಕಲ್ಲಯ್ಯ ಹಿರೇಮಠ, 'ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ೨೦೦೯, ಪು. ೧೨೮.

೨೩. ಅದೇ, ಪು. ೧೨೯.

ಅಧ್ಯಾಯ ಆರು

# ಸಮಾರೋಪ

ಆದಿ ಮಾನವರ ಹಂತದಿಂದ ನಾಗರೀಕ ಹಂತದವರೆಗಿನ ಬೆಳವಣಿಗೆಯಲ್ಲಿ ಬೌದ್ಧಿಕವಾಗಿ ಅಭಿವೃದ್ಧಿ ಹೊಂದುತ್ತಾ ಸಾಗಿರುವುದನ್ನು ನಮ್ಮ ಗತ ಇತಿಹಾಸ ತಿಳಿಸಿಕೊಡುತ್ತದೆ. ಮನುಷ್ಯರು ನಾಗರಿಕರಾದಂತೆಲ್ಲ ಕಾಡಿನ ಪ್ರಾಣಿಗಳನ್ನು ಪಳಗಿಸಿ ಸಾಕತೊಡಗಿದರು. ಸಾಕಿದ ಪ್ರಾಣಿಗಳನ್ನು ತಮ್ಮ ಶ್ರಮದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸೃಷ್ಟಿಸಿಕೊಂಡರು. ಆನೆಯಂತಹ ಬೃಹತ್ ಗಾತ್ರದ ಪ್ರಾಣಿಯನ್ನೇ ಪಳಗಿಸಿ ಅದರ ಉಪಯೋಗವನ್ನು ಪಡೆಯುವಷ್ಟು ಚಾಣಾಕ್ಷತೆ ಮಾನವರಲ್ಲಿತ್ತು ಹಾಗೂ ಇದೆ. ಹೀಗೆ ಆದಿ ಕಾಲದಿಂದಲೂ ತನಗೆ ಪರಿಚಿತವಾದ ಕಾಡುಪ್ರಾಣಿಗಳಲ್ಲಿ ಒಂದಾದ ಆನೆಯ ಕುರಿತ ಕುತೂಹಲವು, ಕೊನೆಗೆ ಆನೆಯಂತಹ ಬೃಹತ್ ಪ್ರಾಣಿಯನ್ನು ತಮ್ಮ ಅವಶ್ಯಕತೆಗೆ ಹೇಗೆ ಬಳಸಿಕೊಳ್ಳ ಬಹುದೆಂಬುದನ್ನು ಅರಿತು ಯುದ್ಧದಿಂದ ಹಿಡಿದು ನಾನಾ ವಿಧದ ಕೆಲಸಗಳಿಗೆ ಬಳಕೆ ಮಾಡಿಕೊಳ್ಳತೊಡಗಿದನು ಹಾಗೂ ತನ್ನ ಬದುಕಿಗೆ ಸಹಕಾರಿಯಾದ ದೈತ್ಯ ಪ್ರಾಣಿ ಆನೆಗೆ ದೈವತ್ವವನ್ನು ಆರೋಪಿಸಿದರು. ಪ್ರಾಯಶಃ ಮಾನವರು ಶ್ರಮದ ಕಾರ್ಯಗಳಿಗಾಗಿ ಬಳಸಿಕೊಳ್ಳುತ್ತಿದ್ದ ಎತ್ತು, ಆಕಳು, ಕುದುರೆ, ಆನೆ ಮುಂತಾದ ಪ್ರಾಣಿಗಳಿಗೆ ನೇರವಾಗಿಯೋ ಇಲ್ಲವೇ ಪರೋಕ್ಷವಾಗಿಯೋ ದೈವತ್ವದ ಸ್ವರೂಪವನ್ನು ಕಲ್ಪಿಸಿದನು. ಕುದುರೆ ಆನೆಯಂತಹ ಪ್ರಾಣಿಗಳನ್ನು ನೇರವಾಗಿ ಆರಾಧಿಸಲು ಸಾಧ್ಯವಾಗದಿದ್ದಾಗ ಅವುಗಳ ಮುಖವನ್ನು ಮಾನವ ದೇಹಕ್ಕೆ ಸೇರಿಸಿ ಗಜಮುಖ ಗಣಪ, ಹಯವದನದಂತಹ ದೇವತೆಗಳನ್ನು ಸೃಷ್ಟಿಸಿಕೊಂಡರು. ಆಕಳೊಳಗೆ ಒಂದೊಂದು ಅಂಗದೊಳಗೆ ಒಂದೊಂದು ದೈವವಿದೆ ಎಂದು ಹೇಳುವಂತೆ ಆನೆಯ ಪ್ರತಿಯೊಂದು ಅಂಗದಲ್ಲಿಯೂ ದೇವಾನು ದೇವತೆಗಳು ನೆಲೆಸಿವೆ ಎಂದು ಮಾನವರು ನಂಬಿದ ಉದಾಹರಣೆಗಳು ಸಾಕಷ್ಟು

ದೊರೆಯುತ್ತವೆ. ಆನೆಯನ್ನು ದೇವೇಂದ್ರನ ವಾಹನವೆಂದೇ ಕರೆಯಲಾಗುತ್ತದೆ. ದೇವೇಂದ್ರನ ವಾಹನವಾದ ಐರಾವತವು ಮಾನವ ಕಲ್ಪನೆಯ ಆನೆಯಾಗಿದೆ. ಆನೆ ಮನುಷ್ಯ ಸ್ವಭಾವಕ್ಕೆ ತೀರಾ ಹತ್ತಿರದ ಪ್ರಾಣಿಯಾಗಿದೆ ಎಂಬ ನಂಬಿಕೆ ಮನುಷ್ಯರದ್ದಾಗಿದೆ.

ಆನೆಗಳ ಕುರಿತಾಗಿ ಸಿಂಧೂ ನಾಗರಿಕತೆಯ ಪೂರ್ವದಿಂದಲೇ ಮಾನವರಿಗೆ ಅರಿವು ಇದ್ದಿತೆಂಬುದನ್ನು ಶಿಲಾಯುಗದ ಸುಣ್ಣ, ಕೆಮ್ಮಣ್ಣು ಹಾಗೂ ಕುಟ್ಟು ಚಿತ್ರಗಳ ಮೂಲಕ ತಿಳಿದುಬರುತ್ತದೆ. ಮುಖ್ಯವಾಗಿ ಯುದ್ಧದ ವಿವರಗಳನ್ನು ನೀಡುವಾಗ ಕನ್ನಡ ಸಾಹಿತ್ಯ ಕೃತಿಗಳು ಗಜಪಡೆಯ ವಿವರಗಳು, ಮಾವುತರು ಇತ್ಯಾದಿ ವಿವರಗಳನ್ನು ನೀಡುತ್ತವೆ. ಹಾಗೆಯೇ ರಾಜಮಹಾರಾಜರ ಪಟ್ಟಾಭಿಷೇಕ, ಕರ್ನಾಟಕದ ಹಲವಾರು ದೇವಸ್ಥಾನ, ಮಠ ಮಾನ್ಯಗಳ ಉತ್ಸವ, ಹಬ್ಬ ಹರಿದಿನಗಳಲ್ಲಿ ಆನೆಗಳು ಬಳಕೆಗೊಳ್ಳುತ್ತಿರುವುದನ್ನು ಕಾಣುತ್ತೇವೆ. ಇಂದಿಗೂ ಮೈಸೂರು ದಸರಾದಂತಹ ಉತ್ಸವದಲ್ಲಿ ಆನೆಗಳಿಗೆ ಎಂತಹ ಮಹತ್ವದ ಸ್ಥಾನವಿದೆಯಂಬುದನ್ನು ಕಂಡಿದ್ದೇವೆ. ಮಠ-ಮಾನ್ಯಗಳು, ದೇವಸ್ಥಾನಗಳು ಆನೆಗಳನ್ನು ಸಾಕುವುದನ್ನು ತಮ್ಮ ಪ್ರತಿಷ್ಠೆಯ ವಿಷಯವೆಂದು ಪರಿಗಣಿಸಿರುವುದು ಜನಜನಿತ ವಿಚಾರವಾಗಿದೆ.

ಆನೆಯು ಭೂವಾಸಿ ಪ್ರಾಣಿಗಳಲ್ಲಿ ಬೃಹತ್ತಾದುದು. ಗಾತ್ರದಲ್ಲಿ ಪ್ರಾಚೀನ ಕಾಲದ ಡೈನೋಸಾರ್‌ಗಳ ನಂತರದ ಸ್ಥಾನ ಈ ಆನೆಗಳಿಗೆ ಸಲ್ಲುತ್ತದೆ. ಆದಿಮಾನವರ ಗುಹಾಚಿತ್ರಗಳಲ್ಲಿ ಆನೆಯ ಚಿತ್ರ ಇರುವುದನ್ನು ಕಾಣಬಹುದು. ಅಂದರೆ ಮಾನವರ ಮತ್ತು ಆನೆಯ ಸಂಬಂಧ ತುಂಬಾ ಹಿಂದಿನಿಂದಲೂ ಇದೆ ಎಂಬುದು ಆದಿಮಾನವರು ರಚಿಸಿದ ಚಿತ್ರಗಳ ಮೂಲಕ ತಿಳಿದುಬರುತ್ತದೆ. ರಾಜಮಹಾರಾಜರ ಆಸ್ಥಾನಗಳಲ್ಲಿ ಆನೆಗೆ ವಿಶಿಷ್ಟ ಸ್ಥಾನವಿತ್ತು. ಪ್ರಾಚೀನ ಕಾಲದ ನಾಣ್ಯಗಳಲ್ಲಿ ಆನೆಯ ಚಿತ್ರವಿರುವ ನಾಣ್ಯಗಳು ಸಿಕ್ಕಿವೆ. ಆನೆಯನ್ನು ಪೂಜನೀಯವಾಗಿ ಕಂಡ ಮಾನವರು ತಮಗೆ ಅಸಾಧ್ಯವಾದ ಕೆಲಸಗಳನ್ನು ಪೂರೈಸಿಕೊಳ್ಳಲು ಕಾಡಿನಿಂದ ಹಿಡಿದು ತಂದು ಪಳಗಿಸಿದ ತರುವಾಯ ಆನೆಗಳ ಸಹಾಯ ಪಡೆಯುವುದನ್ನು ಕಾಣುತ್ತೇವೆ. ಸರ್ವಶಕ್ತವಾದ ಆನೆ ಮಾನವರ ಆಜ್ಞೆಗೆ ತಕ್ಕಂತೆ ಹೆಜ್ಜೆ ಹಾಕುವುದು. ಮಾನವರಿಗೆ ಅಸಾಧ್ಯವಾದ ಕೆಲಸಗಳನ್ನು ಪೂರೈಸಲು ಸಹಕಾರಿಯಾಗಿದ್ದ ಆನೆಗಳ ಕುರಿತು ಭಾರತೀಯ ಭಾಷೆಗಳಲ್ಲಿ, ಅದರಲ್ಲೂ ಸಂಸ್ಕೃತದಲ್ಲಿ ಹಲವಾರು ಶಾಸ್ತ್ರೀಯ ಕೃತಿಗಳು ಸೃಷ್ಟಿಗೊಂಡಿವೆ. ಕನ್ನಡ ಸಾಹಿತ್ಯ ಕೃತಿಗಳು ಸಾಹಿತ್ಯಕವಾಗಿ ಪ್ರಧಾನವಾಗಿ ಸಂಸ್ಕೃತ ಭಾಷೆಯನ್ನು ಅವಲಂಬಿಸಿತ್ತು ಎಂಬುದು ಕನ್ನಡ ಸಾಹಿತ್ಯಾಧ್ಯಯನ ಕಾರರಿಗೆಲ್ಲಾ ತಿಳಿದಿರುವ ವಿಚಾರ. ಇದಕ್ಕೆ ಉದಾಹರಣೆಯಾಗಿ ನೋಡುವುದಾದರೆ ಹಳಗನ್ನಡ ಸಾಹಿತ್ಯವನ್ನೇ ಗಮನಿಸಬಹುದು. ಹೀಗಾಗಿ ಬಹುತೇಕ ಕನ್ನಡದ ಶಾಸ್ತ್ರೀಯ

ಗ್ರಂಥಗಳು ಸಂಸ್ಕೃತ ಮೂಲದ ಕೃತಿಗಳ ಆಧಾರದ ಮೇಲೆ ರಚನೆಗೊಂಡ ಕೃತಿಗಳಾಗಿವೆ. ಈ ರೀತಿ ರಚನೆಗೊಂಡ ಕೃತಿಗಳು ಗಜಶಾಸ್ತ್ರ ಕೃತಿಗಳೆಂದೇ ಗುರುತಿಸಿಕೊಳ್ಳುತ್ತವೆ. ಆನೆಗಳ ಹುಟ್ಟು, ಬೆಳವಣಿಗೆ, ಅವು ನೆಲೆಸಿದ ಕಾಡು, ಜಾತಿ ಪ್ರಭೇದಗಳು, ಸುಳಿ ಮುಂತಾದ ದೈಹಿಕ ಲಕ್ಷಣಗಳು, ಆನೆಗಳನ್ನು ಪಳಗಿಸುವ ಕ್ರಮ, ಆನೆಗಳಿಗೆ ಉಂಟಾಗುವ ಜಾಡ್ಯಗಳು ಹಾಗೂ ಜಾಡ್ಯಗಳಿಗೆ ಪರಿಹಾರೋಪಾಯಗಳು, ರಾಜನಾದವನು ಹೊಂದಬೇಕಾದ ಆನೆಗಳು ಹೇಗಿರಬೇಕು ಮುಂತಾದ ಹಲವಾರು ವಿವರಗಳನ್ನು ಈ ಕೃತಿಗಳು ಒದಗಿಸುತ್ತವೆ. ಹಾಗೆಯೇ ಆಧುನಿಕ ಸಂದರ್ಭದಲ್ಲಿಯೂ ಆನೆಗಳ ಒಡನಾಟ ಹೆಚ್ಚಿದ್ದ ಅರಣ್ಯಾಧಿಕಾರಿಗಳು, ಸೈನ್ಯಾಧಿಕಾರಿಗಳು ಸಹ ಆನೆಗಳ ಗುಣ ಸ್ವಭಾವ, ಕಾರ್ಯ ವೈಖರಿಗಳ ಕುರಿತು ಬರೆದಿದ್ದಾರೆ. ಹಳೆಯ ಗಜಶಾಸ್ತ್ರದ ಕೃತಿಗಳು ವಾಸ್ತವಾಂಶಗಳನ್ನು ಬಿಂಬಿಸುವುದರ ಜೊತೆಗೆ ಅಲೌಕಿಕವಾದ ಪೌರಾಣಿಕ ಅಂಶಗಳಿಂದ ಕೂಡಿದ್ದರೆ, ಹೊಸ ತಲೆಮಾರಿನ ಕೃತಿಗಳು ವಾಸ್ತವಾಂಶಕ್ಕೆ ಹೆಚ್ಚಿಗೆ ಒತ್ತನ್ನು ನೀಡಿವೆ. ಇಂತಹ ಗಜಶಾಸ್ತ್ರದ ಕುರಿತು ಅದರಲ್ಲೂ ಕನ್ನಡ ಸಾಹಿತ್ಯದಲ್ಲಿ ರಚಿಸಲಾಗಿರುವ ಗಜಶಾಸ್ತ್ರದ ಕೃತಿಗಳನ್ನು ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಆದಿಮಾನವನು ಆನೆಗಳನ್ನು ಬಳಸುತ್ತಿದ್ದ ಎಂಬುದಕ್ಕೆ ಅನೇಕ ಗುಹಾಚಿತ್ರಗಳಲ್ಲಿ ಆನೆಗಳ ಕುಟ್ಟುಚಿತ್ರಗಳನ್ನು ಕಾಣುತ್ತೇವೆ. ಅದೇ ರೀತಿ ಆನೆಗಳ ಚಿತ್ರವಿರುವ ಮುದ್ರಿಕೆಗಳು, ಆನೆಯ ಮಣ್ಣಿನ ಗೊಂಬೆ, ಆನೆಯ ದಂತದ ಬಳೆಗಳು ಇತ್ಯಾದಿಗಳನ್ನು ಸಿಂಧೂ ನಾಗರಿಕತೆ ಸಂದರ್ಭದಲ್ಲಿ ಇದ್ದವೆಂಬುದನ್ನು ಸಂಶೋಧಕರು ಗುರುತಿಸಿದ್ದಾರೆ. ಆದರೆ ಮಾನವರು ಆನೆಗಳನ್ನು ಪಳಗಿಸುವ ಕಲೆ ಎಂದು ಕಲಿತರು. ಆಳರಸರ ಪ್ರಮುಖ ಭಾಗವಾಗಿ ಆನೆಗಳು ರೂಪಾಂತರಗೊಂಡ ಬಗೆ ಇತ್ಯಾದಿಗಳನ್ನು ಅಷ್ಟು ಸುಲಭವಾಗಿ ಹಾಗೂ ನಿಖರವಾಗಿ ಹೇಳಲಾಗುವುದಿಲ್ಲ. ಆದರೆ ಪ್ರಾಚೀನ ಕಾಲದಿಂದಲೂ ಮಾನವರ ಹಾಗೂ ಆನೆಯ ಮಧ್ಯದಲ್ಲಿ ಅವಿನಾಭಾವ ಸಂಬಂಧವಿದ್ದಿತೆಂಬುದನ್ನು ಭಾರತೀಯ ಪ್ರಾಚೀನ ಸಾಹಿತ್ಯದ ಮೂಲಕ ತಿಳಿದುಬರುತ್ತದೆ. ಮನುಷ್ಯರು ತಮ್ಮ ದೈಹಿಕ ಶಕ್ತಿಗಿಂತ ನೂರಾರು ಪಟ್ಟು ಹೆಚ್ಚಿನ ದೈಹಿಕ ಶಕ್ತಿಯನ್ನು ಹೊಂದಿದ ಆನೆಗಳನ್ನು ಪಳಗಿಸಿ ತಮ್ಮ ಕೆಲಸ ಕಾರ್ಯಗಳನ್ನು ಪೂರೈಸಿಕೊಳ್ಳುವುದನ್ನು ಕಲಿತನು. ರಾಜನ ಆಸ್ಥಾನದ ಪ್ರತಿಷ್ಠೆಯಾಗಿ ಆನೆಗಳು ಬಳಕೆಗೊಳ್ಳತೊಡಗಿದವು.

ಪ್ರಾಚೀನ ರಾಜಮನೆತನದವರು ಆನೆಗೆ ಬಹುಮುಖ್ಯವಾದ ಸ್ಥಾನವನ್ನು ನೀಡಿದ್ದರು. ಗಂಗರ ರಾಜಧಾನಿ ತಲಕಾಡು ಎಂಬುದು ದಟ್ಟವಾದ ಅರಣ್ಯಗಳಿಂದ ಕೂಡಿದ್ದ ಪ್ರದೇಶವಾಗಿದ್ದು, ಇದನ್ನು ಗಜಾರಣ್ಯವೆಂದು ಪ್ರಸಿದ್ಧಿಯಾಗಿತ್ತು. ಮದಗಜ ಗಂಗಲಾಂಛನವಾಗಲು

ಈ ಸಂಗತಿಯೇ ಕಾರಣವಿರಬೇಕು. ಹಾಗೂ ವಿಜಯನಗರದ ೨ನೇ ದೇವರಾಯನು 'ಗಜಬೇಂಟೆಗಾರ' ಎಂಬ ಬಿರುದನ್ನು ಹೊಂದಿದ್ದನು. ಕಲ್ಯಾಣ ಚಾಲುಕ್ಯರು ಆನೆಯ ಚಿತ್ರವಿರುವ ಚಿನ್ನ, ಬೆಳ್ಳಿ, ತಾಮ್ರ, ಲೋಹದ ನಾಣ್ಯಗಳನ್ನು ಟಂಕಿಸಿದ್ದರು. ಕೃಷ್ಣದೇವರಾಯನು ತನ್ನ ಸೈನ್ಯದಲ್ಲಿ ೧೨ ಸಾವಿರ ಆನೆಗಳನ್ನು ಕೊಂಡುಕೊಂಡನೆಂದು ಪ್ರವಾಸಿ ಅಬ್ದುಲ್ ರಜಾಕ್ ಹೇಳುತ್ತಾನೆ. ಇಡೀ ಏಷಿಯಾ ದೇಶವನ್ನು ಗೆದ್ದ ಅಲೆಕ್ಸಾಂಡರನು ಗಂಗರ ನಾಡಿನ ಮೇಲೆ ಯುದ್ಧಕ್ಕೆ ಹೋಗದೆ ಹಿಂದಿಗಿರಲು ಮುಖ್ಯ ಕಾರಣ ಆ ನಾಡಿನಲ್ಲಿದ್ದ ಗಜ ಸೈನ್ಯ ಎಂದು ಹುಯನ್‌ತ್ಸಾಂಗ್ ತಿಳಿಸುತ್ತಾರೆ. ಪ್ರಾಚೀನ ಅರಸರು ಯುದ್ಧಗಳಲ್ಲಿ ಆನೆಗಳಿಗೆ ಉಕ್ಕಿನ ತಗಡು(ಕವಚ)ಗಳನ್ನು ಹೊದಿಸಿ ಅವುಗಳ ಸೊಂಡಿಲು ಹಾಗೂ ಕೋರೆಗಳಿಗೆ ದೊಡ್ಡ ಕೂಲ್ಗತ್ತಿಗಳನ್ನು ಸಿಕ್ಕಿರಿಸುತ್ತಿದ್ದರು ಎಂದು ಅಥನೇಷಿಯಸ್ ಎಂದು ಪ್ರವಾಸಿ ತಿಳಿಸುತ್ತಾನೆ. ಈ ಎಲ್ಲಾ ಅಂಶಗಳು ಪ್ರಾಚೀನರು ಆನೆಗೆ ನೀಡಿದ ಮಹತ್ವವನ್ನು ಸ್ಪಷ್ಟಪಡಿಸುತ್ತದೆ.

ಯುದ್ಧಪಡೆಯ ಪ್ರಮುಖ ಅಂಗವಾಗಿದ್ದ ಆನೆಯ ಕುರಿತಾಗಿ ಮಾನವರು ಸಹಜವಾಗಿಯೇ ಅವುಗಳ ಸ್ವಭಾವ, ರೀತಿ ನೀತಿ, ಗುಣ, ಲಕ್ಷಣ, ಆರೋಗ್ಯ, ಚಿಕಿತ್ಸೆ ಇತ್ಯಾದಿಗಳನ್ನು ಅರಿತುಕೊಳ್ಳುವುದು ಅನಿವಾರ್ಯವಾಗಿತ್ತು. ಹೀಗಾಗಿ ಆನೆಯ ಆಹಾರ, ದೇಹ ಪ್ರಕೃತಿ, ಪೋಷಣೆ, ಆರೈಕೆಯ ರೀತಿ, ಚಿಕಿತ್ಸಾಕ್ರಮ, ತರಬೇತಿ, ನಿಯಂತ್ರಣಕ್ರಮ ಇತ್ಯಾದಿಗಳನ್ನು ಮಾನವರು ತಿಳಿದುಕೊಳ್ಳಲೇಬೇಕಾಗಿತ್ತು. ಮನುಷ್ಯರು ಈ ಎಲ್ಲವನ್ನೂ ತಮ್ಮ ಅನುಭವದ ಮೂಲಕ ಕರಗತ ಮಾಡಿಕೊಂಡರು. ಹೀಗೆ ಮಾನವರ ಅನುಭವಸಾರವೇ ಗಜಶಾಸ್ತ್ರ ಸಾಹಿತ್ಯವಾಗಿ ರೂಪುಗೊಂಡಿತು. ಮನುಷ್ಯನ ಅವಶ್ಯಕತೆಗೆ, ಮುಖ್ಯವಾಗಿ ಅರಮನೆ, ಆಳರಸರಿಗೆ ಅವಶ್ಯವಾಗಿದ್ದ ಕುದುರೆ, ಆನೆ, ದನಗಳ ಗುಣ ಸ್ವಭಾವವನ್ನು ತಿಳಿಸಲ್ಪಡುವ ಶಾಸ್ತ್ರಗ್ರಂಥಗಳನ್ನು ಆಕರವಾಗಿ ಬಳಸಿಕೊಂಡು ನಿರೂಪಿತವಾದ ಪ್ರಬಂಧ ಇದಾಗಿದೆ.

ಪ್ರಸ್ತುತ ಈ ಅಧ್ಯಯನವು ಕನ್ನಡ ಸಾಹಿತ್ಯದಲ್ಲಿ ನಿರೂಪಿತವಾದ ಗಜಶಾಸ್ತ್ರಕ್ಕೆ ಸಂಬಂಧಿಸಿದಂತೆ ಸಾಹಿತ್ಯಿಕ ಆಕರಗಳಲ್ಲಿ ಪ್ರಧಾನ ಶಾಸ್ತ್ರಕೃತಿಗಳು, ಪ್ರಾಸಂಗಿಕ ಶಾಸ್ತ್ರಕೃತಿಗಳು, ಕನ್ನಡ ಕಾವ್ಯಗಳು, ದಾಖಲು ಆಕರಗಳು ಮತ್ತು ಪುರಾತತ್ವ ಆಕರಗಳನ್ನು ಬಳಸಿಕೊಂಡು ಈ ಹಿನ್ನೆಲೆಯಲ್ಲಿ ಗಜಶಾಸ್ತ್ರದ ವಿವರಗಳನ್ನು ನೋಡುವುದಲ್ಲದೆ ಗಜಗಳ ಕುರಿತು ಬಂದ ವಿವರಗಳನ್ನು ಈ ಅಧ್ಯಯನ ಬಳಸಿಕೊಳ್ಳಲಾಗಿದೆ. ಹಾಗೆಯೇ ಆನೆಯಂತಹ ಪ್ರಾಣಿಯ ಕುರಿತು ಮನುಷ್ಯ ಹೊಂದಿರುವ ನಂಬಿಕೆ, ಆಚರಣೆ, ವಿಧಿನಿಷೇಧಗಳು ಇತ್ಯಾದಿಗಳನ್ನು ಅರಿಯುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಬಹುತೇಕ ಸೃಜನಶೀಲ ಸಾಹಿತ್ಯ ಪ್ರಕಾರಗಳ ಕುರಿತು ಅವಲೋಕನ ಅಧ್ಯಯನಗಳು ನಡೆದಿವೆ. ಹಾಗೆಯೇ ಶಾಸ್ತ್ರಸಾಹಿತ್ಯದ ಅಂಗಗಳಾದ ಭಾಷೆ, ಛಂದಸ್ಸು, ವ್ಯಾಕರಣ, ಮಿಮಾಂಸೆ, ಅಲಂಕಾರ ಮುಂತಾದ ಅನೇಕ ಪ್ರಕಾರದ ಶಾಸ್ತ್ರೀಯ ಕೃತಿಗಳ ಕುರಿತೂ ಅಧ್ಯಯನಗಳು ಹಾಗೂ ಅಧ್ಯಯನ ಲೇಖನಗಳು ಹೊರಬಂದಿವೆ. ಅದೇ ರೀತಿ ಶಾಸ್ತ್ರ ಸಾಹಿತ್ಯದ ಅಂಗಗಳಾದ ಜ್ಯೋತಿಷಶಾಸ್ತ್ರ, ಸೂಪಶಾಸ್ತ್ರ, ಪ್ರಾಚೀನ ವೈದ್ಯಶಾಸ್ತ್ರ, ಪ್ರಾಣಿಗಳ ಗುಣ ಲಕ್ಷಣಗಳನ್ನು ತಿಳಿಸುವ ಪ್ರಾಣಿಶಾಸ್ತ್ರ ಕೃತಿಗಳ ಕುರಿತು ಅಧ್ಯಯನಗಳು ಅಷ್ಟಾಗಿ ನಡೆದಿಲ್ಲವೆಂದೇ ಹೇಳಬಹುದು. ಇತ್ತೀಚೆಗೆ ಕೃಷಿಶಾಸ್ತ್ರ, ಅಶ್ವಶಾಸ್ತ್ರ, ವೈದ್ಯಶಾಸ್ತ್ರಗಳ ಕುರಿತು ಬೆರಳೆಣಿಕೆಯಷ್ಟು ಅಧ್ಯಯನಗಳು ನಡೆದಿರುವುದನ್ನು ಕಾಣುತ್ತೇವೆ. ಆದರೆ ಆನೆಗಳ ಕುರಿತಾಗಿ ತಿಳಿಸುವ ಗಜಶಾಸ್ತ್ರದ ಕೃತಿಗಳ ಅಧ್ಯಯನವು ಕನ್ನಡದಲ್ಲಿ ಇಲ್ಲಿಯವರೆಗೂ ನಡೆದಿಲ್ಲ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಪ್ರಸ್ತಾಪಿಸಲ್ಪಟ್ಟ ಗಜಶಾಸ್ತ್ರ ಕೃತಿಗಳನ್ನು ಕುರಿತಾಗಿ ಇಲ್ಲಿ ಅಧ್ಯಯನ ಮಾಡಲಾಗಿದೆ. ಕನ್ನಡದಲ್ಲಿ ರಚನೆಗೊಂಡಿರುವ ಗಜಶಾಸ್ತ್ರದ ಲಭ್ಯವಿರುವ ಕೃತಿಗಳನ್ನು ಆಧರಿಸಿ ಅಧ್ಯಯನ ಮಾಡಲಾಗಿದೆ. ಆ ಮೂಲಕ ಕನ್ನಡ ಗಜಶಾಸ್ತ್ರ ಕೃತಿಗಳ ಮೌಲ್ಯಗಳನ್ನು ನಿರೂಪಿಸಲಾಗಿದೆ.

ಕನ್ನಡದಲ್ಲಿಯೂ ಗಜಗಳ ಕುರಿತಾಗಿ ವಿವರಗಳನ್ನು ನೀಡುವ ಹಲವಾರು ಕೃತಿಗಳು ಬೆಳಕು ಕಂಡಿವೆ. ಇವುಗಳಲ್ಲಿ ಮುಖ್ಯವಾಗಿ ಶಿವಮಾರನ ಗಜಷ್ಟಕ, ವೀರಭದ್ರರಾಜನು ಬರೆದ ಹಸ್ತಾಯುರ್ವೇದ ಟೀಕೆ, ಸೊದೆ ಸದಾಶಿವರಾಜನು ಬರೆದ ಗಜಶ್ವಾಲಕ್ಷಣ, ಮಳೆಯ ನಂದೀಶ್ವರನು ಬರೆದ ಗಜಲಕ್ಷಣ, ಟಿ.ವಿ. ವೆಂಕಟಾಚಲಶಾಸ್ತ್ರಿ ಅವರ ಗಜಶಾಸ್ತ್ರ ಶಬ್ದಕೋಶ ಇವುಗಳನ್ನು ಪ್ರಧಾನ ಶಾಸ್ತ್ರಕೃತಿಗಳನ್ನಾಗಿ ಅಧ್ಯಯನಕ್ಕೆ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಹಾಗೂ ಪ್ರಾಸಂಗಿಕ ಶಾಸ್ತ್ರಕೃತಿಗಳನ್ನಾಗಿ ಚಾವುಂಡರಾಯನ ಲೋಕೋಪಕಾರ ಕೃತಿ, ಕೆಳದಿ ಬಸವರಾಜನ ಶಿವತತ್ವ ರತ್ನಾಕರ, ೩ನೇ ಸೋಮೇಶ್ವರನ ಮಾನಸೋಲ್ಲಾಸ, ಚಂದ್ರರಾಜನ ಮದನತಿಲಕ, ಮುಮ್ಮಡಿ ಕೃಷ್ಣರಾಜ ಒಡೆಯರ ಸೌಗಂಧಿಕಾ ಪರಿಣಯ, ಮುಂತಾದ ಕೃತಿಗಳನ್ನು ಹೆಸರಿಸಬಹುದು. ಆಧುನಿಕ ಸಂದರ್ಭದಲ್ಲಿ ಆನೆಗಳ ಕುರಿತು ಶಾಸ್ತ್ರೀಯವಾಗಿ ತಿಳಿಸುವ ಲೆಫ್ಟಿನೆಂಟ್ ಕರ್ನಲ್ ವಿಲಿಯಮ್ಸ್‌ರ ಎಲಿಫೆಂಟ್ ಬಿಲ್ಸ್ ಕೃತಿಯ ಕನ್ನಡ ಅನುವಾದ ಕೃತಿಯಾದ ಗಜೇಂದ್ರಲೋಕ ಹಾಗೂ ಕರ್ನಾಟಕದ ಅರಣ್ಯಾಧಿಕಾರಿಗಳಾಗಿದ್ದ ಸಿ.ಎಚ್. ಬಸಪ್ಪನವರ ಅವರ ಗಜಗಾಮಿನಿಗಳನ್ನು ಸಹ ಶಾಸ್ತ್ರೀಯ ಗಜಶಾಸ್ತ್ರ ಕೃತಿಗಳ ಸಾಲಿಗೆ ಸೇರಿಸಬಹುದಾದ ಕೃತಿಗಳಾಗಿವೆ. ಮುಖ್ಯವಾಗಿ ಸಿ.ಎಚ್.ಬಸಪ್ಪನವರ ಗಜಗಾಮಿನಿ ಕೃತಿಯು ಆನೆಗಳ ಸಂತತಿ, ಆನೆಗಳು ನೆಲೆಸುವ ಪರಿಸರ, ಕಾಡಾನೆ ಹಾಗೂ ಸಾಕಿದ ಆನೆಗಳ ಮಧ್ಯದ ವ್ಯತ್ಯಾಸ, ಅರಣ್ಯ ಇಲಾಖೆಯು ನಡೆಸುವ ಆನೆಗಳ

ಗಣತಿಯಿಂದಾಗಿ ದೊರೆತ ಅಂಕಿ ಸಂಖ್ಯೆಗಳು ಹೀಗೆ ಆನೆಗಳಿಗೆ ಸಂಬಂಧಿಸಿದ ಹತ್ತೆಂಟು ಮಾಹಿತಿಗಳನ್ನು ನೀಡುವ ಕೃತಿಯಾಗಿದೆ. ಹೀಗೆ ಆನೆಗಳ ಕುರಿತಾಗಿ ಹಿಂದಿನಿಂದ ಇಂದಿನವರೆಗೆ ಬಂದ ಗಜಶಾಸ್ತ್ರದ ಎಲ್ಲಾ ಪ್ರಮುಖ ಕೃತಿಗಳನ್ನು ಈ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಹಾಗೆಯೇ ಕನ್ನಡದ ಹಳೆಯ ಹಾಗೂ ನಡುಗನ್ನಡದ ಕಾವ್ಯಗಳಲ್ಲಿ ಆನೆಗಳ ಉಲ್ಲೇಖವಿಲ್ಲದ ಕೃತಿಗಳೇ ಇಲ್ಲವೆನ್ನಬಹುದು. ಕಾವ್ಯದ ಯಾವುದೋ ಒಂದು ಭಾಗದಲ್ಲಿ ಸಾಂದರ್ಭಿಕವಾಗಿ ಆನೆ ಉಲ್ಲೇಖಗೊಂಡಿರುತ್ತದೆ. ಕನ್ನಡದಲ್ಲಿ ಆನೆಗಳ ವಿಷಯವನ್ನು ಪ್ರಮುಖವಾಗಿ ಹೊಂದಿದ ಕೃತಿಗಳೊಂದಿಗೆ ಸಾಂದರ್ಭಿಕವಾಗಿ ಆನೆಗಳ ವಿವರಗಳನ್ನು ತಿಳಿಸುವ ಕೆಲವು ಪ್ರಮುಖ ಕವಿಗಳ ಕೃತಿಗಳನ್ನು ಅಧ್ಯಯನಕ್ಕೆ ಆಕರಗಳಾಗಿ ಬಳಸಿಕೊಳ್ಳಲಾಗಿದೆ.

ಗಜಶಾಸ್ತ್ರದ ಕುರಿತೇ ಪೂರ್ಣವಾಗಿ ವಿವರಗಳನ್ನು ನೀಡುವ ಗಜಪ್ರಧಾನ ಕೃತಿಗಳು ಕನ್ನಡದಲ್ಲಿ ಅದರಲ್ಲೂ ಹಳೆಯ ಶಾಸ್ತ್ರೀಯ ಗ್ರಂಥಗಳು ದೊರೆಯದಿದ್ದರು, ಲಭ್ಯವಿರುವ ಸಂಪಾದಿತ ಕೃತಿಗಳಾದ ಶಿವಮಾರನ ಗಜಷ್ಟಕ, ವೀರಭದ್ರರಾಜನು ಬರೆದ ಹಸ್ತಾಯುರ್ವೇದ ಟೀಕೆ, ಸೊದೆ ಸದಾಶಿವರಾಜನು ಬರೆದ ಗಜಶ್ವಾಲಕ್ಷಣ, ಮಳೆಯ ನಂದೀಶ್ವರನು ಬರೆದ ಗಜಲಕ್ಷಣ, ಟಿ.ವಿ. ವೆಂಕಟಾಚಲಶಾಸ್ತ್ರಿ ಅವರ ಗಜಶಾಸ್ತ್ರಶಬ್ದಕೋಶ ಇವುಗಳನ್ನು ಪ್ರಧಾನ ಶಾಸ್ತ್ರಕೃತಿಗಳನ್ನಾಗಿ ಅಧ್ಯಯನಕ್ಕೆ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಹಾಗೂ ಪ್ರಾಸಂಗಿಕ ಶಾಸ್ತ್ರಕೃತಿಗಳನ್ನಾಗಿ ಚಾವುಂಡರಾಯನ ಲೋಕೋಪಕಾರ, ಸೋಮೇಶ್ವರನ ಮಾನಸೋಲ್ಲಾಸ, ಕೆಳದಿ ಬಸವರಾಜನ ಶಿವತತ್ವರತ್ನಾಕರ, ಚಂದ್ರರಾಜನ ಮದನತಿಲಕ, ಮುಮ್ಮಡಿ ಕೃಷ್ಣರಾಜ ಒಡೆಯರ ಸೌಗಂಧಿಕಾ ಪರಿಣಯ ಮುಂತಾದ ಕೃತಿಗಳು ಕೇವಲ ಆನೆಗಳ ವಿವರಗಳನ್ನು ಮಾತ್ರವಲ್ಲದೆ ಇತರ ಶಾಸ್ತ್ರೀಯ ಇಲ್ಲವೇ ಇತರ ಕಥೆಗಳನ್ನು ತಿಳಿಸುವುದರೊಂದಿಗೆ ಗಜಗಳ ಗುಣ ಸ್ವಭಾವ, ವೈದ್ಯ ಇತ್ಯಾದಿ ವಿವರಗಳನ್ನು ತಿಳಿಸುತ್ತವೆ. ಉದಾಹರಣೆಗೆ ಚಾವುಂಡರಾಯನ ಲೋಕೋಪಕಾರವನ್ನೇ ನೋಡಬಹುದು. ಇದರಲ್ಲಿ ಗಜಶಾಸ್ತ್ರದ ಹೊರತಾಗಿ ಸೂಪಶಾಸ್ತ್ರ, ವಿಷ ವೈದ್ಯ, ಅಶ್ವಶಾಸ್ತ್ರ ಮುಂತಾದ ವಿವರಗಳನ್ನೂ ಒಳಗೊಂಡ ವಿಶ್ವಕೋಶ ಮಾದರಿಯ ಕೃತಿಯಾಗಿದೆ. ಹಾಗೆಯೇ ಸೌಗಂಧಿಕಾ ಪರಿಣಯವು ದೇವೇಂದ್ರ ಹಾಗೂ ದಾನವರ ನಡುವೆ ನಡೆಯುವ ಯುದ್ಧ, ಸೌಗಂಧಿಕ ರಾಜ ಹಾಗೂ ಸೌಗಂಧಿಕ ರಾಣಿಯ ಮಧ್ಯದಲ್ಲಿ ನಡೆಯುವ ಪರಿಣಯ ಮುಂತಾದ ವಿವರಗಳನ್ನು ನೀಡುತ್ತದೆ. ಆದರೆ ದೇವೇಂದ್ರನ ವಾಹನವಾದ ಐರಾವತದ ಗುಣ ಲಕ್ಷಣಗಳನ್ನು ವಿವರಿಸುವುದರೊಂದಿಗೆ ಶುಭ ಆನೆಗಳು ಹಾಗೂ ಅಶುಭ ಆನೆಗಳ ಮಧ್ಯದ ವ್ಯತ್ಯಾಸ, ಗುಣ ಸ್ವಭಾವಗಳನ್ನು ಸಾಂದರ್ಭಿಕವಾಗಿ ವಿವರಿಸುತ್ತದೆ. ಇವೇ ಮಾದರಿಯ ಕೃತಿಗಳೇ ಹೆಚ್ಚಾಗಿ ಪ್ರಾಚೀನ

ಕನ್ನಡದಲ್ಲಿ ಆನೆಯ ವಿವರಗಳನ್ನು ನೀಡುವ ಕೃತಿಗಳು ದೊರೆಯುತ್ತವೆ. ಅದೇ ರೀತಿಯಾಗಿ ಆನೆಗಳ ಕುರಿತು ಮಾಹಿತಿ ಒದಗಿಸುವ ಹೊಸಗನ್ನಡದ ಗದ್ಯ ಕೃತಿಗಳು, ಗಜಶಾಸ್ತ್ರಕ್ಕೆ ಸಂಬಂಧಿಸಿದ ವಿವರಗಳನ್ನು ಒಳಗೊಂಡ ಶಾಸನಗಳು, ನಾಣ್ಯಗಳು ಹಾಗೂ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಹಾಗೂ ಜನಪದ ಕೃತಿಗಳಲ್ಲಿ ಪ್ರಾಸಂಗಿಕವಾಗಿ ಪ್ರಸ್ತಾಪಿಸಲಾದ ಆನೆಯ ವಿವರಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇವುಗಳೊಂದಿಗೆ ಆನೆಯ ಕುರಿತಾಗಿರುವ ನಂಬಿಕೆ, ಆರಾಧನೆ, ಆಚರಣೆ, ವಿಧಿನಿಷೇಧಗಳನ್ನು ಕೂಡ ಅವಶ್ಯವಿದ್ದಲ್ಲಿ ಬಳಸಿಕೊಂಡು ವಿಸ್ತಾರವಾದ ಸ್ವರೂಪವನ್ನು ಅಧ್ಯಯನಕ್ಕೆ ನೀಡಲಾಗಿದೆ. ಒಟ್ಟಾರೆಯಾಗಿ ಆನೆಯ ಕುರಿತಾಗಿ ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ದೊರೆತ ಮಾಹಿತಿಯನ್ನು ಕ್ರೋಡೀಕರಿಸಿ ಅಧ್ಯಯನವು ಪರಿಪೂರ್ಣವಾಗುವಂತೆ ಮಾಡುವ ಆಶಯ ಈ ಅಧ್ಯಯನದ ಫಲಶ್ರುತಿ ಎನ್ನಬಹುದು.

ಪ್ರಸ್ತುತ ಮಹಾಪ್ರಬಂಧವನ್ನು ಒಂದು ಗಂಭೀರವಾದ ಅಧ್ಯಯನಕ್ಕೆ ತೊಡಗಿಸುವ ಉದ್ದೇಶದಿಂದ ಆರು ಅಧ್ಯಾಯಗಳಲ್ಲಿ ಪರಿವಿಡಿಯನ್ನು ರೂಪಿಸಿಕೊಳ್ಳಲಾಗಿದೆ. ಇದನ್ನೇ ಅಧ್ಯಯನದ ಸ್ವರೂಪ ಎನ್ನಬಹುದು. ಎರಡನೆಯ ಅಧ್ಯಾಯದಲ್ಲಿ ಲೌಖಿಕ ಶಾಸ್ತ್ರಸಾಹಿತ್ಯದ ಅರ್ಥ, ಸ್ವರೂಪ ಹಾಗೂ ಪರಂಪರೆಯನ್ನು ಕುರಿತು ಚರ್ಚಿಸಲಾಗಿದೆ. ಇದರಿಂದ ಶಾಸ್ತ್ರಸಾಹಿತ್ಯ ಯಾವುದು, ಕಚ್ಚಾಸಾಹಿತ್ಯ ಯಾವುದು ಎಂಬ ನಿಖರತೆಯನ್ನು ಸಂಶೋಧನಾ ಆಸಕ್ತರಿಗೆ ಮಾಡಿಕೊಟ್ಟಂತಾಗಿದೆ.

ಅಧ್ಯಾಯ ಮೂರು ಕನ್ನಡ ಲೌಕಿಕಶಾಸ್ತ್ರ ಸಾಹಿತ್ಯ ಸಮೀಕ್ಷೆಯಾಗಿದೆ. ಈ ಅಧ್ಯಯನದಲ್ಲಿ ಒಟ್ಟು ಲೌಕಿಕಶಾಸ್ತ್ರ ಸಾಹಿತ್ಯದ ವೈವಿಧ್ಯತೆಯನ್ನು ನಿರೂಪಿಸುವ ಪ್ರಯತ್ನ ಮಾಡಲಾಗಿದೆ. ನಿದರ್ಶನಕ್ಕೆ ಜ್ಯೋತಿಷಶಾಸ್ತ್ರ, ಪಶುವೈದ್ಯಶಾಸ್ತ್ರ, ಬಾಲವೈದ್ಯಶಾಸ್ತ್ರ, ಗೋವೈದ್ಯ ಶಾಸ್ತ್ರ, ಮುಂತಾದ ಭೈಷಜಶಾಸ್ತ್ರ ಕೃತಿಗಳನ್ನು ಸೂಪಶಾಸ್ತ್ರ, ಖಡ್ಗಶಾಸ್ತ್ರ, ಕೃಷಿಶಾಸ್ತ್ರ, ಗಣಿತಶಾಸ್ತ್ರ, ಜಲಶಾಸ್ತ್ರ, ಪ್ರಶ್ನಾಶಾಸ್ತ್ರ, ನೀತಿಶಾಸ್ತ್ರ, ವಾಸ್ತುಶಾಸ್ತ್ರ ಹೀಗೆ ಹಲವು ೧೮ ಶಾಸ್ತ್ರ ಕೃತಿಗಳನ್ನು, ಈಗಾಗಲೇ ವಿದ್ವಾಂಸರ ಅಧ್ಯಯನಗಳು, ಲೇಖನಗಳು, ಸಂಪಾದಿತ ಕೃತಿಗಳ ಮೂಲಕ ಕನ್ನಡ ಲೌಕಿಕಶಾಸ್ತ್ರ ಸಾಹಿತ್ಯದ ವ್ಯಾಪ್ತಿಯನ್ನು ಅಧ್ಯಯನಕ್ಕೆ ಪೂರಕವಾಗಿ ನಿರೂಪಿಸಲಾಗಿದೆ.

ಗಜಶಾಸ್ತ್ರ ಸಾಹಿತ್ಯದ ಆಕರಗಳನ್ನು ಮಹಾಪ್ರಬಂಧದ ನೇರ ಹಾಗೂ ಮೂಲ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಏಕೆಂದರೆ ನಾವು ಪ್ರತಿಪಾದನೆ ಮಾಡ ಹೊರಟ ವಿಷಯಕ್ಕೆ ಸಂಬಂಧಿಸಿದ ಆಕರಗಳು ಪ್ರಮುಖವಾಗುತ್ತದೆ. ಹಾಗೆ ನೋಡಿದರೆ ಸಂಶೋಧನೆ ಎನ್ನುವುದು ಆಕರಗಳ ಶೋಧವೇ ಆಗುತ್ತದೆ. ಈ ಹಿನ್ನೆಲೆಯಲ್ಲಿ ಆನೆಗಳನ್ನು ಕುರಿತು ಅಧ್ಯಯನ ಮಾಡುವವರಿಗೆ ಲಭ್ಯವಾಗುವ ಆಕರಗಳಾವುವು ಎಂಬುದು ಮುಖ್ಯವಾಗುತ್ತದೆ.

ಪ್ರಧಾನ ಆಕರ, ಪೂರಕ ಆಕರ ಮತ್ತು ಪ್ರಾಸಂಗಿಕ ಆಕರ ಎಂದು ಮುಂತಾಗಿ ವರ್ಗೀಕರಿಸುತ್ತಾ ಅಧ್ಯಯನಕ್ಕೆ ಬೇಕಾದ ಸಾಮಗ್ರಿಗಳನ್ನು ವ್ಯವಸ್ಥಿತವಾಗಿ ವಿಶ್ಲೇಷಿಸುವುದು ಸಂಶೋಧನೆಯ ದೃಷ್ಟಿಯಿಂದ ಮಹತ್ವದ ಕೆಲಸವಾಗಿದೆ. ಹೀಗಾಗಿ ಈ ಅಧ್ಯಯದಲ್ಲಿ ಗಜಶಾಸ್ತ್ರ ಸಾಹಿತ್ಯದ ಆಕರಗಳನ್ನು ಮೂರು ರೀತಿಯಿಂದ ಕಲೆ ಹಾಕಲಾಗಿದೆ. ಸಾಹಿತ್ಯ ಆಕರಗಳು: ಅದರಲ್ಲಿ ಶಾಸ್ತ್ರ ಕೃತಿಗಳು, ಅಂದರೆ ಪ್ರಧಾನ ಕೃತಿಗಳು. ಎರಡನೆಯದಾಗಿ ಪ್ರಾಸಂಗಿಕ ಕೃತಿಗಳು, ಅಂದರೆ ಕಾವ್ಯೋಕ್ತ ಪದ್ಯಗಳನ್ನೊಳಗೊಂಡಂತೆ ಒಟ್ಟು ಸಾಹಿತ್ಯ ಆಕರಗಳನ್ನು ಈ ಅಧ್ಯಯದಲ್ಲಿ ಚರ್ಚಿಸಲಾಗಿದೆ. ಇನ್ನು ದಾಖಲಾತ್ಮಕ ಆಕರಗಳಲ್ಲಿ ಶಾಸನಗಳು, ಆಳರಸರ ದಿನಚರಿಗಳಲ್ಲಿ ಆನೆಗಳನ್ನು ಕುರಿತು ಅವುಗಳ ಸಂರಕ್ಷಣೆಗಾಗಿ ನಿಂತ ಮಾವುತಕ ಉಲ್ಲೇಖಗಳು ಕಂಡುಬರುತ್ತವೆ. ಅದೇ ರೀತಿ ನಾಣ್ಯಗಳಂಥ ಭಿತ್ತಿ ಚಿತ್ರಗಳಂಥ ಪುರಾತತ್ವ ಆಕರಗಳ ಮೂಲಕ ಗಜಶಾಸ್ತ್ರ ಸಾಹಿತ್ಯದ ಪಾಲು ಮತ್ತು ಪಾತ್ರವನ್ನು ಈ ಅಧ್ಯಯದಲ್ಲಿ ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯ ಆನೆಗಳ ವೈಶಿಷ್ಟ್ಯವನ್ನು ಕುರಿತು ಚರ್ಚಿಸಲಾಗಿದೆ. ಇಲ್ಲಿ ಆನೆಗಳ ಹುಟ್ಟು–ಬೆಳವಣಿಗೆ, ಗಜಲಕ್ಷಣ, ಶುಭ ಅಶುಭ ಆನೆಗಳು, ಗಜಜಾತಿ ಗುಣಪ್ರಭೇದ ಹಾಗೂ ಅವುಗಳ ರೋಗ ರುಜಿನ ಮತ್ತು ಆರೈಕೆಯನ್ನು ಕುರಿತು ಶಾಸ್ತ್ರಕೃತಿಗಳಲ್ಲಿ ಉಲ್ಲೇಖವಾದ ಸಂಗತಿಗಳನ್ನು ನಿರೂಪಿಸುವುದಾಗಿದೆ. ಆನೆಗಳಲ್ಲಿ ಮಂದ, ಭದ್ರ, ಮೃಗ ಮುಂತಾದ ಬಗೆಗಳನ್ನು ಹೇಳುವ ಶಾಸ್ತ್ರಕಾರರು ಇವುಗಳ ಗುಣಾವಗುಣಗಳನ್ನು ಉಪಯೋಗವನ್ನು ವಿವರಿಸಿದ್ದಾರೆ. ಹಾಗೆಯೇ ಗಜವೈದ್ಯ ಮತ್ತು ಮಾವುತರ ಪಾತ್ರವನ್ನು ಕುರಿತಾಗಿ ಕಾವ್ಯೋಕ್ತ ಆಧಾರಗಳಿಂದ ವಿಶ್ಲೇಷಿಸಲಾಗಿದೆ.

ಕರ್ನಾಟಕದಲ್ಲಿ ಗಜಸಂಸ್ಕೃತಿ ಎಂಬ ಐದನೇ ಅಧ್ಯಾಯದಲ್ಲಿ ಆನೆಗಳನ್ನು ಕುರಿತು ಪ್ರಚಲಿತವಿದ್ದ ನಂಬಿಕೆ, ಆಚರಣೆಗಳನ್ನು ನಿರೂಪಿಸಲಾಗಿದೆ. ಪಟ್ಟದಾನೆಯಾಗಿ ಗಜಲಕ್ಷ್ಮಿಯಾಗಿ ಮತ್ತು ಯುದ್ಧ ಸಂದರ್ಭದಲ್ಲಿ ಅವುಗಳಿಗೆ ಸಲ್ಲಿಸುವ ಪೂಜೆ–ಪುನಸ್ಕಾರ ಕುರಿತು ಅಧ್ಯಯನ ಮಾಡಲಾಗಿದ್ದು, ಬದಲಾವಣೆಗಳಿರುವುದು ಅಧ್ಯಯನದ ಮೂಲಕ ತಿಳಿದುಬರುತ್ತದೆ. ಆನೆಗಳ ಪೋಷಣೆ, ರಕ್ಷಣೆ, ಆರೈಕೆಗಳ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಹಾಗೆಯೇ ಆನೆಗಳ ಶುಭ ಅಶುಭಗಳನ್ನು ತಿಳಿಸುವ ದೈಹಿಕ ಲಕ್ಷಣಗಳು, ಅವುಗಳ ಆಕಾರ, ಬಣ್ಣ, ಸುಳಿ ಇತ್ಯಾದಿಗಳ ವಿವರಗಳನ್ನು ಅವಲೋಕಿಸಲಾಗಿದೆ. ಅಲ್ಲದೇ ಆನೆಗಳನ್ನು ಕಾಡಿನಲ್ಲಿ ಹಿಡಿಯುವ ಕ್ರಮ, ಸೆರೆ ಹಿಡಿದ ಕಾಡಾನೆಗಳನ್ನು ಪಳಗಿಸುವುದು, ತರಬೇತಿ, ಆನೆಗಳಿಗೆ ಧ್ವನಿ ಸಂಜ್ಞೆಗಳ ಮೂಲಕ ನಿರ್ದೇಶನ ನೀಡುವ ಕ್ರಮ, ದೈಹಿಕವಾಗಿ ಸ್ಪರ್ಶದ ಮೂಲಕ ನಿರ್ದೇಶನ ಮಾಡುವ ಕ್ರಮಗಳ ಕುರಿತು ಶಾಸ್ತ್ರೀಯ ಕೃತಿಗಳನ್ನು ಹಿನ್ನೆಯಾಗಿರಿಸಿಕೊಂಡು ಗಮನಿಸಲಾಗಿದೆ.

ಆನೆಗಳಿಗೆ ಸಂಬಂಧಿಸಿದಂತೆ ನಡೆಯುವ ನೀರಾಜನ ಆಚರಣೆ, ದಸರಾ ಆಚರಣೆ, ಗಣಪತಿಯ ಆರಾಧನೆ, ಹಿನ್ನೆಲೆ ಹಾಗೂ ಆನೆಗಳ ಕುರಿತಾಗಿರುವ ಇತರ ಆಚರಣೆಗಳನ್ನು ನೋಡುವುದರೊಂದಿಗೆ ಆನೆಗಳ ಕುರಿತಾದ ವಿಧಿನಿಷೇಧಗಳ ಪ್ರಸ್ತಾಪವನ್ನೂ ಈ ಅಧ್ಯಾಯದಲ್ಲಿ ಮಾಡುವ ಮೂಲಕ ಈ ಅಧ್ಯಯನಕ್ಕೆ ಸಾಂಸ್ಕೃತಿಕ ಸ್ಪರ್ಶವನ್ನು ನೀಡಲಾಗಿದೆ.

## ಅಧ್ಯಯನದ ಫಲಿತಗಳು

೧. ಶಾಸ್ತ್ರ ಗ್ರಂಥಗಳು ಚರ್ಚಿಸಿದ ಹಿನ್ನೆಲೆಯಲ್ಲಿ ಆನೆಯ ಕುರಿತಾದ ನಿರೂಪಿಸುವುದು.

೨. ಗಜಶಾಸ್ತ್ರದಂಥ ಉಪೇಕ್ಷಿತವಾದ ಸಾಹಿತ್ಯದ ಅಂಗವೊಂದನ್ನು ಮುಖ್ಯ ಲೌಕಿಕ ಶಾಸ್ತ್ರ ಸಾಹಿತ್ಯದ ಭೂಮಿಕೆಯಲ್ಲಿ ಚರ್ಚಿಸುವ ಪ್ರಯತ್ನವನ್ನು ಈ ಅಧ್ಯಯನವು ಪೂರೈಸಿದೆ.

೩. ಆನೆಗೆ ಬರುವ ರೋಗಗಳು ಹಾಗೂ ವೈದ್ಯೋಪಚಾರದ ಕುರಿತು ಮಹತ್ವದ ಮಾಹಿತಿಯನ್ನು ಇತರ ಕೃತಿಗಳಿಗಿಂತ ೧ನೇ ಸೋಮೇಶ್ವರನ ಮಾನಸೋಲ್ಲಾಸ ಕೃತಿಯು ನಿಖರವಾಗಿ ಮತ್ತು ವ್ಯಾಪಕವಾಗಿ ತಿಳಿಸಿರುವುದನ್ನು ಗಮನಿಸಬಹುದು.

೪. ಪ್ರಸಿದ್ಧ ಗಜಶಾಸ್ತ್ರ ಕೃತಿ ರಚನಾಕಾರ ಪಾಲಕ್ಯ ಮುನಿಯು ಪ್ರಸ್ತಾಪಿಸಿದ ವಿಚಾರಗಳನ್ನೇ ಕನ್ನಡದ ಬಹುತೇಕ ಗಜಶಾಸ್ತ್ರ ಕೃತಿಗಳು ಅನುಸರಿಸಿರುವುದು ಪ್ರಸ್ತುತ ಅಧ್ಯಯನದಿಂದ ತಿಳಿದುಬರುತ್ತದೆ.

೫. ಗಜಶಾಸ್ತ್ರ ವಿವರಗಳನ್ನು ಲೋಕೋಪಕಾರ, ಸೌಗಂಧಿಕಾ ಪರಿಣಯ, ಶಿವತತ್ವ ರತ್ನಾಕರ ಮುಂತಾದ ಕೃತಿಗಳ ಅವಲೋಕನದ ಮೂಲಕ ಪ್ರಾಚೀನ ಕರ್ನಾಟಕದಲ್ಲಿ ಆನೆಗಳ ಬಳಕೆಯ ಉಪಕ್ರಮವನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

೬. ಶಾಸ್ತ್ರಕೃತಿಗಳನ್ನು ಹೊರತುಪಡಿಸಿದರೆ, ಕಾವ್ಯ ಕೃತಿಗಳಲ್ಲಿ ವರ್ಣಿತವಾದ ಯುದ್ಧ ವರ್ಣನೆಯಲ್ಲಿ ಆನೆಗಳಿಗೆ ಇರುವ ಪ್ರಾಮುಖ್ಯತೆಯನ್ನು ಅರಿಯಲು ಈ ಅಧ್ಯಯನದಿಂದ ಸಾಧ್ಯವಾಗಿದೆ.

೭. ಶಾಸ್ತ್ರಕೃತಿಗಳು ಮತ್ತು ಪ್ರಾಸಂಗಿಕ ಶಾಸ್ತ್ರಕೃತಿಗಳಲ್ಲಿ ಉಲ್ಲೇಖಿತವಾದ ಆನೆಗಳ ಜಾತಿಗಳಾದ ಮಂದ್ರ, ಭದ್ರ, ಮೃಗ ಎಂಬ ಮೂರು ಜಾತಿಗಳ ಗಜಗಳನ್ನು ಕಾಣಬಹುದಾಗಿದೆ. ಗಜಗಳ ಪ್ರಭೇದಗಳು, ಗಜಗಳ ಶುಭ-ಅಶುಭ ವಿಂಗಡಣೆ ಹೀಗೆ ಆನೆಗಳಲ್ಲಿರುವ ವೈಶಿಷ್ಟ್ಯತೆ ಮತ್ತು ಪ್ರಾಮುಖ್ಯತೆಯನ್ನು ಅರಿಯಲು ಈ ಅಧ್ಯಯನದಿಂದ ಸಾಧ್ಯವಾಗಿದೆ.

೮. ಚಾವುಂಡರಾಯನು ಕೊಡುವ ರೋಗಗಳ ಪಟ್ಟಿಗೂ ಆಧುನಿಕ ಗಜಶಾಸ್ತ್ರದ ಗಜಗಾಮಿನಿ ಕೃತಿಯಲ್ಲಿ ಪ್ರಸ್ತಾಪವಾದ ರೋಗಗಳ ಪಟ್ಟಿಗೂ ಹೆಚ್ಚಿನ ಹೋಲಿಕೆ ಇದೆ ಎಂಬುದು ಸ್ಪಷ್ಟವಾಗುತ್ತದೆ.

೯. ಆದರೆ ಸೋಮೇಶ್ವರನ ಮಾನಸೋಲ್ಲಾಸದಲ್ಲಿ ಮೂವತ್ತೈದರಷ್ಟು ಮೂಲಿಕೆಗಳನ್ನು ಹೆಸರಿಸಿದ್ದರೂ ಯಾವ ರೋಗಕ್ಕೆ ಎಷ್ಟು ಪ್ರಮಾಣದಲ್ಲಿ ಔಷಧವನ್ನು ನೀಡಬೇಕೆಂಬ ವಿಚಾರವನ್ನು ಪ್ರಸ್ತಾಪಿಸದೇ ಇರುವುದು ಕಂಡುಬರುತ್ತದೆ.

೧೦. ಮನುಷ್ಯನಿಂದ ಹಿಡಿದು ಬಹುತೇಕ ಪ್ರಾಣಿ ವರ್ಗದ ರೋಗಗಳಿಗೂ ವಾತ, ಪಿತ್ತ, ಕಫಗಳೇ ಕಾರಣ ಎಂದು ಹಳೆಯ ವೈದ್ಯಪದ್ಧತಿಯು ತಿಳಿಸುತ್ತದೆ. ಆನೆಗಳ ರೋಗಗಳಿಗೂ ವಾತ, ಪಿತ್ತ, ಕಫಗಳೇ ಕಾರಣವೆಂದು ಗಜಶಾಸ್ತ್ರ ವಿವರಿಸುತ್ತದೆ.

೧೧. ಆನೆಗಳನ್ನು ಪಳಗಿಸುವುದರಲ್ಲಿ ಮಾವುತರ ಪಾತ್ರ, ಆನೆಗಳ ಭಾಷಾ ತರಬೇತಿ, ಸಂಜ್ಞಾ ತರಬೇತಿ, ರೋಗಗಳ ಗುರುತಿಸುವಿಕೆ ಮತ್ತು ವೈದ್ಯೋಪಚಾರ, ಆಹಾರ ಕ್ರಮ, ಆನೆಗಳೊಂದಿಗೆ ಮಾವುತರ ಸ್ನೇಹಸಂಬಂಧಗಳನ್ನು ಈ ಅಧ್ಯಯನದಿಂದ ಗುರುತಿಸಲು ಸಾಧ್ಯವಾಗಿದೆ.

ಒಟ್ಟಿನಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರಚನೆಯಾದ ಗಜಶಾಸ್ತ್ರಕ್ಕೆ ಸಂಬಂಧಿಸಿದ ಪ್ರಧಾನ ಶಾಸ್ತ್ರಕೃತಿಗಳು ಹಾಗೂ ಪ್ರಾಸಂಗಿಕ ಶಾಸ್ತ್ರಕೃತಿಗಳು, ಕನ್ನಡ ಕಾವ್ಯಗಳಲ್ಲದೆ, ದಾಖಲು ಆಕರಗಳು ಮತ್ತು ಪುರಾತತ್ವ ಅವಶೇಷಗಳ ಆಕರಗಳನ್ನು ಬಳಸಿಕೊಂಡು ಕನ್ನಡ ಸಾಹಿತ್ಯದಲ್ಲಿ ಗಜಶಾಸ್ತ್ರ ಸಾಹಿತ್ಯ ಎಂಬ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

# ಅನುಬಂಧಗಳು

೧. ಶಬ್ದಾರ್ಥಕೋಶ

೨. ಕಾವ್ಯೋಕ್ತ ಆನೆಗಳ ಛಾಯಾಚಿತ್ರಗಳು

೩. ಪರಾಮರ್ಶನ ಗ್ರಂಥಗಳು

## ಅನುಬಂಧಗಳು

## ೧. ಶಬ್ದಾರ್ಥಕೋಶ

### ಗಜಶಾಸ್ತ್ರಕ್ಕೆ ಸಂಬಂಧಿಸಿದ ಕೆಲವು ಪದಗಳ ಅರ್ಥಸೂಚಿ

**ಅಂಕುಶ:** ಆನೆಯನ್ನು ಅಂಕೆಯಲ್ಲಿಟ್ಟುಕೊಳ್ಳಲು ಕಬ್ಬಿಣದ ಕೊಕ್ಕೆಯನ್ನು ಅಳವಡಿಸಿದ ಬೆತ್ತದ ಕೋಲು, ಇದನ್ನು ಆಡುಭಾಷೆಯಲ್ಲಿ **ಅಂಕುಸ** ಎಂದು ಸಹ ಕರೆಯಲಾಗುತ್ತದೆ.

**ಅಂಗುಲಿ:** ಆನೆಯ ಸೊಂಡಿಲಿನ ಮುಂಭಾಗದಲ್ಲಿರುವ ಬೆರಳಿನಾಕಾರದ ತುದಿ

**ಅಂತರ್ಮಣಿ:** ಆನೆಯ ಎದೆಯ ಮೇಲು ಭಾಗ ಹಾಗೂ ಗಂಟಲಿನಿಂದ ಕೆಳಗಡೆಯ ಮಧ್ಯದ ಭಾಗವನ್ನು ಅಂತರ್ಮಣಿ ಎಂದು ಕರೆಯಲಾಗುತ್ತದೆ.

**ಅಂದುಕ:** ಆನೆಯ ಕಾಲನ್ನು ಕಟ್ಟಲು ಬಳಸುವ ಲೋಹದ ಸರಪಳಿ. ಇದನ್ನು **ಅಂದುಗೆ**ಯಂದೂ ಕರೆಯಲಾಗುತ್ತದೆ.

**ಅಂಬಾರಿ:** ಆನೆಯ ಬೆನ್ನ ಮೇಲೆ ಮಹಾರಾಜರು ಕುಳಿತುಕೊಳ್ಳಲು ಅಳವಡಿಸಿದ ಚಿನ್ನದ ಸಿಂಹಾಸನ ಮಾದರಿಯ ಆಸನ.

**ಅಂಸ:** ಆನೆಯ ಹೆಗಲು.

**ಅಕ್ಷಿ ರೋಗ:** ಆನೆಗೆ ಬರುವ ಕಣ್ಣಿನ ರೋಗ(**ಆನೆಗೆ ಇಪ್ಪತ್ತು ಬಗೆಯ ಕಣ್ಣಿನ ರೋಗಗಳು ಬರುತ್ತವೆಂದು ಪಾಲಕ್ಯ ಮುನಿಯ ಗಜಶಾಸ್ತ್ರದಲ್ಲಿ ತಿಳಿಸಲಾಗಿದೆ; ಪ್ರಾವಾರಕಿ, ಔದಕಿ, ಅಂಡಾಕ್ಷ, ಕಾಚಾಕ್ಷ, ನಾಯಂಪ್ರೇಕ್ಷಿ, ನಿಷ್ಪೇಪಹತ, ವಿದ್ಯುದ್ವಾರಿಹತ, ಊಷ್ಮಾಪರಿಗತ, ವರ್ತ್ಮಕ್ಲಿಷ್ಟ, ಸ್ರೋತೋಧ, ಬುದ್ಬುದ, ಅಕ್ಷಿಪಾಕ, ಪಟಲಾಕ್ಷ, ದಂಡಾಕ್ಷ, ಮುಂಜ, ಮುಂಜಜಾಲ, ಲೋಹಿತಾಕ್ಷ, ಪಿಟಕಾಕ್ಷ.**) ಪ್ರಸ್ತುತ ಅಕ್ಷಿರೋಗ, ಮುಂಜ ಎಂಬ ಎರಡು ಪದಗಳನ್ನು ಮಾತ್ರ ಆನೆ ಸಾಕಿದವರು ಬಳಕೆಯಲ್ಲಿರಿಸಿಕೊಂಡಿದ್ದಾರೆ.

**ಅನೀಕಸ್ಥ:** ಆನೆಯನ್ನು ಪಳಗಿಸುವವನು. ಇವನಿಗೆ ಅನೀಕನೆಂದೂ ಕರೆಯಲಾಗುತ್ತದೆ.

**ಅನುಗತ ಗ್ರಹ:** ಆನೆಯನ್ನು ಬೆನ್ನಟ್ಟಿ ಹಿಡಿಯುವ ಕ್ರಮ. ಆನೆ ಹೋಗುವ ಜಾಡನ್ನು ಗುರುತಿಸಿ ಕಾಡಿನ ಜನರನ್ನು ಬಳಸಿ ಅವರು ಕಹಳೆ, ಹಲಗೆಗಳನ್ನು ಬಾರಿಸಿ ಆನೆಗಳು ಒಂದು ಕಡೆ ಸೇರುವಂತೆ ಮಾಡಿ ತರುವಾಯ ಅವುಗಳನ್ನು ಒಂದು ನಿರ್ದಿಷ್ಟವಾದ ಸ್ಥಳದಲ್ಲಿ ಕೂಡಿಹಾಕುವ ಕ್ರಮ

**ಅನುಗತ ಬಂಧ:** ಹೆಣ್ಣಾನೆಯ ಮೋಹಕ್ಕೆ ಸಿಲುಕಿ ಹೆಣ್ಣಾನೆಯೊಂದಿಗೆ ಅನುಸರಿಸಿ ಹೋಗುವ ಗಂಡಾನೆಯನ್ನು ಬಂಧಿಸುವ ಕ್ರಮಕ್ಕೆ ಅನುಗತ ಬಂಧ ಎನ್ನಲಾಗುತ್ತದೆ.

**ಅರತ್ನಿ:** ಆನೆಯ ಎತ್ತರವನ್ನು ಅಳೆಯಲು ಬಳಸುವ ಒಂದು ಅಳತೆ(ಇಪ್ಪತ್ತ ನಾಲ್ಕು ಅಂಗುಲವನ್ನು ಮಾವುತರು **ಅರತ್ನಿ** ಎಂದು ಕರೆಯುತ್ತಾರೆ).

**ಅರ್ಗಲಾ:** ಆನೆಯನ್ನು ನಿಯಂತ್ರಿಸಲು ಬಳಸುವ ಬೆತ್ತದ ಕೋಲು(ಅಂಕುಶಕ್ಕಿಂತ ಭಿನ್ನವಾಗಿರುತ್ತದೆ–ಪೋಲೀಸರು ಕೈಯಲ್ಲಿ ಹಿಡಿದುಕೊಳ್ಳುವ ದೊಣ್ಣೆಯನ್ನು ಹೋಲುವ ಕೋಲು).

**ಅವಪಾತ:** ಆನೆಗಳನ್ನು ಹಿಡಿಯಲೆಂದು ತೋಡಿದ ದೊಡ್ಡದಾದ ಕುಳಿ(ಖೆಡ್ಡಾ ಮೂಲಕ ಆನೆ ಹಿಡಿಯಲು ಈ ರೀತಿಯ ಕುಣಿ ತೆಗೆದು ಆನೆಗೆ ತಿಳಿಯದಂತೆ ಅದರ ಮೇಲ್ಭಾಗದಲ್ಲಿ ಬಿದರಿನ ತಟ್ಟಿ ಮುಚ್ಚಿ ಮೇಲೆ ಮಣ್ಣು ಹಾಕಲಾಗಿರುತ್ತದೆ).

**ಅಷ್ಟದಿಗ್ಗಜಗಳು:** ಐರವತ, ಪುಂಡರೀಕ, ವಾಮನ, ಕುಮುದ, ಆಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ.

**ಆನೆಗಂಪಲು:** ಆನೆಗಳು ಮೇಯುವಾಗ ಮಣ್ಣೊಳಗೆ ಹೂತು ಹೋಗುವಂತಹ ಜೌಗು ನೆಲ.

**ಆನೆಗಂಬ:** ಆನೆಯನ್ನು ಕಟ್ಟಲು ಬಳಸುವ ದೊಡ್ಡ ಕಂಬ.

**ಆನೆಗದುಪು:** ಆನೆಯ ಹಿಂಡು.

**ಆನೆ ಬೇಲ:** ಬೇಲದ ಹಣ್ಣಿನಲ್ಲಿಯೇ ಒಂದು ಜಾತಿಯ ಹಣ್ಣು. ಬೇಲದ ಹಣ್ಣಿನಲ್ಲಿ ಎರಡು ವಿಧದ ಹಣ್ಣು ಇವೆ. ಅದರಲ್ಲಿ ದೊಡ್ಡ ಗಾತ್ರದ ಹಣ್ಣನ್ನು ಆನೆ ಬೇಲವೆಂದೂ ಸಣ್ಣ ಜಾತಿಯ ಬೇಲವನ್ನು ನಾಯಿ ಬೇಲವೆಂದು ಕರೆಯಲಾಗುತ್ತದೆ.

| | |
|---|---|
| ಆರಾ: | ಅಂಕುಶಕ್ಕೆ ಇರುವ ಮತ್ತೊಂದು ಹೆಸರು |
| ಆಸನ: | ಆನೆಯ ಹೆಗಲು. |
| ಈಷಿಕಾ: | ಆನೆಯ ಕಣ್ಣಿನ ಮೇಲಿರುವ ಏಣಿನ ಭಾಗ. |
| ಉದ್ಯಾತ: | ಆನೆಯ ಕಿವಿಗಳ ಎರಡು ಪಕ್ಕದಲ್ಲಿರುವ ಅಂಗಭಾಗ. |
| ಏಕದಂತ: | ಒಂದೇ ಕೋರೆಯನ್ನು ಹೊಂದಿದ ಆನೆ. |
| ಐರಾವತ: | ಆನೆಗಳಲ್ಲಿಯೇ ಉತ್ತಮ ಜಾತಿ ಆನೆ. ಇಂದ್ರನ ವಾಹನ. |
| ಕಟ: | ಆನೆಯ ಶಿರೋಭಾಗದ ಗಂಡಸ್ಥಳ. |
| ಕದಪು: | ಆನೆಗಳ ಹಿಂಡು. |
| ಕರಿಣಿ: | ಹೆಣ್ಣಾನೆ. |
| ಕರಿಪೋತ: | ಮರಿಯಾನೆ. |
| ಕರೀರ: | ಆನೆಯ ಕೋರೆಯ ಬುಡದ ಭಾಗ. |
| ಕಲಭ: | ಆರನೇ ವಯಸ್ಸನ್ನು ತಲುಪಿದ ಆನೆ. |
| ಕುಂಭ: | ಆನೆಯ ಉಬ್ಬಿದ ಹಣೆಯ ಭಾಗ. |
| ಕುಥ: | ಆನೆಯ ಮೈಮೇಲೆ ಹೊದಿಸುವ ಬಟ್ಟೆ. |
| ಕೋಡು: | ಆನೆಯ ದಂತ, ಕೋರೆ. |
| ಖೆಡ್ಡಾ: | ಆನೆಗಳನ್ನು ಹಿಡಿಯಲು ಬಳಸುವ ಗುಳಿಯ ಭಾಗ(ಖೆಡ್ಡಾ). |
| ಗಂಡೂಷ: | ಆನೆಯ ಸೊಂಡಿಲ ತುದಿಯ ಮೇಲ್ಭಾಗ, ಸೊಂಡಿಲ ತುದಿ. |
| ಗಜಶಾಲೆ: | ಆನೆಗಳನ್ನಿರಿಸುವ ಲಾಯ. |
| ಗಜಶಿಕ್ಷೆ: | ಆನೆಗಳಿಗೆ ನೀಡುವ ದಂಡನೆ. |
| ಘೀತ್ಕಾರ: | ಆನೆಯ ಮರಿಗಳು ಜೋರಾಗಿ ಹೊರಡಿಸುವ ಧ್ವನಿ, ಕೂಗು. |
| ಘೀಳು: | ಆನೆಗಳು ಜೋರಾಗಿ ಕೂಗುವುದು, ಗೀಳಿಡುವುದು. |
| ಜವನ: | ಆನೆಯ ಬದುಕಿನ ಮೂರನೇ ಘಟ್ಟ, ನಡು ಹರೆಯ, ಯೌವನ. |
| ಜೋದ: | ಆನೆಯನ್ನು ನೋಡಿಕೊಳ್ಳುವವ, ಸಹಾಯಕ. |

ತದಕು: ಆನೆ ಇಷ್ಟಪಡುವ ಬೇಲ.

ತಾಲ: ಆನೆಯ ಗಂಟಲಿನ ಮೇಲ್ಭಾಗ, ತಾಳ.

ತುಂಬಿಲ್: ಸೊಂಡಿಲು.

ದಂತ: ಆನೆಯ ಕೋರೆ.

ದಾನ: ಮದಜಲ.

ನಿಕಚಾ: ಆನೆಯನ್ನು ಕಟ್ಟುವ ಹಗ್ಗ.

ನಿಗಳ: ಆನೆಯನ್ನು ಕಟ್ಟಲು ಬಳಸುವ ಲೋಹದ ಸರಪಳಿ.

ಪಕ್ಕರಿಕೆ: ಆನೆಗೆ ಹಾಕುವ ರಕ್ಷಾಕವಚ.

ಪಕ್ಕೆ: ಆನೆಯ ಹೊಟ್ಟೆಯ ಪಾರ್ಶ್ವಭಾಗ.

ಪರಿಕಾರ: ಆನೆಯನ್ನು ನಡೆಸಿಕೊಂಡು ಹೋಗುವವನು.

ಪಾಂಡುರೋಗ: ಆನೆಗೆ ಬರುವ ಒಂದು ರೀತಿಯ ಚರ್ಮ ರೋಗ.

ಪಾಕಲ: ಆನೆಗೆ ಬರುವ ಒಂದು ರೀತಿಯ ಜ್ವರ.

ಪಾದರೋಗ: ಪಾದಕ್ಕೆ ಬರುವ ರೋಗ, ಕಾಲಬಾಯಿ.

ಪಾಲಕಾಪ್ಯ: ಆನೆಗಳ ಕುರಿತಾಗಿ ಗಜಶಾಸ್ತ್ರ, ಹಸ್ತ್ಯಾಯುರ್ವೇದ ಗ್ರಂಥ ಬರೆದ ಋಷಿ.

ಪಿಡಿ: ಹೆಣ್ಣಾನೆ.

ಪೊರಚೆ: ಆನೆಯನ್ನು ಕಟ್ಟಲು ಬಳಸುವ ದಪ್ಪನೆಯ ಮಿಣಿ.

ಬಿಕ್ಕ: ಮೊಲೆ ಕುಡಿಯುವ ಆನೆ ಮರಿ.

ಬಿಂದು: ಆನೆಯ ಮೈಮೇಲಿನ ಬಿಳಿಯದಾದ ಕಲೆ, ಬೂದು ಬಣ್ಣದ ಚುಬ್ಬು.

ಬೆಳ್ಳಾನೆ: ಐರಾವತ, ಬಿಳಿ ದೇಹದ ಆನೆ.

ಭದ್ರ: ಶುಭ ಲಕ್ಷಣವುಳ್ಳ ಆನೆ, ಮಕ್ನಾ ಆನೆ.

ಮಖ್ನಾ: ದಂತಗಳಿರದ ಗಂಡಾನೆ.

ಮಣಕ: ವಯಸ್ಸಿಗೆ ಬಂದ ಹರೆಯದ ಹೆಣ್ಣಾನೆ.

ಮತ್ತ: ಮದಿಸಿದ ಆನೆ.

ಮದ: ಯೌವನಾವಸ್ಥೆಯ ಆನೆಗಳು ಕಪೋಲದ ಮೂಲಕ ಸುರಿಸುವ ಒಂದು ದ್ರವ, ಸೊಕ್ಕು.

ಮದಕರಿ: ಮದವೇರಿದ ಆನೆ.

ಮಾತಂಗ: ಆನೆಯ ಒಂದು ಜಾತಿ.

ಮಾವುತ: ಆನೆಯನ್ನು ಅಂಕೆಯಲ್ಲಿರಿಸಿಕೊಳ್ಳುವವನು.

ಮೊಗವಾಡ: ಆನೆಗಳ ಮುಖವನ್ನು ರಕ್ಷಿಸಲು ಹಾಕುವ ಕವಚ, ಮುಖವಾಡ.

ಯತ: ಆನೆ ಮುನ್ನೆಡಸಲು ಮಾವುತನು ಆನೆಯ ಮಗ್ಗಲುಗಳನ್ನು ಕಾಲಿನಿಂದ ತಿವಿಯುವ ಕ್ರಮ, ಯಾತ ಎಂದೂ ಸಹ ಕರೆಯಲಾಗುತ್ತದೆ.

ಲದ್ದೆ: ಆನೆಯ ಮಲ, ಸೆಗಣಿ, ಲಂಡಿಕೆ, ಲದ್ದಿ.

ವರತ್ರಾ: ಆನೆಯ ಎದೆಗೆ ಕಟ್ಟುವ ಚರ್ಮದ ಹಗ್ಗ.

ವಶಾಬಂಧ: ಹೆಣ್ಣಾನೆಗಳ ಸಹಾಯದಿಂದ ಗಂಡಾನೆಗಳನ್ನು ಬಂಧಿಸುವ ಕ್ರಮ.

ವಾರಿ: ಆನೆಯನ್ನು ಹಿಡಿಯಲು ತೋಡಿದ ಹಳ್ಳ.

ವೈಹಾಳಿ: ಆನೆಯ ಮೇಲೆ ವಿನೋದಕ್ಕಾಗಿ ಕುಳಿತು ಮಾಡುವ ಸವಾರಿ.

ವ್ಯಾಳ: ತುಂಟ ಆನೆ.

ಶಿರೋರೋಗ: ಆನೆಗಳಿಗೆ ಬರುವ ತಲೆಶೂಲೆ, ಒಂದು ಬಗೆಯ ರೋಗ.

ಶುಂಡಾ: ಆನೆಯ ಸೊಂಡಿಲು.

ಶೋಫಾ: ಆನೆಗಳಿಗೆ ಬರುವ ಒಂದು ಬಗೆಯ ರೋಗ.

ಸಜ್ಜಿತ: ಅಲಂಕಾರಗೊಂಡ ಆನೆ, ಸಜ್ಜುಗೊಂಡ ಆನೆ.

ಸಲಗ: ಆನೆಗಳ ಹಿಂಡಿನೊಳಗೆ ಮುಖ್ಯವಾದ ಆನೆ.

ಸವಡಿ: ಹೆಣ್ಣಾನೆ.

ಹಸ್ತಿ: ಆನೆ.

## ೨. ಕಾವ್ಯೋಕ್ತ ಆನೆಗಳ ಛಾಯಾಚಿತ್ರಗಳು



ಐರಾವತ ಆನೆಯು ದೇವಲೋಕದಿಂದ ಇಳಿದು ಜಂಬೂದ್ವೀಪದಲ್ಲಿ ಜಂಬೂ ವೃಕ್ಷದ ಚಿಗುರನ್ನು ತಿನ್ನುತ್ತಿರುವುದು(ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)



ಇಕ್ಷು ಸರೋವರದ ದಡದ ಮೇಲೆ ಐರಾವತ ಆನೆಯು ಇತರ ಆನೆಗಳೊಂದಿಗೆ ವಿಹರಿಸುತ್ತಿರುವುದು (ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)



ಐರಾವತವು ಶರಖರ ಸಾಳ್ವಾದಿಗಳನ್ನು ಸಂಹರಿಸಿ ಕರಿ ರಾಕ್ಷಸ ರೂಪದಿಂದ ವಿಲಾಸದಿಂದ ಕಾಲ ಕಳೆಯುತ್ತಿರುವುದು(ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)



ಇಂದ್ರ ರೂಪವನ್ನು ಧರಿಸಿದ ಉಗ್ರಬಾಹು ಐರಾವತದ ಬಳಿ ಬಂದು ಅದಕ್ಕೆ ಸಕಲೋಪಚಾರಗಳನ್ನು ಮಾಡುತ್ತಿರುವುದು(ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)



ಐರಾವತವು ಆನೆಗಳ ಸಮೂಹದೊಂದಿಗೆ ನಿದ್ರೆಯಲ್ಲಿರುವಾಗ ಸುತ್ತಲೂ ಬಲೆಯನ್ನು ಹಾಕಿ ಆನೆಗಳನ್ನು ಸೆರೆ ಹಿಡಿಯಲು ಭದ್ರಬಾಹುವಿನ ಸೈನಿಕರು ಕೂಗುಹಾಕುತ್ತಿರುವುದು(ಕೃಪೆ: ಸೌಗಂಧಿಕಾ ಪರಿಣಯ)



ಐರಾವತವು ಬೇಟೆಗಾರರು ಸುತ್ತಲೂ ಹಾಕಿದ ಬಲೆಯನ್ನು ಕಿತ್ತುಕೊಂಡು ಸರಪಳಿಯನ್ನು ಹರಿದು ರಾಕ್ಷಸರನ್ನು ಸಂಹರಿಸುತ್ತಿರುವುದು(ಕೃಪೆ: ಸೌಗಂಧಿಕಾ ಪರಿಣಯ)



ಬಂಧನದಿಂದ ಕೋಪಗೊಂಡ ಐರಾವತವು ಗಿರಿಶಿಖರಗಳನ್ನು ಸೊಂಡಿಲಿನಿಂದ ಕಿತ್ತು ಚೆಲ್ಲಾಡುತ್ತಿರುವುದನ್ನು ಉಗ್ರಬಾಹುವು ತನ್ನ ಮಂತ್ರಿಯೊಂದಿಗೆ ಸೇರಿ ನೋಡುತ್ತಿರುವುದು(ಕೃಪೆ: ಸೌಗಂಧಿಕಾ ಪರಿಣಯ)



ಇಂದ್ರ ವೇಷ ಧರಿಸಿದ ಭದ್ರಬಾಹು ಬೃಹಸ್ಪತಿ ವೇಷ ಧರಿಸಿದ ಶಂಕುಕನೊಡಗೂಡಿ ಪ್ಲವ ದ್ವೀಪಕ್ಕೆ ತೆರಳುತ್ತಿರುವುದು



ಉಗ್ರ ಬಾಹು ಶಂಕುಕನಿಂದ ಪ್ಲವ ದ್ವೀಪದ ವೃತ್ತಾಂತ ಕೇಳುತ್ತ ಬರುವಲ್ಲಿ ಪ್ಲವ ದ್ವೀಪದ ಅರಸರು ಪರಸ್ಪರ ಮಾತನಾಡಿಕೊಳ್ಳುತ್ತಿರುವುದು(ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)



ಚಂದ್ರಪೂರಿ ಪಟ್ಟಣವನ್ನು ರಕ್ಷಿಸಲು ಸೈನಿಕರು ರಾಕ್ಷಸರೊಂದಿಗೆ ಹೊರಡುತ್ತಿರುವ ದೃಶ್ಯ(ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)



ಐರಾವತ ಆನೆಯು ರಾಜಬೀದಿಯ ರಥವನ್ನು ಧ್ವಂಸಗೊಳಿಸುತ್ತಿರುವುದು (ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)



ಸೌಗಂಧಿಕ ದೇವಿ ಸುಗಂಧರಾಜನಿಗೆ ತನ್ನ ಅಭಿಪ್ರಾಯವನ್ನು ತಿಳಿಸಲು ಬರುತ್ತಿರುವ ಪ್ರಸಂಗ (ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)



ಶುಭ ಲಕ್ಷಣದಿಂದ ಕೂಡಿದ ಆನೆ (ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)



'ಹಸ್ತಿ ವಿಟಯರ್ನಡೆ' ಮಾಹುತರು ಅಂಕುಶ ಸಹಾಯದಿಂದ ನಿಯಂತ್ರಣದಲ್ಲಿಡಲು
ಆನೆಯ ದೇಹದಲ್ಲಿ ಗುರ್ತಿಸಿದ ಹಲವಾರು ನರ ಬಿಂದುಗಳು
(ಆಧಾರ: ಚೆರನಿಯಾಲ ೧೯೮೬)



ಆನೆಯ ಜಾತಿಗಳು (ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)



ಆನೆಯ ಜಾತಿಗಳು (ಚಿತ್ರ ಕೃಪೆ: ಸೌಗಂಧಿಕಾ ಪರಿಣಯ)

# ನಾಣ್ಯಗಳು



(ಚಿತ್ರ ಕೃಪೆ: ಭಾರತೀಯ ನಾಣ್ಯ ಪರಂಪರೆ)







(ಚಿತ್ರ ಕೃಪೆ: ಭಾರತೀಯ ನಾಣ್ಯ ಪರಂಪರೆ)

## ೩. ಪರಾಮರ್ಶನ ಗ್ರಂಥಗಳು


ಅಂಗಡಿ ಎಸ್.ಎಸ್.(ಸಂ), ೨೦೧೦, ಹಸ್ತಪ್ರತಿ ವ್ಯಾಸಂಗ, ಸಂಪುಟ ೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಅನಂತರಂಗಾಚಾರ್ ಎನ್.(ಸಂ), ೧೯೭೩, ಕರ್ನಾಟಕ ಪಂಚತಂತ್ರಂ, ಶಾರದಾ ಮಂದಿರ, ಮೈಸೂರು.

ಅನಂತರಂಗಾಚಾರ್ ಎನ್.(ಸಂ), ೧೯೭೩, ಪಂಪ ಭಾರತ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಅನಂತರಂಗಾಚಾರ್ ಎನ್., ೨೦೧೩, ಪಂಪಭಾರತಂ(ಗದ್ಯಾನುವಾದ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಅಂಗಡಿ ಎಸ್.ಎಸ್.(ಸಂ), ೨೦೧೦, ಹಸ್ತಪ್ರತಿ ವ್ಯಾಸಂಗ ಸಂಪುಟ–೯, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

ಉಲ್ಲಾಸ ಕಾರಂತ, ೨೦೦೧, ಕಾಡುಪ್ರಾಣಿಗಳ ಜಾಡಿನಲ್ಲಿ, ಅತ್ರಿಬುಕ್ ಸೆಂಟರ್, ಮಂಗಳೂರು.

ಎಫಿಗ್ರಾಫಿಯಾ ಕರ್ನಾಟಿಕ, ಸಂಪುಟ ೧, ೨ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಎಫಿಗ್ರಾಫಿಯಾ ಕರ್ನಾಟಿಕ, ಸಂಪುಟ ೩, ೪ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಎಫಿಗ್ರಾಫಿಯಾ ಕರ್ನಾಟಿಕ, ಸಂಪುಟ ೫, ೬, ೭, ೮, ೯, ೧೦, ೧೧, ೧೨, ೧೩, ೧೪, ೧೫, ೭ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಕರೀಂಸಾಬ್ ಎಸ್.ಕೆ., ೧೯೮೯, ಜನಪದ ವೈದ್ಯ, ಕರ್ನಾಟಕ ಯಕ್ಷಗಾನ ಅಕಾಡೆಮಿ, ಬೆಂಗಳೂರು.

ಕಲಬುರ್ಗಿ ಎಂ.ಎಂ.(ಸಂ), ೧೯೯೬, ಸರ್ವಜ್ಞ ಸೋಮೇಶ್ವರ ವಿರಚಿತ ಮಾನಸೋಲ್ಲಾಸ, ಸಂಪುಟ–೧–೨, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕಲಬುರ್ಗಿ ಎಂ.ಎಂ.(ಸಂ), ೨೦೦೨, ಹೊಸ ಕುಮಾರರಾಮನ ಸಾಂಗತ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲ್ಲಯ್ಯ ಎಸ್. ಹಿರೇಮಠ, ೨೦೦೯, ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ,(ಅಪ್ರಕಟಿತ ಪಿಎಚ್.ಡಿ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೀರ್ತಿನಾಥ ಕುರ್ತಕೋಟಿ, ೧೯೮೩, ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಕರ್ನಾಟಕ ಸರ್ಕಾರ, ಬೆಂಗಳೂರು.

ಕೀರ್ತಿನಾಥ ಕುರ್ತಕೋಟಿ, ೧೯೮೮, ನೂರು ಮರ ನೂರು ಸ್ವರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕುಂದಣಗಾರ ಕೆ.ಜಿ., ಅನಂತ ಅಣ್ಣರಾವ್ ಚೌಗತಿ, ೧೯೫೭, ಆದಿಪುರಾಣ, ಶ್ರೀ ಚಂದ್ರಪ್ರಭ ಪ್ರಿಟಿಂಗ್ ಪ್ರೆಸ್, ಬೆಳಗಾವಿ.

ಕುಲಕರ್ಣಿ ರಾ.ಕೃ.. ೧೯೮೩, ವಿಷತಂತ್ರ ಸಾಹಿತ್ಯ ಬಂಡಾರ ಹುಬ್ಬಳ್ಳಿ.

ಕುಲಕರ್ಣಿ ಆರ್.ವಿ. ೨೦೦೪, ಆಂಡಯ್ಯ ಕವಿಯ ಕಬ್ಬಿಗರ ಕಾವಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕುಲಕರ್ಣಿ ಆರ್.ವಿ., ೨೦೧೧, ಕವಿರನ್ನ ವಿರಚಿತಂ ಸಾಹಸ ಭೀಮ ವಿಜಯಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕುಲಕರ್ಣಿ ಆರ್.ವಿ., ೨೦೧೧, ನೇಮಿಚಂದ್ರ ಕವಿಕೃತ ನೇಮಿನಾಥ ಪುರಾಣಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕುವೆಂಪು, ಮಾಸ್ತಿ ವೆಂಕಟೇಶ ಅಯ್ಯಂಗಾರ್(ಸಂ) ೧೯೮೮, ಕರ್ನಾಟಕ ಭಾರತ ಕಥಾ ಮಂಜರಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಕೆರ್ನ್ ಎಚ್.(ಸಂ), ೧೮೬೫, ಬೃಹತ್ಸಂಹಿತಾ, ಬಿಬ್ಲಿಯೋಥೆಕಾ ಇಂಡಿಕಾ, ಕೊಲ್ಕತ್ತಾ

ಕೆಂಪೇಗೌಡ ಕೆ., ೨೦೧೧, ಮೂಲ ದ್ರಾವಿಡ ಭಾಷೆಗಳು, ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ, ಮೈಸೂರು

ಕೇಶವ ಭಟ್ಟ ಟಿ.(ಸಂ), ೨೦೧೨, ಶಿವಕೋಟ್ಯಾಚಾರ್ಯ ವಡ್ಡಾರಾಧನೆ(ಗದ್ಯಾನುವಾದ), ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

ಕೃಷ್ಣಕುಮಾರ್ ಸಿ.ಪಿ., ೨೦೦೬, ಜನ್ನ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೃಷ್ಣಮೂರ್ತಿ ಹನೂರು, ೧೯೮೭, ಜನಪದ ವೀರಗೀತೆಗಳು, ಜನಪದ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಕೃಷ್ಣಸ್ವಾಮಿ ಕ.ರಾ., ೧೯೬೫, ಪಾಳೇಗಾರರ ಪದಗಳು, ಜನಪದ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಕೃಷ್ಣಯ್ಯ ಶೆಟ್ಟಿ ಟಿ.ಎನ್., ಮುಹೂರ್ತ ದರ್ಪಣ ದೀಪಿಕೆ, ಕಳಾನಿಧಿ ಬುಕ್ ಡಿಪೊ, ಬೆಂಗಳೂರು.

ಕೃಷ್ಣಾ ಜೋಯಿಸ್ ಎಸ್.ಎನ್., ೧೯೫೯, ಜಾತಕ ತಿಲಕಂ, ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು.

ಕೃಷ್ಣಮೂರ್ತಿ ಕೆ.ಎಸ್., ೧೯೭೭, ತೊರವೆ ರಾಮಾಯಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕೊಸಾಂಬಿ ಡಿ.ಡಿ., ೨೦೦೨, ಶೈಲಜಾ ವೇಣುಗೋಪಾಲ ಟಿ.ಎಸ್.(ಅನು) ಪುರಾಣ ಮತ್ತು ವಾಸ್ತವ, ಚಿಂತನ ಪ್ರಕಾಶನ, ಉತ್ತರ ಕನ್ನಡ.

ಗಣಪತಿ ಶಾಸ್ತ್ರಿ ಟಿ.(ಸಂ), ೧೯೧೦, ಮಾತಂಗಲೀಲಾ, ತ್ರಿವೇಂಡ್ರಂ ಸಂಸ್ಕೃತ ಸೀರೀಸ್ ೧೦, ತ್ರಿವೇಂಡ್ರಂ.

ಗೋಪಾಕೃಷ್ಣಭಟ್ಟ ತೆಕ್ಕುಂಜೆ(ಸಂ), ಜನ್ನ ಕವಿಯ ಯಶೋಧರ ಚರಿತೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಗೌರಿ ಸುಂದರ್, ೨೦೦೬, ಮೈಸೂರು ದಸರಾ, ಸುಂದರ ಪ್ರಕಾಶನ, ಬೆಂಗಳೂರು.

ಚಂದ್ರು ಕಾಳೇನಹಳ್ಳಿ, ೧೯೯೩, ಸೋಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಚಂದ್ರಶೇಖರ ಕಂಬಾರ, ೧೯೮೫, ಕನ್ನಡ ಜನಪದ ವಿಶ್ವಕೋಶ ಸಂಪುಟ ೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಚಂದ್ರಶೇಖರ ಐತಾಳ ಗುಂಡ್ಮಿ(ಸಂ), ಕರ್ನಾಟಕ ಪಂಚತಂತ್ರಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಚಂದ್ರಶೇಖರ ಭಟ್ಟ ಪಟಾಣಕರ(ಸಂ), ೧೯೪೫, ಬ್ರಹ್ಮಾಂಡ ಪುರಾಣ, ಶ್ರೀ ಜಯಚಾಮ ರಾಜೇಂದ್ರ ಗ್ರಂಥರತ್ನಾ ಮಾಲ, ಮೈಸೂರು.

ಚನ್ನಪ್ಪ ಉತ್ತಂಗಿ(ಸಂ), ೨೦೦೪ ಸರ್ವಜ್ಞನ ತ್ರಿಪದಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಚನ್ನವೀರಪ್ಪ ಎಸ್.ಆರ್.(ಸಂ), ಹಸ್ತಪ್ರತಿ ವ್ಯಾಸಂಗ, ಸಂಪುಟ–೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಚಿದಾನಂದಮೂರ್ತಿ ಎಂ., ೧೯೭೬, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಜವರೇಗೌಡ ದೇ., ೧೯೭೧, ಬೆರಕೆಸೊಪ್ಪು, ಸುರುಚಿ ಪ್ರಕಾಶನ, ಮೈಸೂರು.

ಜೋಶಿ ಶಂ.ಬಾ., ೨೦೧೧, ಎಡೆಗಳು ಹೇಳುವ ಕಂನಾಡ ಕಥೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ಜೋಶಿ ಶಂ.ಬಾ., ೧೯೯೯, ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ ಭಾಗ ೧, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ತಳಗೇರಿ ಕೆ.ಬಿ., ೧೯೯೭, ರಾಮಧಾನ್ಯ ಚರಿತ, ವಿದ್ಯಾನಿಧಿ ಪ್ರಕಾಶನ, ಗದಗ.

ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

ದೀಕ್ಷಿತ್ ಜಿ.ಎಸ್., ರಾಮಸ್ವಾಮಿ ಬಿ., ಶ್ರೀನಿವಾಸ ರಿತ್ತಿ(ಸಂ), ೨೦೦೦, ಆಚಾರ್ಯ ಸೋಮದೇವ ವಿರಚಿತಂ ನೀತಿ ವಾಕ್ಯಾಮೃತಂ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವೀರಪ್ಪ ಎಚ್, ಪದ್ಮನಾಭ ಶರ್ಮ ಎಂ.ಸಿ.(ಸಂ), ೧೯೭೨, ಅನಂತನಾಥ ಪುರಾಣ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ದೇವುಡು ನರಸಿಂಹಶಾಸ್ತ್ರಿ, ಶಿವಮೂರ್ತಿಶಾಸ್ತ್ರಿ ಬ.(ಸಂ), ೧೯೫೬, ಕನ್ನಡ ಜೈಮಿನಿ ಭಾರತ, ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ದೇವೇಂದ್ರಪ್ಪ ಜಾಜಿ, ೨೦೦೭, ತೆಲುಗು ಸಾಹಿತ್ಯದಲ್ಲಿ ಬಸವಣ್ಣ, ಜಗಜ್ಯೋತಿ ಅಣ್ಣ ಬಸವಣ್ಣ ಪತ್ತಿನ ಸೌಹಾರ್ದ ಸಹಕಾರಿ ನಿ, ಗಂಗಾವತಿ.

ದೇವೇಂದ್ರಪ್ಪ ಜಾಜಿ, ೨೦೧೪, ಸಂಶೋಧನೆ, ಕನ್ನಡ ಸಾಹಿತ್ಯ ಪರಿಷತ್ತು, ಕೊಪ್ಪಳ.

ದಾಸೇಗೌಡ ಜಿ.ವಿ., ೨೦೦೭, ನಮ್ಮ ಜನಪದ ನಂಬಿಕೆಗಳು, ಚೇತನ ಬುಕ್ ಹೌಸ್, ಮೈಸೂರು.

ನಂಜುಂಡಸ್ವಾಮಿ ಎನ್.ಎಸ್., ಪಾಳೇಗಾರರು ಮತ್ತು ಒಡೆಯರ ಇತಿಹಾಸ, ಪುಸ್ತಕ ಪ್ರಕಾಶನ, ಧಾರವಾಡ.

ನರಸಿಂಹಾಚಾರ್ ಡಿ.ಎಲ್.(ಸಂ), ೧೯೬೫, ಸಕಲ ವೈದ್ಯ ಸಂಹಿತಾಸಾರಾರ್ಣವ, ಸಂಪುಟ ೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ನರಸಿಂಹಾಚಾರ್ ಆರ್., ೧೯೭೩, ಕರ್ನಾಟಕ ಕವಿ ಚರಿತ್ರೆ, ಸಂಪುಟ-೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ನರಸಿಂಹಮೂರ್ತಿ ಎ.ವಿ., ೨೦೦೮, ಭಾರತೀಯ ನಾಣ್ಯ ಪರಂಪರೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ನಾಗರಾಜ ಎಂ.ಜಿ., ಕೃಷ್ಣಮೂರ್ತಿ ಪಿ.ವಿ.(ಸಂ), ೨೦೦೭, ಇತಿಹಾಸ ದರ್ಶನ ಸಂಪುಟ ೨೨, ಇತಿಹಾಸ ಅಕಾಡೆಮಿ, ಬೆಂಗಳೂರು.

ನಾಗರಾಜ ಡಿ.ಆರ್., ೨೦೦೦, ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ನಾಗರಾಜಯ್ಯ ಹಂಪ, ೨೦೦೬, ರನ್ನ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನಾಯಕ ಹಾ.ಮಾ., ೧೯೯೩, ಜಾನಪದ ಸ್ವರೂಪ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಬೆಂಗಳೂರು.

ನಾರಾಯಣ ಕಿಕ್ಕೇರಿ, ೨೦೧೧, ಬುಡಕಟ್ಟು ಸಂಸ್ಕೃತಿ, ಅರಹು ಕುರುಹು ಪ್ರಕಾಶನ, ಮೈಸೂರು.

ನಾರಾಯಣ ದೀಕ್ಷಿತ, ಇ.ಆರ್., ಶ್ರೀ ಕೃಷ್ಣ ಶರ್ಮ(ಸಂ), ೧೯೬೮, ಗಜಗ್ರಹಣ ಪ್ರಕಾರ, ಓರಿಯಂಟಲ್ ರಿಸರ್ಚ್ ಇನ್ಸ್‌ಟಿಟ್ಯೂಟ್, ಶ್ರೀ ವೆಂಕಟೇಶ್ವರ ಯೂನಿವರ್ಸಿಟಿ, ತಿರುಪತಿ.

ಪಂಚಮುಖಿ, ಆರ್.ಎಸ್., ೧೯೫೪, ಮದನತಿಲಕಂ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಪರಮಶಿವಯ್ಯ ಜೀ.ಶಂ., ೧೯೭೧, ಜನಪದ ಕಾವ್ಯ ಕಥೆಗಳು, ಸುರಭಿ ಪ್ರಕಾಶನ, ಮೈಸೂರು.

ಪರಮಶಿವಮೂರ್ತಿ ಡಿ.ವಿ., ೧೯೯೯, ಕನ್ನಡ ಶಾಸನ ಶಿಲ್ಪ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪಾಲಕಾಪ್ಯ ಕೃತ, ಹಸ್ತಾಯುರ್ವೇದ ಟೀಕೆ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ಓಲೆ ಪ್ರತಿ ಸಂಖ್ಯೆ ಕೆ-೧೫೮೫, (ಅಪ್ರಕಟಿತ) ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಪಾರ್ವತಮ್ಮ ಸಿ., ೨೦೦೭, ಆದಿವಾಸಿ ಸಮುದಾಯಗಳ ಅಭಿವೃದ್ಧಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪುಟ್ಟಪ್ಪ ಕೆ.ವಿ.(ಸಂ), ೧೯೭೭, ವಿಕ್ರಮಾರ್ಜುನ ವಿಜಯಂ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಪ್ರಭಾಕರ ಎ.ಎಸ್., ೨೦೦೦, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಬಸಪ್ಪನವರ ಸಿ.ಎಚ್., ೨೦೦೫, ಗಜಗಾಮಿನಿ–ಆನೆಯ ಎಡೆಗಿನ ನಡಗೆ, ವನಸುಮ ಪ್ರಕಾಶನ, ಬೆಂಗಳೂರು.

ಬಸವರಾಜು ಎಲ್., ೨೦೧೩ ಪಂಪನ ಆದಿಪುರಾಣ ಕಥಾಮೃತ, ಗೀತಾ ಬುಕ್ ಹೌಸ್, ಮೈಸೂರು, ೨೦೧೩.

ಬಸವಾರಾಧ್ಯ ಎನ್., ೧೯೮೫, ನಂಜುಂಡ ವಿರಚಿತ ಕೃತಿಗಳು, ಗೀತಾ ಬುಕ್ ಹೌಸ್, ಮೈಸೂರು.

ಭಟ್ಟಾಚಾರ್ಯ ಎನ್.ಎಲ್., ೧೯೭೧, ಸುಶ್ರುತಾ ಸಂಹಿತೆ, ಉತ್ತರಾರ್ಧ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಭೂಸನೂರ ಮಠ ಸಂ.ಶಿ.(ಸಂ), ೧೯೬೫, ವಚನ ಸಾಹಿತ್ಯ ಸಂಗ್ರಹ, ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು.

ಭೈರೇಗೌಡ ಎಂ., ೨೦೦೫, ಕಾಡು ಬಿಡಲೊಲ್ಲದವರು, ದಾಮಿನಿ ಪ್ರಕಾಶನ, ಬೆಂಗಳೂರು.

ಮಂಗಳಾ ಶ್ರೀಧರ, ೨೦೦೮, ಬುಡಕಟ್ಟು ವೈದ್ಯ ಸಂಸ್ಕೃತಿ, ಮುದ್ದಣ ಪ್ರತಿಷ್ಠಾನ, ರಾಮನಗರ.

ಮಂಜುನಾಥನ್ ಜಿ.ಜಿ.(ಸಂ), ೧೯೭೫, ಇಮ್ಮಡಿ ಗುರುಸಿದ್ದನ ಹಾಲಾಸ್ಯ ಪುರಾಣ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಮಂಜುನಾಥನ್ ಜಿ.ಜಿ., ೧೯೮೭, ಅಭಿನವಚಂದ್ರ ವಿರಚಿತ ಅಶ್ವಶಾಸ್ತ್ರ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಮಂಜುನಾಥನ್ ಜಿ.ಜಿ.(ಸಂ), ೧೯೮೭, ಜನವಶ್ಯ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಮಂಜುನಾಥನ್ ಜಿ.ಜಿ.(ಸಂ), ೧೯೯೮, ಶಾಲಿಹೋತ್ರನ ಮತ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಮಂಜುಳಾ, ೨೦೦೬, ಕನ್ನಡದಲ್ಲಿ ಸೂಪಶಾಸ್ತ್ರ, ಭರಣಿ ಪ್ರಕಾಶನ, ಹೊಸಪೇಟೆ.

ಮರಿಯಪ್ಪ ಭಟ್ಟ, ೧೯೭೮, ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಮಹದೇವ ಸಿ., ೨೦೦೯, ಕರ್ನಾಟಕ ಪುರತತ್ವ ಶೋಧ, ಶ್ರೀಲಕ್ಷ್ಮಿ ಪ್ರಕಾಶನ, ಶ್ರೀರಂಗ ಪಟ್ಟಣ.

ಮಹದೇವ ಸಿ., ೨೦೧೫, ವಿಜಯನಗರದ ಗಾರೆಶಿಲ್ಪ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಹಲಿಂಗರಂಗ, ೧೯೨೫, ಅನುಭವಾಮೃತ, ಬೆಂಗಳೂರು ಪ್ರೆಸ್, ಬೆಂಗಳೂರು.

ಮಲ್ಲಾಪುರ ಬಿ.ವಿ., ೨೦೦೦, ಅಲಂಕಾರಶಾಸ್ತ್ರಕಾರರು: ಒಂದು ಸಮೀಕ್ಷೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಮಲ್ಲಾಪುರ ಬಿ.ವಿ., ನಯಸೇನ ಮತ್ತು ಅವನ ಕೃತಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮.

ಮಲ್ಲೆಪುರಂ ಜಿ. ವೆಂಕಟೇಶ(ಸಂ), ನಾಗವರ್ಮ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

ಮಲ್ಲೆಪುರಂ ಜಿ. ವೆಂಕಟೇಶ(ಸಂ), ಕೆಳದಿ ಬಸವರಾಜನ ಶಿವತತ್ವ ರತ್ನಾಕರ, ಸಂಪುಟ ೧–೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಾಳವಾಡ ಸ.ಸ., ೧೯೮೯, ಬಸವಣ್ಣನವರ ವಚನಗಳ ಸಂಗ್ರಹ, ಸಾಹಿತ್ಯ ಅಕಾಡೆಮಿ, ಹೊಸದೆಹಲಿ.

ಮೀನಾ ರಘುನಾಥನ್, ಮಮತ ಪಾಂಡ್ಯ(ಅನು), ಲೀಲಾ ಎನ್ ಎಸ್, ೨೦೦೧, ವಿನಾಶದಂಚಿನಲ್ಲಿ ಆನೆಗಳು, ಸೆಂಟ್ರಲ್ ಇನ್ಸ್ಟಿಟ್ಯೂಟ್ ಆಫ್ ಇಂಡಿಯನ್ ಲಾಂಗ್ವೇಜಸ್, ಮೈಸೂರು.

ಮುಗಳಿ ರಂ.ಶ್ರೀ., ೧೯೭೫, ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಸಾಹಿತ್ಯ ಪರಿಷತ್ತು; ಬೆಂಗಳೂರು.

ಮೆಳವಂಕಿ ಕೆ.ಆರ್., ಸಂಸ್ಥಾನಿಕರ ಐತಿಹಾಸಿಕ ಸಾಹಿತ್ಯ(ಅಪ್ರಕಟಿತ), ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

ರಂಗನಾಥ ಶರ್ಮ ಎನ್., ೧೯೬೭, ಶ್ರೀಮದ್ ವಾಲ್ಮೀಕಿ ರಾಮಾಯಣ, ರಾಮಾಯಣ ಪ್ರಕಾಶನ, ಬೆಂಗಳೂರು.

ರಂಗನಾಥ ಶರ್ಮ ಎನ್., ೧೯೬೭, ಅಮರಕೋಶ, ಸುವಿದ್ಯಾ ಪ್ರಕಾಶನ, ಬೆಂಗಳೂರು.

ರಂಗಸ್ವಾಮಿ ಎ., ೧೯೯೬, ಚಾವುಂಡರಾಯನ ಲೋಕೋಪಕಾರ: ಒಂದು ಅಧ್ಯಯನ, ದರ್ಶನಕೀರ್ತಿ ಪ್ರಕಾಶನ, ಮೈಸೂರು.

ರಂಗಸ್ವಾಮಿ ಎ., ೨೦೧೨, ಬುಡಕಟ್ಟು ಜಾನಪದ, ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ, ಮೈಸೂರು.

ರವೀಂದ್ರನಾಥ ಕೆ., ೨೦೧೪, ಕನ್ನಡ ದಾಖಲು ಸಾಹಿತ್ಯ, ಮಂಗಳಾ ಪ್ರಕಾಶನ ಹೊಸಪೇಟೆ.

ರವೀಂದ್ರನಾಥ ಕೆ., ೨೦೦೩, ಅಗ್ನಿದಿವ್ಯ, ಅಮರ ಪ್ರಕಾಶನ, ಗುಲಬರ್ಗಾ.

ರವೀಂದ್ರನಾಥ ಕೆ.(ಸಂ), ೨೦೧೨, ಹಸ್ತಪ್ರತಿ ವ್ಯಾಸಂಗ ಸಂಪುಟ-೧೧. ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರವೀಂದ್ರನಾಥ ಕೆ.(ಸಂ), ೨೦೧೨, ಹಸ್ತಪ್ರತಿ ವ್ಯಾಸಂಗ ಸಂಪುಟ-೧೨. ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಜಾರಾಮ ಹೆಗಡೆ(ಸಂ), ೨೦೦೨, ಭಾರತೀಯ ಇತಿಹಾಸ-ಸಮಾಜ ಮತ್ತು ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ರಾಮಕೃಷ್ಣ ಭಟ್(ಸಂ), ೧೯೮೪, ವರಹಾಮೀರನ ಬೃಹತ್‌ಸಂಹಿತೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ರಾಜಶೇಖರ ಜಮದಂಡಿ, ೨೦೦೪, ಸರ್ವಜ್ಞನ ವಚನಗಳು: ಒಂದು ಜಾನಪದೀಯ ಅಧ್ಯಯನ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು.

ರಾಜರತ್ನಂ ಜಿ.ಪಿ., ೨೦೦೭, ಹೆಂಡದ ಮಡಕೆ ಮೊದಲಾದ ಬೋಧಿಸತ್ವನ ಕಥೆಗಳು, ಸಪ್ನ ಬುಕ್ ಹೌಸ್, ಬೆಂಗಳೂರು.

ರಾಜರತ್ನಂ ಜಿ.ಪಿ., ೨೦೦೭, ತುಂಟ ಗಣಪತಿ, ಸಪ್ನ ಬುಕ್ ಹೌಸ್, ಬೆಂಗಳೂರು.

ರಾಜರತ್ನಂ ಜಿ.ಪಿ., ೨೦೦೭, ಆರು ಕೊಂಬಿನ ಆನೆ ಮೊದಲಾದ ಬೋಧಿಸತ್ವನ ಕಥೆಗಳು, ಸಪ್ನ ಬುಕ್ ಹೌಸ್, ಬೆಂಗಳೂರು.

ರಾಜೇಂದ್ರ ಡಿ.ಕೆ.(ಸಂ), ೧೯೭೫, ನಮ್ಮ ಸುತ್ತಿನ ನಂಬಿಕೆಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ರಾಮಚಂದ್ರರಾವ್ ಎಸ್.ಕೆ., ೧೯೮೦, ಕನ್ನಡ ನಾಡಿನಲ್ಲಿ ಆಯುರ್ವೇದ, ಐಬಿಎಚ್ ಪ್ರಕಾಶನ, ಬೆಂಗಳೂರು.

ರಾಮರಾವ್ ಎಸ್. ಜ್ಯೋತಿ, ೧೯೮೯, ದನಗಳ ರೋಗಗಳು ಮತ್ತು ಅವುಗಳ ನಿವಾರಣೋಪಾಯಗಳು, ಸಮಾಜ ಪುಸ್ತಕಾಲಯ, ಧಾರವಾಡ.

ರಾಮಸ್ವಾಮಿ ಎಂ., ೧೯೯೧, ಜ್ಯೋತಿಷ್ಯ ಸಾರ ಸಂಗ್ರಹ, ಗೀತಾ ಬುಕ್ ಹೌಸ್, ಮೈಸೂರು.

ರಾಮೇಗೌಡ, ೧೯೯೨, ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು, ಚಿತ್ರಕೂಟ, ಮೈಸೂರು.

ರಹಮತ್ ತರೀಕೆರೆ(ಸಂ), ೨೦೦೦, ಕವಿರಾಜಮಾರ್ಗ: ಸಾಂಸ್ಕೃತಿಕ ಮುಖಾಮುಖಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಹಮತ್ ತರೀಕೆರೆ, ೨೦೦೪, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ರುದ್ರಪ್ಪ ನಿಷ್ಠಿ, ೨೦೧೩, ಕರತೇಜ ದರ್ಪಣ, ಶ್ರೀ ಪ್ರಭುದೇವರ ಸಂಸ್ಥಾನ ಮಠ, ಸಂಡೂರು.

ವಸಂತಕುಮಾರ್ ಎಂ.ಸಿ., ೧೯೭೨, ಜನಪದ ನಂಬಿಕೆಗಳು, ಪ್ರಬುದ್ಧ ಪ್ರಕಾಶನ, ಮೈಸೂರು.

ವಸುಂಧರಾ ಫಿಲಿಯೋಜಾ, ೧೯೮೦, ವಿಜಯನಗರ ಸಾಮ್ರಾಜ್ಯ ಸ್ಥಾಪನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ವಿಲಿಯಮ್ಸ್ ಲೆಫ್ಟಿನೆಂಟ್ ಕರ್ನಲ್, ೧೯೪೨, ಗಜೇಂದ್ರಲೋಕ, ಎನ್.ಎಸ್. ವಾಸನ್ ಅಂಡ್ ಕೊ, ಬೆಂಗಳೂರು.

ವಿಲಿಯಂ ಜಿ. ಗೂಡ್,(ಅನು) ಶಿವಮೂರ್ತಿ ಎಂ., ೧೯೯೫, ಸಾಮಾಜಿಕ ಸಂಶೋಧನೆ ವಿಧಾನಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ವಿವೇಕ ರೈ ಬಿ.ಎ., ೧೯೮೧, ಕರ್ನಾಟಕ ಜನಪದ ನಂಬಿಕೆಗಳು, ಬೆಂಗಳೂರು ವಿಶ್ವವಿದ್ಯಾಲಯ.

ವೀರಣ್ಣ ಸಿ., ೧೯೮೬, ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ, ಪ್ರಾಚೀನ ಸಾಹಿತ್ಯ ಸಂಪುಟ ೧, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ವೆಂಕಟಾಚಲ ಶಾಸ್ತ್ರಿ, ನಾಗರಾಜರಾವ್ ಎಚ್.ವಿ.(ಸಂ), ೨೦೦೭, ಗಂಗರಾಜ ಶಿವಮಾರನ ಕಲ್ಪನಾರತ್ನಂ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು.

ವೆಂಕಟಾಚಲ ಶಾಸ್ತ್ರೀ ಟಿ.ವಿ., ೨೦೧೧, ಗಜಶಾಸ್ತ್ರ ಶಬ್ದಕೋಶ, ಸಿದ್ಧಲಿಂಗೇಶ್ವರ ಬುಕ್ ಡಿಪೊ, ಗುಲ್ಬರ್ಗಾ.

ವೆಂಕಟನಾಥಾಚಾರ್ಯ ಎನ್.ಎಸ್.(ಸಂ), ೧೯೮೬, ಕೌಟಲೀಯಾರ್ಥಶಾಸ್ತ್ರಮ್, ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು.

ವೆಂಕಟರಾಮಪ್ಪ ಕೆ., ೧೯೭೪, ಕನ್ನಡ ಸಾಹಿತ್ಯ ಚರಿತ್ರೆ, ಶಾರದಾ ಮಂದಿರ, ಬೆಂಗಳೂರು.

ವೆಂಕಟರಾಮಪ್ಪ ಕೆ.(ಸಂ), ೧೯೭ ಧರ್ಮಾಮೃತಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ವೆಂಕಟರಾವ್ ಎ, ಶೇಷಯ್ಯಂಗಾರ್ ಎಚ್. (ಸಂ), ೧೯೪೨, ಖಗೇಂದ್ರ ಮಣಿದರ್ಪಣಂ, ಮದ್ರಾಸ್ ಯೂನಿವರ್ಸಿಟಿ ಪ್ರೆಸ್, ಮದ್ರಾಸ್.

ಶಂಕರನಾರಾಯಣ ತೀ.ನಂ.(ಸಂ), ಕರ್ನಾಟಕ ಜನಪದ ಮಹಾಕಾವ್ಯಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ಶಾಮರಾಯ ತ.ಸು.(ಸಂ), ೧೯೭೧, ಕುಮಾರವ್ಯಾಸ ಭಾರತ; ಸಾಹಿತ್ಯ ಅಕಾಡೆಮಿ, ನವದೆಹಲಿ.

ಶಾಮಶಾಸ್ತ್ರಿ ಆರ್.(ಸಂ), ೧೯೭೧, ಕಂಠೀರವ ನರಸರಾಜ ವಿಜಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಶಿವಬಸವಸ್ವಾಮಿ(ಸಂ), ೧೯೪೬, ಕಾಲಜ್ಞಾನ ಸಾಹಿತ್ಯ ಸಂಗ್ರಹ, ಶಿವಶರಣ ವಾಙ್ಞಯ ಪ್ರಕಾಶನ, ಮೈಸೂರು.

ಶಿವನಂಜಯ್ಯ ಜಿ.ಎಂ., ೨೦೧೦, ರಾಮನಗರ ಜಿಲ್ಲೆಯ ಪ್ರವಾಸಿ ತಾಣಗಳು, ಅಕ್ಷಯ ಪ್ರಕಾಶನ, ರಾಮನಗರ.

ಶಿವರುದ್ರಪ್ಪ ಜಿ. ಎಸ್.(ಸಂ), ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಶಿವರುದ್ರಸ್ವಾಮಿ ಎಸ್.ಎನ್., ೨೦೦೦, ಬಯಕಾರ ರಾಮಪ್ಪ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀಕಂಠಯ್ಯ ತೀ.ನಂ., ೧೯೭೪, ಸಮಾಲೋಕನ, ಶಾರದಾ ಮಂದಿರ, ಮೈಸೂರು.

ಶ್ರೀಕಂಠ ಶಾಸ್ತ್ರೀ(ಸಂ), ೧೯೫೪; ಭಾರತೀಯ ಸಂಸ್ಕೃತಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಶ್ರೀ ಕೃಷ್ಣಶರ್ಮ ಇ.ಆರ್.(ಸಂ), ನಾರದ ಮುನಿಯ ಗಜಶಿಕ್ಷಾ, ಓರಿಯಂಟಲ್ ರಿಸರ್ಚ್ ಇನ್ಸಿಟಿಟ್ಯೂಟ್, ಶ್ರೀ ವೆಂಕಟೇಶ್ವರ ಯೂನಿವರ್ಸಿಟಿ, ತಿರುಪತಿ.

ಶ್ರೀ ಚಂದ್ರ ವಿಜಯ, ಗಣಿ(ಸಂ), ೨೦೦೩, ಹೇಮಚಂದ್ರನ ಅಭಿದಾನ ಚಿಂತಾಮಣಿ ದರ್ಪಣ, ಶ್ರೀ ರಾಂಧೇರ್ ರೋಡ್ ಜೈನ್ ಸಂಘ, ಸೂರತ್, ಗುಜರಾತ್.

ಶ್ರೀಧರ ಎಚ್., ೨೦೦೨, ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧ ಕಲೆ, ಶಿವರಾಮ ಕಾರಂತ ಅಧ್ಯಯನ ಕೇಂದ್ರ, ಪುತ್ತೂರು.

ಶ್ರೀಮತಿ ಎಚ್.ಎಸ್.(ಸಂ), ೨೦೦೪, ಸೌಗಂಧಿಕಾ ಪರಿಣಯ, ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಶ್ರೀನಿವಾಸಾಚಾರ್ ಡಿ., ನರಸಿಂಹಾಚಾರ್ ಡಿ.ಎಲ್.(ಸಂ), ೧೯೫೦, ಲೋಕೋಪಕಾರಂ, ಗೌವರನ್ಮೆಂಟ್ ಓರಿಯಂಟಲ್ ಹಸ್ತಪ್ರತಿ ಭಂಡಾರ, ಮದ್ರಾಸ್.

ಶೇಷಯ್ಯಂಗಾರ್ ಎಚ್.(ಸಂ), ೧೯೫೦, ರಟ್ಟಮತ, ಗೌವರನ್ಮೆಂಟ್ ಓರಿಯಂಟಲ್ ಹಸ್ತಪ್ರತಿ ಭಂಡಾರ, ಮದ್ರಾಸ್.

ಶೇಷಯ್ಯಂಗಾರ್ ಎಚ್.(ಸಂ), ೨೦೦೩, ಓಕೋಪಕಾರಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಶೇಷಾಯ್ಯಂಗಾರ್ ಎಚ್.(ಸಂ), ೧೯೮೭, ರತ್ನಾಕರಾಧೀಶ್ವರ ಶತಕ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಸಂಗೀತಾ ಎಸ್. ಹೊನ್ನಳ್ಳಿ, ಕನ್ನಡ ಶಾಸನ ಪರಿಭಾಷೆ: ಸಾಂಸ್ಕೃತಿಕ ಅಧ್ಯಯನ, ೨೦೦೫, ಅಮರ ಪ್ರಕಾಶನ, ಗುಲ್ಬರ್ಗಾ.

ಸಣ್ಣಯ್ಯ ಬಿ.ಎಸ್. ರಾಮೇಗೌಡ(ಸಂ), ೧೯೮೫, ಸಾಹಸಭೀಮ ವಿಜಯಂ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಸರಜೂ ಕಾಟ್ಕರ್, ೨೦೦೬, ಶಿವಾಜಿ ಮೂಲ ಕನ್ನಡ ನೆಲ, ಲೋಹಿಯಾ ಪ್ರಕಾಶನ, ಬಳ್ಳಾರಿ.

ಸೀತಾರಾಮಯ್ಯ ಎಚ್.(ಸಂ), ೧೯೫೦, ಸೂಪಶಾಸ್ತ್ರಂ, ಗೌವರನ್ಮೆಂಟ್ ಓರಿಯಂಟಲ್ ಹಸ್ತಪ್ರತಿ ಭಂಡಾರ, ಮದ್ರಾಸ್.

ಸೀತಾರಾಮಯ್ಯ ಎಚ್., ಬ್ರಹ್ಮಪ್ಪ ಜಿ.(ಸಂ), ಕವಿರಾಜಮಾರ್ಗ ಶ್ರೀ ವಿಜಯ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

ಸೀತಾರಾಮಯ್ಯ ಎಂ.ವಿ.(ಸಂ), ೧೯೮೩, ಶ್ರೀಕೃಷ್ಣ ದೇವರಾಯನ ದಿನಚರಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

ಸುಬ್ರಹ್ಮಣ್ಯ ಶಾಸ್ತ್ರಿ ಕೆ.ಎಸ್.(ಸಂ), ಪಾಲಕಾಪ್ಯನ ಗಜಶಾಸ್ತ್ರ, ಸರಸ್ವತಿ ಮಹಲ್ ಲೈಬ್ರರಿ, ತಂಜಾವೂರ್.

ಹಳ್ಳಿಕೇರಿ ಎಫ್.ಟಿ.(ಸಂ), ೨೦೦೮, ಎಮ್ಮೆಬಸವನ ಕಾಲಜ್ಞಾನ ಸಾಹಿತ್ಯ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹಳ್ಳಿಕೇರಿ ಎಫ್.ಟಿ.(ಸಂ), ೨೦೦೩, ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹಳ್ಳಿಕೇರಿ ಎಫ್.ಟಿ.(ಸಂ), ೨೦೦೬, ಹಸ್ತಪ್ರತಿ ವ್ಯಾಸಂಗ, ಸಂಪುಟ ೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹಳ್ಳಿಕೇರಿ ಎಫ್.ಟಿ.(ಸಂ), ೨೦೦೮, ಹಸ್ತಪ್ರತಿ ಸೂಚಿ ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹಳ್ಳಿಕೇರಿ ಎಫ್.ಟಿ., ರವೀಂದ್ರನಾಥ ಕೆ.(ಸಂ), ೨೦೦೪, ಹಸ್ತಪ್ರತಿ ವ್ಯಾಸಂಗ ಸಂಪುಟ ೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹಳ್ಳಿಕೇರಿ ಎಫ್.ಟಿ.(ಸಂ), ೨೦೦೮, ಹಸ್ತಪ್ರತಿ ವ್ಯಾಸಂಗ, ಸಂಪುಟ ೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹಿರಿಯಣ್ಣ ಅಂಬಳಿಕೆ, ೧೯೭೮, ಮಲೆನಾಡ ಜಾನಪದ ಸಂಪ್ರದಾಯಗಳು, ಪುಸ್ತಕ ಚಿಲುಮೆ ಪ್ರಕಾಶನ, ಮೈಸೂರು.

ಹಿರೇಮಠ ಎಸ್.ಎಂ.(ಸಂ), ೧೯೯೮, ಶಾಸನಾಧ್ಯಯನ ಉಲ್ಲೇಖ, ವಿದ್ಯಾನಿಧಿ ಪ್ರಕಾಶನ, ಗದಗ.

## ಇಂಗ್ಲಿಷ್

Ananth Krishna Iyer, 1922, The Mysore Tribes and Castes , Mittal Publications, New Delhi.

Annual Report on Indian Epigraphy.

Annual Report on South Indian Epigraphy.

Bhasam A L, (Ed) 1991, A Cultural History of India, Oxford University Press, Delhi.

Bose N K, 1967, Cultural society in India, Asia Publishing House, Delhi.

Burton Stein, 1993, Vijayanagara, Foundation Books, New Delhi.

Desai P B (Ed) 1981, A History of Karnataka, Karnataka University, Dharwad.

Dorson R M (Ed) 1972, Folk lore and Folk life, Chicago University Press, Chicago.

Devid Arnold, Ramachandra Guha, (Ed) 1995, Nature Culture Imperialism, Essay. on the Environmental History of South India, Oxford University Press, Oxford.

Elliot and Dowson, 1953, The History of India, Madras.

Evans G H, 1950, Elephant and their Diseases, Rangoon.

James Emarson tenet, 1967, Wild Elephant and the Method of Capturing and Triningthem in Ceylon, Landan.

Kittel F, 1982, Derivation of Elephant, Indian Antiquary, Bangalore.

Luiz A A D, 1961, Tribes in Mysore, CS vishva &co, Bangalore.

Metry K M (ed) 2011, Forest Blossoms and The Concrete Jungle, Kannada University, Hampi.

Minakshi C, 1938, Elephant lore in Pallava History.

Nirmal Kumar Bose, 2002, Tribal life in India, National Book Trust, Delhi.

Nitish Kumar, Abha Malik, 2007, Indian Art and Culture, Arihant Publication, Guwahathi.

Ravindranath Rao Y. 2003, Tribal Tradition and Change in South India, Mangalore Publication, Mangalore.

Robort C. Kashi N, 1977, Man, Cuture and Settlement, Singh PS Publications, New Delhi.

Ramesh Bedi, 1996, Elephant Lord in jungle, National Book Trust, New Delhi.

Raman Sukumar, 2000, Elephants – Days and Nights, Oxford University Press.

Raman Sukumar, 2000 The Asian Elephant – Ecology and Management, Cambridge University Press, New Delhi.

Raman Sukumar, 2003, The Living Elephants , Evolutionary, Behaviour and Conservation, Oxford University Press, New Delhi.

Sanderson G P, 1896, Thirteen Years among the Wild Beasts of India, Londan.

Sachidanandan, 2003, Encyclopedia Profile of Indian Tribes Vol –II, Discovery Publication, Delhi.

Tim Ingold, 1988, Hunters, Pastoralist and Ranchers, Cosmo Publications, New Delhi.

Whiehead Henry 1992, The Villege Gods of South India, AES Reprint, Delhi.

**ಪತ್ರಿಕೆಗಳು**

ಪ್ರಜಾವಾಣಿ ದಿನಪತ್ರಿಕೆ

ವಿಜಯಕರ್ನಾಟಕ ದಿನಪತ್ರಿಕೆ

ವಿಜಯವಾಣಿ ದಿನಪತ್ರಿಕೆ

ಕನ್ನಡಪ್ರಭ ದಿನಪತ್ರಿಕೆ

ಅಂತರ್ಜಾಲ ಮಾಹಿತಿ

ಮೈಸೂರು ದಸರ ಜಂಬೂಸವಾರಿಯಲ್ಲಿ ಅಂಬಾರಿ ಹೊತ್ತ ಅರ್ಜುನ
ಮತ್ತು ಮೆರವಣಿಗೆಯಲ್ಲಿ ಪಾಲ್ಗೊಂಡ ಆನೆಗಳು








ಆನೆಗಳನ್ನು ಮಾವುತರು ಸ್ನಾನ ಮಾಡಿಸುತ್ತಿರುವುದು.







ವಿವಿಧ ಭಂಗಿಯಲ್ಲಿ ಆನೆಗಳ ಚಿತ್ರ.









ಮರಿ ಆನೆಯು ತಾಯಿಯೊಂದಿಗೆ ಆಹಾರ ಸೇವಿಸುತ್ತಿರುವುದು.





ಆನೆಗಳನ್ನು ಮಾವುತರು ಆರೈಕೆ ಮಾಡುತ್ತಿರುವ ಚಿತ್ರ .





ಆನೆಗಳನ್ನು ಕೆಲಸಕಾರ್ಯಕ್ಕೆ ಬಳಸಿಕೊಳ್ಳುತ್ತಿರುವುದು.








ಹಂಪೆಯ ಕಲ್ಲಿನ ರಥ ಎಳೆಯುತ್ತಿರುವ ಆನೆಯ ಶಿಲ್ಪ


ಹಂಪೆಯ ಆನೆಲಾಯ.


ಹಂಪೆಯ ಹಜಾರ ರಾಮ ದೇವಸ್ಥಾನದಲ್ಲಿರುವ ಆನೆ ಉಬ್ಬುಶಿಲ್ಪ.



ಹಂಪೆಯ ಮಹಾನವಮಿ ದಿಬ್ಬದಲ್ಲಿ ಕಂಡುಬರುವ ಆನೆಯ ಉಬ್ಬುಶಿಲ್ಪ.



ಹಂಪೆಯ ಹಜಾರ ರಾಮ ದೇವಾಲಯದಲ್ಲಿ ರಾಮಾಯಣದ
ಸೀತೆ ಮತ್ತು ಸಹೋದರಿಯರನ್ನು ಹೊತ್ತಿರುವ ಆನೆಯ ಉಬ್ಬುಶಿಲ್ಪ.



ಹಂಪೆಯ ಹಜಾರ ರಾಮ ದೇವಾಲಯದ ಗೋಡೆಯ ತಳಭಾಗದಲ್ಲಿ ಆನೆಸಾಲಿನ ಉಬ್ಬುಶಿಲ್ಪ.

